ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೫೬
ಸಾಹಿತ್ಯಮಾಲೆ - ೫೨

ಪ್ರಧಾನ ಸಂಪಾದಕರು
**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು
**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

(ಸಂಪುಟ ೬)

(ಲಂಬಕ: ಸೂರ್ಯಪ್ರಭ)

# ಕಥಾಸರಿತ್ಸಾಗರ

(ಸಂಪುಟ ೬)

(ಲಂಬಕ: ಸೂರ್ಯಪ್ರಭ)

ಸಂಸ್ಕೃತ ಮೂಲ

**ಸೋಮದೇವ ಭಟ್ಟ**

ಕನ್ನಡ ಅನುವಾದ

**ಡಾ. ಎಸ್.ಆರ್. ಲೀಲಾ**

**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 6)** by **Somadeva Bhatta**, consisting of Book 8 - Suryaprabha; Kannada translation by **Dr. S.R. Leela**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xxiv + 256; Price: Rs. 100/-.



ಮುದ್ರಣ : ೨೦೦೮
ಪುಟಗಳು : xxiv + ೨೫೬
ಬೆಲೆ : ರೂ. ೧೦೦/–

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೬೬೬೦

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ|| ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೭೨೪

**ಬಿ.ಎಸ್.ಯಡಿಯೂರಪ್ಪ**
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು – ೫೬೦ ೦೦೧

ನಂ. ಸಿ.ಎಂ. ೧೭೧. ಪಿ.ಎಸ್.ಎಸ್. ೦೮

ದಿನಾಂಕ : ೦೪–೧೦–೨೦೦೮

# ಮುನ್ನುಡಿ

ರಾಷ್ಟ್ರಕವಿ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿತವಾಗಿರುವ 'ಶ್ರೀ ಕುವೆಂಪು ಭಾಷಾಭಾರತಿ'ಯ ಅಂಗವಾಗಿ ಕರ್ನಾಟಕ ಸರ್ಕಾರ ೨೦೦೫ರಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಿತು. ಅನುವಾದ ಕಾರ್ಯಚಟುವಟಿಕೆಗಳಿಗಾಗಿ ಅಕಾಡೆಮಿಯೊಂದನ್ನು ಸ್ಥಾಪಿಸಿದ ಮೊದಲ ರಾಜ್ಯ ಕರ್ನಾಟಕ ಎಂಬುದು ಹೆಮ್ಮೆಯ ಸಂಗತಿ.

ಭಾರತೀಯ ಭಾಷೆಗಳ ನಡುವೆ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದು, ನಮ್ಮ ನಾಡು–ನುಡಿಗಳ ಹಿರಿಮೆ ವೈಶಿಷ್ಟ್ಯವನ್ನು ಇತರ ಭಾಷಾ–ಬಾಂಧವರಿಗೆ ಪರಿಚಯಿಸಿಕೊಡುವುದು ಜಾಗತಿಕ ಮಹತ್ವದ ಕೃತಿಗಳನ್ನು ಜಾಗತಿಕ ಮಹತ್ವದ ಇತರ ಭಾಷೆಗಳಿಗೆ ಅನುವಾದಿಸಿಕೊಡುವುದು ಅಕಾಡೆಮಿಯ ಸ್ಥಾಪನೆಯ ಮುಖ್ಯ ಉದ್ದೇಶ.

'ಶ್ರೀ ಕುವೆಂಪು ಭಾಷಾಭಾರತಿ'ಯ ಬಹುಮುಖ್ಯವಾದ ಚಟುವಟಿಕೆಗಳು ಸದ್ಯದಲ್ಲಿಯೇ ಆರಂಭಗೊಂಡು ಕರ್ನಾಟಕದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ದಿಕ್ಕು–ದೆಸೆಗಳನ್ನು ತೆರೆದು ತೋರಲಿ ಎಂದು ಆಶಿಸುತ್ತೇನೆ.

ಅನುವಾದ ಸಾಹಿತ್ಯ ಅಕಾಡೆಮಿ ಮುಂಬರುವ ವರ್ಷಗಳಲ್ಲಿ ಮತ್ತಷ್ಟು ಅರ್ಥಪೂರ್ಣವಾದ ಚಟುವಟಿಕೆಗಳನ್ನು ಹಮ್ಮಿಕೊಂಡು ವಿಶ್ವದ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಒದಗಿಸಿಕೊಡುವ ಕೆಲಸವನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಬೆಳವಣಿಗೆಯನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಕೆಲಸಗಳನ್ನು ಮಾಡಲಿ ಎಂದು ಹಾರೈಸುತ್ತೇನೆ.

(ಬಿ.ಎಸ್.ಯಡಿಯೂರಪ್ಪ)

ಕರ್ನಾಟಕ ಸರ್ಕಾರ

**ಶ್ರೀ ಸುಬೀರ್ ಹರಿಸಿಂಗ್,** ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ವಿಕಾಸಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೪–೧೦–೨೦೦೮

# ಶುಭಾಕಾಂಕ್ಷೆ

ಶ್ರೀ ಕುವೆಂಪು ಭಾಷಾಭಾರತಿಯ ಅಂಗವಾಗಿ ಕರ್ನಾಟಕ ಸರ್ಕಾರ ಅಸ್ತಿತ್ವಕ್ಕೆ ತಂದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕೆಲವೇ ವರ್ಷಗಳ ಅವಧಿಯಲ್ಲಿ ಗಮನಾರ್ಹವಾದ ಕೆಲಸವನ್ನು ಮಾಡಿದೆ ಎಂಬುದನ್ನು ಕರ್ನಾಟಕದ ಜನತೆ ಈಗಾಗಲೇ ಗಮನಿಸಿ ತನ್ನ ಮೆಚ್ಚುಗೆಯನ್ನು ಸೂಚಿಸುತ್ತಾ ಬಂದಿದೆ ಎಂಬುದು ಸಂತೋಷಕರ ಸಂಗತಿಯೇ ಆಗಿದೆ. ಇತ್ತ ಕೇಂದ್ರ ಸರ್ಕಾರ "ರಾಷ್ಟ್ರೀಯ ಜ್ಞಾನ ಆಯೋಗ'ವನ್ನು ಸ್ಥಾಪಿಸಿದ್ದು, ಅದರ ಅಂಗವಾಗಿ "ರಾಷ್ಟ್ರೀಯ ಅನುವಾದ ಮಿಷನ್'ನ ಕಾರ್ಯಚಟುವಟಿಕೆಗಳು ಆರಂಭವಾಗಲಿರುವುದು ನಮ್ಮ ನಾಡಿನ ಇತಿಹಾಸದಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಲಿದೆ ಎಂದು ನಾನು ನಂಬಿದ್ದೇನೆ. ಈ ದಿಕ್ಕಿನಲ್ಲಿ ಮೊದಲ ಹೆಜ್ಜೆಯನ್ನಿರಿಸಿದ ಗೌರವ ಕರ್ನಾಟಕದ್ದಾಗಿದೆ ಎಂಬುದು ನಮಗೆ ಸಂತೋಷದ ಹಾಗೂ ಗೌರವದ ವಿಚಾರವೇ ಆಗಿದೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈಗಾಗಲೇ ಹಲವಾರು ಮಹತ್ವದ ಯೋಜನೆಗಳನ್ನು ಕೈಗೊಂಡಿದೆ. ಅವುಗಳಲ್ಲಿ ಮುಖ್ಯವಾಗಿರುವುದೆಂದರೆ ವಿಲ್ ಡ್ಯೂರಾಂಟ್ ಅವರ "ನಾಗರಿಕತೆಯ ಕಥೆ' ಸಂಪುಟಗಳ ಕನ್ನಡ ಆವೃತ್ತಿಯನ್ನು ಹೊರತರುತ್ತಿರುವುದು. ಭಾರತೀಯ ಭಾಷೆಗಳಲ್ಲಿಯೇ ಮೊದಲ ಬಾರಿಗೆ ಇಂಥ ಯೋಜನೆಯನ್ನು ಹಮ್ಮಿಕೊಂಡಿರುವ ಹಿರಿಮೆಯೂ ಕರ್ನಾಟಕದ್ದಾಗಿದೆ. ವಿವಿಧ ಭಾಷಾ ಸಾಹಿತ್ಯಗಳ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಹೊರತರುವುದರ ಜೊತೆಗೆ, ಕನ್ನಡದ ಮಹತ್ವದ ಕೃತಿಗಳನ್ನು ರಾಷ್ಟ್ರೀಯ ಮತ್ತು ಜಾಗತಿಕ ಸ್ತರದಲ್ಲಿ ಪರಿಚಯಿಸಿಕೊಡುವ ವಿಶಿಷ್ಟ ಕಾರ್ಯಕ್ರಮಗಳನ್ನೂ ಈ ಸಂಸ್ಥೆ ಕೈಗೊಳ್ಳಬೇಕಾಗಿದೆ. ಇದರ ಜೊತೆಗೆ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಕ್ಕೂ ಮಹತ್ವದ ಕೊಡುಗೆಯನ್ನು ನೀಡುವ ಉದ್ದೇಶದಿಂದ ಜೆ.ಡಿ.ಬರ್ನಾಲ್ ಅವರ "ವಿಜ್ಞಾನದ ಇತಿಹಾಸ' (Science in History)ದ ನಾಲ್ಕು ಸಂಪುಟಗಳನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದ ನೂರಾರು ಮಹತ್ವದ ಕೃತಿಗಳನ್ನು ತರುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ ಎಂಬುದು ವೈಯಕ್ತಿಕವಾಗಿಯೂ ನನಗೆ ವಿಶೇಷ ಸಂತೋಷದ ಸಂಗತಿಯೇ ಆಗಿದೆ. ಇಂಥ ಮಹತ್ವದ ಯೋಜನೆಗಳ ಮೂಲಕ ಶ್ರೀ ಕುವೆಂಪು ಭಾಷಾಭಾರತಿ ಮತ್ತು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕರ್ನಾಟಕದ ಜನತೆಗೆ ಸ್ಮರಣೀಯ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಹಾರೈಸುತ್ತೇನೆ. ಈ ಬಗೆಯ ಬಹುಮುಖವಾದ ಕಾರ್ಯಚಟುವಟಿಕೆಗಳನ್ನು ಕರ್ನಾಟಕದ ಜನತೆ ಮುಕ್ತ ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

(ಶ್ರೀ ಸುಬೀರ್ ಹರಿಸಿಂಗ್, ಭಾ.ಆ.ಸೇ.,)

ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

ಕರ್ನಾಟಕ ಸರ್ಕಾರ

**ಶ್ರೀ ಮನು ಬಳಿಗಾರ್**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ದಿನಾಂಕ : ೦೪–೧೦–೨೦೦೮

# ಪ್ರಾಸ್ತಾವಿಕ ನುಡಿ

ಕರ್ನಾಟಕ ಸರ್ಕಾರ ೨೦೦೫ರಲ್ಲಿ ಸ್ಥಾಪಿಸಿದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕಳೆದ ಮೂರು ವರ್ಷಗಳ ಅಲ್ಪಾವಧಿಯಲ್ಲಿ ಮಾಡಿರುವ ಕಾರ್ಯವನ್ನು ನಾನು ಗಮನಿಸುತ್ತ ಬಂದಿದ್ದೇನೆ. ಅನುವಾದ ಸಂಬಂಧವಾದ ಕಮ್ಮಟಗಳು ಮತ್ತು ತರಬೇತಿ ಕಾರ್ಯಕ್ರಮಗಳ ಜೊತೆಗೆ, ಈಗ್ಗೆ ಕೆಲವು ತಿಂಗಳುಗಳ ಹಿಂದಷ್ಟೇ ಈ ಅಕಾಡೆಮಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ, ಒಮ್ಮೆಲೇ ಐವತ್ತಮೂರು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ನನಗೆ ಆಶ್ಚರ್ಯ–ಆನಂದಗಳನ್ನುಂಟುಮಾಡಿದೆ. ವಿವಿಧ ಭಾಷೆಗಳಲ್ಲಿನ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನಲ್ಲದೆ, ವೈದ್ಯಕೀಯ, ಕಾನೂನುಶಾಸ್ತ್ರ ಮೊದಲಾದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಹೊರತರುತ್ತಿರುವುದು ಈ ಅಕಾಡೆಮಿಯ ಕಾರ್ಯವ್ಯಾಪ್ತಿಯ ವೈವಿಧ್ಯ ಮತ್ತು ಹೊಸ ಆಯಾಮಗಳ ಪ್ರತೀಕವೇ ಆಗಿದೆ ಎಂದು ನಂಬಿದ್ದೇನೆ. ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರದ ೧೦೦ಕ್ಕೂ ಹೆಚ್ಚು ಮೇರು ಕೃತಿಗಳನ್ನು ಹೊರತರುವ ಕಾರ್ಯವನ್ನು ಅದು ಹಮ್ಮಿಕೊಂಡಿದೆ ಎಂಬುದು ನನಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಇವೆಲ್ಲಕ್ಕೂ ತಲೆವಣಿಯಾಗಿ ವಿಲ್ ಡ್ಯೂರಾಂಟ್ ಅವರ 'ನಾಗರಿಕತೆಯ ಕಥೆ'ಯ ಸಂಪುಟಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದ್ದು, ಈಗಾಗಲೇ ಆದರ್ಶಪ್ರಾಯವಾದ ರೀತಿಯಲ್ಲಿ ಅದರ ಮೊದಲ ಸಂಪುಟವನ್ನು ಹೊರತಂದಿರುವುದು ನಮ್ಮ ನಾಡಿಗೇ ಗೌರವಪ್ರಾಯವಾದ ಸಂಗತಿ ಎಂದು ನಾನು ಭಾವಿಸಿ, ಇದರ ಮುಂದಿನ ಸಂಪುಟಗಳೂ ಶೀಘ್ರವಾಗಿ ಹೊರಬರಲಿ ಎಂದು ಹಾರೈಸುತ್ತೇನೆ. ಹಾಗೆಯೇ ಇದಕ್ಕಾಗಿ ಅನುವಾದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಪ್ರಧಾನ್ ಗುರುದತ್ತ ಅವರನ್ನು ಹಾಗೂ ಅವರ ಸಿಬ್ಬಂದಿಯನ್ನು ಹೃದಯಾರೆ ಅಭಿನಂದಿಸುತ್ತೇನೆ.

ಅಕಾಡೆಮಿ ಚರಿತ್ರಾರ್ಹವಾದ ಇನ್ನೂ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲಿದೆ – ಉದಾ : ಜೆ.ಡಿ.ಬರ್ನಾಲ್ ಅವರ 'ಸೈನ್ ಇನ್ ಹಿಸ್ಟರಿ'ಯ ಸಂಪುಟಗಳ ಅನುವಾದ – ಎಂದು ನನಗೆ ತಿಳಿದು ಬಂದಿದೆ. ಅಕಾಡೆಮಿಯ ಇಂಥ ಕೆಲಸ–ಕಾರ್ಯಗಳು ಕನ್ನಡಿಗರಿಗೆ ಪ್ರಿಯವಾಗುತ್ತವೆಂದೂ ನಂಬಿದ್ದೇನೆ. ಇಂಥ ಕಾರ್ಯಗಳಿಗೆ ಜನತೆ ಮತ್ತು ಸರ್ಕಾರ ಖಂಡಿತವಾಗಿಯೂ ಬೆಂಬಲವಾಗಿ ನಿಲ್ಲುತ್ತವೆಂಬುದರಲ್ಲಿಯೂ ಅನುಮಾನವಿಲ್ಲ. ಭಾಷಾಂತರಕ್ಕೆ ಉಜ್ವಲ ಭವಿಷ್ಯವಿರುವ ಲಕ್ಷಣಗಳು ಗೋಚರಿಸುತ್ತಿರುವ ಹಿನ್ನಲೆಯಲ್ಲಿ ಅಕಾಡೆಮಿಯ ಕೆಲಸ–ಕಾರ್ಯಗಳು ಇನ್ನೂ ಅತಿಶಯವಾಗಿ, ನಾಡು–ನುಡಿಗಳಿಗೆ ಪ್ರೇರಕವೂ, ಪೋಷಕವೂ ಆಗುವಂತೆ ಮುಂದುವರಿಯಲಿ ಎಂದು ಹಾರೈಸುತ್ತೇನೆ.

ಮನು ಬಳಿಗಾರ್

**(ಶ್ರೀ ಮನು ಬಳಿಗಾರ್)**

# ಪರಿಚಯ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ| ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ| ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು–ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು–ಕೊಡೆಯ ಕಾರ್ಯಕ್ರಮಗಳು ಹೆಚ್ಚು–ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ–ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ–ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ.  ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದು ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ.  ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ.  ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ.  ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು

ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಸಂಪಾದನ ಕಾರ್ಯದಲ್ಲಿ ನೆರವಾಗಿರುವುದು ಮಾತ್ರವಲ್ಲದೆ, ಕರಡು ಪರಿಶೀಲನೆಯಲ್ಲಿಯೂ ಅವರು ನಮಗೆ ಎಲ್ಲ ಸಹಕಾರವನ್ನು ನೀಡಿದ್ದಾರೆ. ಇದಕ್ಕಾಗಿ ಅಕಾಡೆಮಿ ಅವರಿಗೆ ಕೃತಜ್ಞವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಕನ್ನಡ ಮತ್ತು ಸಾಹಿತ್ಯ ಇಲಾಖೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಿರುವ ಶ್ರೀ ಬಿ.ಎಸ್.ಯಡಿಯೂರಪ್ಪ ಅವರಿಗೆ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಿರುವ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಸುಬೀರ್ ಹರಿಸಿಂಗ್ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿರುವ ಶ್ರೀ ಮನು ಬಳಿಗಾರ್ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು

ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೨, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು.

ಇನ್ನೊಂದು ಮಾತು : ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ *'The Ocean of Story'* ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ

ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಂಡಿರುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ.

ಈ ಲಂಬಕಗಳನ್ನು ಅನುವಾದಿಸಿಕೊಟ್ಟಿರುವ ಡಾ. ಎಸ್.ಆರ್. ಲೀಲಾ ಅವರಿಗೆ ನಾನು ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತೇನೆ. ಈ ಯೋಜನೆಯಲ್ಲಿ ಅವರು ತೋರುತ್ತಿರುವ ಆಸಕ್ತಿ–ಉತ್ಸಾಹಗಳನ್ನು, ನೀಡುತ್ತಿರುವ ಸಹಾಯ–ಸಹಕಾರಗಳನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಮೊದಲ ಕಂತಿನಲ್ಲಿ, 'ಕಥಾಸರಿತ್ಸಾಗರ'ದ ಮೂರು ಸಂಪುಟಗಳನ್ನೂ – "ಕಥಾಪೀಠ', "ಕಥಾಮುಖ' ಮತ್ತು "ಲಾವಣಕ' ಹಾಗೂ "ನರವಾಹನದತ್ತ ಜನನ' ಮತ್ತು "ಚತುರ್ದಾರಿಕಾ' ಲಂಬಕಗಳನ್ನೂ, ಎರಡನೆಯ ಕಂತಿನಲ್ಲಿ "ಮದನಮಂಚುಕಾ' – ಮತ್ತು 'ರತ್ನಪ್ರಭಾ' ಲಂಬಕಗಳನ್ನೂ ಬಿಡುಗಡೆ ಮಾಡಲಾಗಿತ್ತು. ಈಗ ಮೂರನೆಯ ಕಂತಿನಲ್ಲಿ 'ಸೂರ್ಯಪ್ರಭ' ಮತ್ತು 'ಅಲಂಕಾರವತೀ' ಲಂಬಕಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಉಳಿದ ಸಂಪುಟಗಳನ್ನೂ ಶೀಘ್ರವಾಗಿ ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇನೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

**ಪ್ರಧಾನ್ ಗುರುದತ್ತ**

ಅಧ್ಯಕ್ಷ

# ಪ್ರಸ್ತಾವನೆ

ಎಂಟನೆಯ ಲಂಬಕವಾದ ಈ ಸೂರ್ಯಪ್ರಭ ಲಂಬಕದಲ್ಲಿ ಒಟ್ಟು ಏಳು ತರಂಗಗಳಿವೆ. ಇವುಗಳಲ್ಲಿ ಒಟ್ಟು ೧೫೭೭ ಶ್ಲೋಕಗಳಿದ್ದು ಅವುಗಳಲ್ಲಿ ೪೧೩ ಶ್ಲೋಕಗಳಿರುವ ಎರಡನೆಯ ತರಂಗವೇ ಎಲ್ಲ ತರಂಗಗಳಿಗಿಂತ ದೊಡ್ಡ ತರಂಗ. ನಾಲ್ಕನೆಯ ತರಂಗದಲ್ಲಿ ಕೇವಲ ೧೨೧ ಶ್ಲೋಕಗಳಿದ್ದು ಅದು ಎಲ್ಲದಕ್ಕಿಂತ ಚಿಕ್ಕ ತರಂಗವಾಗಿದೆ.

ಸೂರ್ಯಪ್ರಭನೆಂಬವನು ಮನುಷ್ಯನಾಗಿದ್ದೇ ವಿದ್ಯಾಧರ ಚಕ್ರವರ್ತಿಯಾಗುವುದೇ ಈ ಇಡೀ ಲಂಬಕದ ಕಥಾವಸ್ತು. ಈ ಕಥೆಯನ್ನು ವಜ್ರಪ್ರಭನೆಂಬ ವಿದ್ಯಾಧರರಾಜನು ತನ್ನ ಲೋಕದಿಂದ ಬಂದು ನರವಾಹನದತ್ತನಿಗೆ ಹೇಳುತ್ತಾನೆ. ಆ ವಜ್ರಪ್ರಭನೇ ಸೂರ್ಯಪ್ರಭನೆಂಬ ಚಕ್ರವರ್ತಿಯಾಗಿದ್ದವನು. ನರವಾಹನದತ್ತನು ಮರ್ತ್ಯನಾಗಿಯೇ ವಿದ್ಯಾಧರಚಕ್ರವರ್ತಿಯಾಗುತ್ತಾನೆ ಎಂಬುದನ್ನು ಅವನು ತಿಳಿದು ಅದನ್ನು ನರವಾಹನದತ್ತನಿಗೆ ತಿಳಿಸುತ್ತಾನೆ. ಮರ್ತ್ಯನಾಗಿದ್ದರೂ ಹೇಗೆ ಸೂರ್ಯಪ್ರಭನು ವಿದ್ಯಾಧರೇಶನಾದ ಎಂದು ನರವಾಹನದತ್ತನು ಕೇಳಿದಾಗ ಸೂರ್ಯಪ್ರಭನಾಗಿದ್ದ ವಜ್ರಪ್ರಭನು ತನ್ನ ಕಥೆಯನ್ನು ಹೇಳುತ್ತಾನೆ.

ಶಾಕಲದೇಶದ ರಾಜ ಚಂದ್ರಪ್ರಭನಿಗೆ ಅವನ ರಾಣಿ ಕೀರ್ತಿಮತಿಯಲ್ಲಿ ಹುಟ್ಟಿದವನೇ ಸೂರ್ಯಪ್ರಭ ಅವನು ಹುಟ್ಟಿದಾಗ 'ಇವನೇ ತ್ರಿಪುರಾರಿಯ ಅನುಗ್ರಹದಿಂದ ಭಾವೀ ವಿದ್ಯಾಧರ ಚಕ್ರವರ್ತಿಯೆಂದು ನಿಶ್ಚಯವಾಗಿರುವ ಸೂರ್ಯಪ್ರಭ' ಎಂದು ಅಶರೀರವಾಣಿಯಾಗುತ್ತದೆ.

ಸೂರ್ಯಪ್ರಭನು ಸರ್ವವಿದ್ಯೆಗಳನ್ನೂ ಕರಗತಮಾಡಿಕೊಂಡು ಸಕಲಕಲಾವಲ್ಲಭನಾಗಿ ಬೆಳೆಯುತ್ತಿರುವಾಗ ಪಾತಾಳ ಲೋಕದಿಂದ ದಾನವೇಶ್ವರನಾದ ಮಯಾಸುರನು ಬಂದು ಆತನಿಗೆ ವಿದ್ಯಾಧರಚಕ್ರವರ್ತಿಯಾಗಲು ಬೇಕಾದ ವಿದ್ಯೆಗಳನ್ನು ಹೇಳಿಕೊಡಲೆಂದು ಕರೆದುಕೊಂಡು ಹೋಗುತ್ತಾನೆ. ಅವನಿಗೆ ಎಲ್ಲ ವಿದ್ಯೆಗಳನ್ನೂ ಕಲಿಸಿ ಭೂತಾಸನವೆಂಬ ವಿಮಾನವನ್ನು ಕೊಟ್ಟು ಅದರಲ್ಲೇ ಅವನನ್ನು ಮರಳಿ ಕರೆತಂದು ಬಿಡುತ್ತಾನೆ.

ಸೂರ್ಯಪ್ರಭ ಯುವರಾಜನಾಗಿ ಅಭಿಷಿಕ್ತನಾದಾಗ ಅವನು ಭೂತಾಸನ ವಿಮಾನದಲ್ಲಿ ಸಂಚರಿಸುತ್ತಾ ಅನೇಕ ದೇಶಗಳನ್ನು ನೋಡಿ ಬರುತ್ತಾನೆ. ಇವನು ಹೋದ ದೇಶಗಳಲ್ಲೆಲ್ಲ ಅಲ್ಲಿಯ ರಾಜಕುಮಾರಿಯರು ಇವನನ್ನು ನೋಡಿ ಮೋಹಿಸಿ ಇವನೊಡನೆ ಹೊರಟು ಬಂದುಬಿಡುತ್ತಾರೆ, ಹೀಗೆ ಇವನೊಡನೆ ಬಂದವರೆಂದರೆ ಲೋಕೈಕ ಸುಂದರಿಯಾದ ಮದನಮಾಲೆ, ಅಪರಾಂತಕದ ಚಂದ್ರಿಕಾವತೀ, ಕಾಂಚಿಯ ಕುಂಭೀರನ ಮಗಳು ವರುಣಸೇನೆ, ಲಾವಾಣಕದ ಚಾರುಲೋಚನೆಯಾದ ಸುಲೋಚನೆ, ಚೀನಾದ ಹೇಮಾವದಾತಾಂಗಿಯಾದ ವಿದ್ಯುನ್ಮಾಲೆ, ಕಾಂತಿಯಲ್ಲಿ ಅಪ್ಸರೆಯನ್ನು ಮೀರಿಸಿದ ಶ್ರೀಕಂಠದೇಶದ ಕಾಂತಿಮತೀ, ಮಂಜುಭಾಷಿಣಿಯಾದ ಕೌಶಾಂಬಿಯ ಪರಪುಷ್ಟೆ ಇವರುಗಳೊಡನೆ ರಮಿಸುತ್ತಾ ನಂತರ ರಂಭನ ಮಗಳಾದ ತಾರಾವಲೀ, ತಾಮ್ರಲಿಪ್ತಿಯ ವಿಲಾಸಿನಿಯೂ ಸೇರಿ ಒಟ್ಟು ಒಂಬತ್ತು ಜನ ಕಾಂತೆಯರೊಡನೆ ಶಾಕಲಕ್ಕೆ ಹಿಂದಿರುಗುತ್ತಾನೆ.

ಇದಾದನಂತರ, ಎಲ್ಲ ರಾಜರೂ ತಮ್ಮ ಪುತ್ರಿಯರನ್ನು ಸೂರ್ಯಪ್ರಭನು ಅಪಹರಿಸಿದ್ದಾನೆಂದೂ, ಆ ಕನ್ಯೆಯರನ್ನೆಲ್ಲ ತಾವು ವಿಧಿವತ್ತಾಗಿ ಸೂರ್ಯಪ್ರಭನಿಗೇ ವಿವಾಹ ಮಾಡಿಕೊಡುತ್ತೇವೆಂದೂ ಚಂದ್ರಪ್ರಭನಿಗೆ ಸಂದೇಶ ಕಳಿಸಿ ಅವರನ್ನು ಕರೆತರಲು ಕೇಳಿಕೊಳ್ಳುತ್ತಾರೆ. ಮಹಾಪರಾಕ್ರಮಿಯಾದ ಸೂರ್ಯಪ್ರಭನೊಡನೆ ಸಂಧಿ ಪ್ರಸ್ತಾಪವಲ್ಲದೆ ಅನ್ಯಮಾರ್ಗದ ಸಾಧ್ಯತೆಯೇ ಇಲ್ಲ. ಅದೂ ಅಲ್ಲದೆ ಸೂರ್ಯಪ್ರಭನಂತಹ ಪತಿಯು ತಮ್ಮ ಮಕ್ಕಳಿಗೆ ಸಿಗುವುದು ಮಹಾ ಅದೃಷ್ಟವೆಂದೇ ಆ ರಾಜರೆಲ್ಲರೂ ಭಾವಿಸಿದ್ದರು.

ಚಂದ್ರಪ್ರಭನು ಈ ಪ್ರಸ್ತಾವವನ್ನು ಒಪ್ಪಿದಮೇಲೆ ಎಲ್ಲರೊಡನೆಯೂ ಸೂರ್ಯಪ್ರಭನ ವಿವಾಹವು ನೆರವೇರುತ್ತದೆ. ಈ ಮಾನವ ವಿದ್ಯಾಧರರ ವಿವಾಹ ಸಂಬಂಧವನ್ನು ಸಹಿಸಲಾರದ ದಾಮೋದರನೆಂಬ ವಿದ್ಯಾಧರಾಧೀಶನಿಗೂ ಸೂರ್ಯಪ್ರಭನಿಗೂ ಯುದ್ಧವಾಗಿ ಸೂರ್ಯಪ್ರಭನು ಆ ವಿದ್ಯಾಧರರಾಜನನ್ನು ಸೋಲಿಸುತ್ತಾನೆ.

ಇವೆಲ್ಲವೂ ಸೂರ್ಯಪ್ರಭನ ಭಾವೀಚಕ್ರವರ್ತಿಪದವಿಗಾಗಿ ನಡೆಯುವ ಪೂರ್ವಸಿದ್ಧತೆಗಳು. ದೇವಮಾನವ ಸಂಬಂಧಗಳು ಅವನ ಅರ್ಹತೆಯನ್ನು ಹೆಚ್ಚಿಸುತ್ತವೆ. ವಿದ್ಯಾಧರನ ಮೇಲಿನ ವಿಜಯ ಅವನಲ್ಲಿ ಎಲ್ಲರಿಗೂ ವಿಶ್ವಾಸವನ್ನು ಹೆಚ್ಚಿಸುತ್ತದೆ, ಹಾಗೂ ಅವನ ಯೋಗ್ಯತೆಯನ್ನು ದೃಢಪಡಿಸುತ್ತದೆ.

ಈ ತರಂಗದಲ್ಲಿ ವರ್ಣನೆಗೆ ವಿಪುಲವಾದ ಅವಕಾಶವಿದೆ. ಇದರಲ್ಲಿ ವರನಾರಿಯರ ಹಾಗೂ ನಗರಗಳ ವರ್ಣನೆಯಲ್ಲಿ ಕವಿಯ ಕಲ್ಪನೆಯು ವಿದ್ಯಾಧರರಂತೆಯೇ ಗಗನಗಾಮಿಯಾಗಿಬಿಡುತ್ತದೆ. ಆದರೆ ಈ ವರ್ಣನೆಗಳು ಬಹಳ ಸಂಕ್ಷಿಪ್ತ ಮತ್ತು ಸಂದರ್ಭೋಚಿತ.

ರಾಜಕುಮಾರಿಯರನ್ನು ಒಂದೊಂದೇ ಸುಂದರ ವಿಶೇಷಣಗಳಿಂದ ಕವಿಯು ವರ್ಣಿಸುತ್ತಾನೆ. ಒಬ್ಬಳು ಚಾರುಲೋಚನೆ, ಮತ್ತೊಬ್ಬಳು ಹೇಮಾವದಾತಾಂಗಿ. ಹೀಗೆಯೇ ವಿಶೇಷಣಗಳು ಸಾಗುತ್ತವೆ. ಇವರೆಲ್ಲರೊಡನೆ ಸೂರ್ಯಪ್ರಭನು ವಿದ್ಯಾವಿರಚಿತಾನೇಕದೇಹನಾಗಿ, ಅಂದರೆ ವಿದ್ಯೆಯಿಂದ ಏಕಕಾಲದಲ್ಲಿ ಅನೇಕ ದೇಹಗಳನ್ನು ಧರಿಸಿ, ರಮಿಸುತ್ತಾನೆ. ಅವರೋ ತಮ್ಮ ಭ್ರೂಭಂಗಾನುಗುಣವಾದ ಈಕ್ಷಣಗಳಿಂದ ಹಾಗೂ ಸಕಂಪೋಷ್ಠಪುಟವಿಸ್ಖಲಿತಾಕ್ಷರಗಳುಳ್ಳ ಮಾತುಗಳಿಂದ ಅವನನ್ನು ಸಂತೋಷಗೊಳಿಸುತ್ತಿದ್ದರು. ಅವರ ಅದುರುವ ಚೆಂದುಟಿಗಳಿಂದ ಹೊಮ್ಮುತ್ತಿದ್ದ ಅಸ್ಪಷ್ಟವಚನಗಳನ್ನು ಕೇಳಿಯೇ ಅವನಿಗೆ ಸಂತೋಷ.

ಅವನು ತಾಮ್ರಲಿಪ್ತಿ ನಗರಕ್ಕೆ ಬಂದಾಗ ಅದು ಚಂದನೋದಕಸಂಸಿಕ್ತ ಚಾರುರಥ್ಯೆಯುಳ್ಳದ್ದಾಗಿತ್ತು. ಅಂದರೆ ಅದರ ಮಾರ್ಗಗಳನ್ನು ಚಂದನದ ನೀರಿನಿಂದ ಸಿಂಪಡಿಸಿದ್ದು ಅವು ಮನೋಹರವಾಗಿದ್ದುವು. ಅದರ ಪುರನಾರಿಯರು ತಮ್ಮ ಕುತೂಹಲಭರಿತ ಕಣ್ಣುಗಳೆಂಬ ಕನ್ನೈದಿಲೆಗಳಿಂದ ಅವನನ್ನು ಅರ್ಚಿಸಿದರು.

ಕಾಂಚೀಪುರದ ವರ್ಣನೆಯು ಚಿಕ್ಕದಾದರೂ ಚೇತೋಹಾರಿ. ನಾನಾರತ್ನಭೂಷಿತವಾಗಿ, ಬಹುಗುಣಶೋಭಿತವಾಗಿ ಭೂದೇವಿಯ ಕಾಂಚಿಯಂತೆ ಅಂದರೆ ವಡ್ಯಾಣದಂತೆ ಇದು. ಕಾಂಚಿಯೆಂಬುದು ಅದಕ್ಕೆ ಉಚಿತವಾದ ಕಾವ್ಯಮಯವಾದ ಹೆಸರು.

ದಾಮೋದರನೆಂಬ ವಿದ್ಯಾಧರನು ಆಕ್ರಮಿಸಿದಾಗ ಆ ಸನ್ನಿವೇಶವನ್ನು ಕವಿಯು ಒಂದೆರಡು ಮಾತುಗಳಲ್ಲಿ ವರ್ಣಿಸುತ್ತಾನೆ. ಆಕಾಶವು ಮುಂಬರುವ ಅಪಾಯವನ್ನು ಮುಂಗಾಣಿಸುವಂತೆ

ರಕ್ತಾರುಣವಾಯಿತಂತೆ. ಸೈನ್ಯದ ತುಮುಲ ಶಬ್ದಗಳಿಂದ ದಿಕ್ಕುಗಳೆಲ್ಲ ಭೀತಿಯಿಂದುಂಟಾದ ಭಯಧ್ವನಿಯಿಂದ ತುಂಬಿತೋ ಎಂಬಂತಾಯಿತೆನ್ನುತ್ತಾನೆ ಕವಿ.

ಆಗ ನಡೆದ ಯುದ್ಧದಲ್ಲಿ ರಕ್ತದಿಂದ ತೊಯ್ದ ಕತ್ತಿಗಳ ಅಲಗುಗಳು ಮೃತ್ಯುದೇವತೆಗಳ ದೃಷ್ಟಿಗಳು. ನೆಲಕ್ಕೆ ಬೀಳುತ್ತಿದ್ದ ವಿದ್ಯಾಧರರು ಭಯದಿಂದ ಶರಣಾಗತರಾಗಿ ಚಂದ್ರಪ್ರಭನ ಮುಂದೆ ತಮ್ಮ ದೇಹವನ್ನೂ ಶಿರಸ್ಸುಗಳನ್ನೂ ಕೆಡಹುತ್ತಿರುವಂತೆ ಕಾಣುತ್ತಿತ್ತು ಎಂದು ಆ ಯುದ್ಧ ಸನ್ನಿವೇಶವನ್ನು ಕವಿಯು ವರ್ಣಿಸುತ್ತಾನೆ.

ಸೂರ್ಯಪ್ರಭನು ತನ್ನ ನಗರವಾದ ಶಾಕಲಕ್ಕೆ ಹಿಂದಿರುಗಿ ಬಂದಾಗ ಆ ನಗರ ಸಂಭ್ರಮಿಸಿತು. ಕೆಲವೆಡೆ ಮಧುಪಾನಗೋಷ್ಠಿಗಳು, ಕೆಲವೆಡೆ ಸುಂದರಿಯರ ಅಲಂಕಾರಕಲಾಪಗಳು, ಕೆಲವೆಡೆ ವೈತಾಲಿಕರ ಸ್ತುತಿಪಾಠಗಳು, ಹೀಗೆ ವಿವಿಧ ವಿಲಾಸ ಸಂಭ್ರಮ ವಿಜೃಂಭಣೆಗಳು ಆ ನಗರದಲ್ಲಿ.

ಈ ತರಂಗದ ಒಟ್ಟು ದೃಷ್ಟಿಯನ್ನು ತೆಗೆದುಕೊಂಡಾಗ, ಈ ತರಂಗವು ಸೂರ್ಯಪ್ರಭನ ವಿವಾಹಗಳ ಸಂಭ್ರಮದ ತರಂಗ. ವಿದ್ಯಾಧರತ್ವಕ್ಕೆ ಪೂರ್ವಸಿದ್ಧತೆಯಾಗಿ, ವಿದ್ಯಾರ್ಜನೆ, ವೈವಾಹಿಕ ಸಂಬಂಧಗಳಿಂದ ಬಲವರ್ಧನೆ, ವಿದ್ಯಾಧರೇಶನ ಮೇಲೆ ವಿಜಯ, ಮುಂತಾದುವು ಈ ತರಂಗದ ವೈಶಿಷ್ಟ್ಯಗಳು.

ಎರಡನೆಯ ತರಂಗವು ಸಂಸ್ಕೃತನಾಟಕಗಳ ಪ್ರಾರಂಭದ ದೃಶ್ಯದಂತೆ ಕುತೂಹಲಕರವಾಗಿ ಆರಂಭವಾಗುತ್ತದೆ. ಚಂದ್ರಪ್ರಭಾದಿಗಳು ಆಸ್ಥಾನದಲ್ಲಿದ್ದಾಗ ಸಭಾ ಮಧ್ಯದಲ್ಲಿ ಭೂಮಿಯು ಬಿರಿದು ಅದರೊಳಗಿಂದ ಪರಿಮಳಭರಿತವಾದ ಮಂದಮಾರುತ ಮೇಲೇಳುತ್ತದೆ. ಅನಂತರ ಮಯಾಸುರನು ಮೇಲೆದ್ದು ಬರುತ್ತಾನೆ. ಉನ್ನತವಾದ ಅವನ ತಲೆಯೇ ಶಿಖರದಂತಿದ್ದು, ಪಿಂಗಳವಾದ ಕೇಶಗಳೇ ಜ್ವಲಿಸುವ ಮಹೌಷಧಿಗಳಂತಿದ್ದು, ಕೆಂಪುವಸ್ತ್ರಧರಿಸಿದ್ದರಿಂದ ಧಾತುರಸ ಹೊರಹೊಮ್ಮುತ್ತಿದ್ದಂತೆ ಕಾಣುತ್ತಿದ್ದು ಆ ಅಸುರೇಂದ್ರನು ಒಂದು ಮಹಾಪರ್ವತದಂತೆ ಕಾಣುತ್ತಿದ್ದನು ಎಂದು ಕವಿಯು ಮಯಾಸುರನನ್ನು ವರ್ಣಿಸುತ್ತಾನೆ. ಮಹಾಸುರನ ಆವಿರ್ಭಾವಕ್ಕೆ ಅನುಗುಣವಾದ ವರ್ಣನೆ ಇದು.

ಅನಂತರ ನಡೆಯುವ ಘಟನಾವಳಿಗಳಲ್ಲಿ ನಾರದರ ಆಗಮನವು ಒಂದು. ನಾರದರು ಬಂದು ಇಂದ್ರನ ಸಂದೇಶವನ್ನು ತಿಳಿಸುತ್ತಾರೆ. ಶ್ರುತಶರ್ಮನಿಗೆ ಈಗಾಗಲೇ ವಿದ್ಯಾಧರೇಶ್ವರ ಪದವಿಯನ್ನು ವಾಗ್ದಾನ ಮಾಡಿರುವುದರಿಂದ ಸೂರ್ಯಪ್ರಭನು ಅದಕ್ಕಾಗಿ ಯತ್ನಿಸಬಾರದು, ಅದು ಅಧರ್ಮ ಎಂಬುದೇ ಶಕ್ರನ ಸಂದೇಶ. ಮಯನು ಆ ವಾದವನ್ನು ತಳ್ಳಿಹಾಕುತ್ತಾನೆ. ನಾರದರು ಮಾತಿಲ್ಲದೆ ಹೊರಡುತ್ತಾರೆ.

ಅನಂತರ ರುದ್ರದೇವನಿಗೆ ಮಹಾಬಲಿ ಅರ್ಪಿಸಿ ಚಂದ್ರಪ್ರಭನು ಶಂಕರನ ಅನುಗ್ರಹ ಪಡೆಯುತ್ತಾನೆ. ಮುಂದೆ ಮಯಾಸುರನು ಒಂದು ಜನ್ಮರಹಸ್ಯವನ್ನು ಚಂದ್ರಪ್ರಭನಿಗೆ ತಿಳಿಸುತ್ತಾನೆ. ಹಿಂದಿನ ಜನ್ಮದಲ್ಲಿ ಚಂದ್ರಪ್ರಭನು ಮಯನ ಪುತ್ರನಾಗಿದ್ದ. ಆಗ ಅವನ ಹೆಸರು ಸುನೀಥ. ಸೂರ್ಯಪ್ರಭನೂ ಸುಮುಂಡೀಕನೆಂಬ ಹೆಸರಿನಲ್ಲಿ ಅವನ ತಮ್ಮನಾಗಿದ್ದ. ಆದರೆ ಈ ಜನ್ಮದಲ್ಲಿ ಅವರಿಬ್ಬರೂ ತಂದೆಮಕ್ಕಳಾಗಿ ಹುಟ್ಟಿದ್ದಾರೆ. ಸುನೀಥನ ಶರೀರವನ್ನು ಪಾತಾಳದಲ್ಲಿ ರಕ್ಷಿಸಿ ಇಡಲಾಗಿದೆ. ಅದನ್ನು ಚಂದ್ರಪ್ರಭನು ಯೋಗಶಕ್ತಿಯಿಂದ ಮತ್ತೆ ಹೋಗಿ ಸೇರಿಕೊಳ್ಳಬೇಕು ಎನ್ನುತ್ತಾನೆ.

ಈ ಸಂದರ್ಭದಲ್ಲಿ ಏಳುವ ಹಲವು ಸಂದೇಹಗಳಿಗೆ ಮಯನು ಸಮಾಧಾನ ಹೇಳುತ್ತಾನೆ.

ಚಂದ್ರಪ್ರಭನು ಯೋಗಯುಕ್ತಿಯಿಂದ ಹಿಂದಿನ ದೇಹಕ್ಕೆ ಹೋಗುವುದರಿಂದ ಅವನು ಈ ಜನ್ಮದ ನೆನಪುಗಳನ್ನು ಮರೆಯುವುದಿಲ್ಲ. ತನ್ನ ಸ್ವಾಧೀನವಿಲ್ಲದೆ ಎಲ್ಲೋ ಸತ್ತು ಯಾವುದೋ ಗರ್ಭದಲ್ಲಿ ಹುಟ್ಟುವವನಿಗೆ ಮರಣಾದಿ ಕ್ಲೇಶಗಳಿಂದ ಸ್ಮರಣೆ ಮರೆಯಾಗುತ್ತದೆಯಷ್ಟೆ. ಬೇರೆ ಯುಕ್ತಿಯಿಂದ ಪ್ರವೇಶ ಮಾಡಿದವನು ಅಂತಃಕರಣಗಳನ್ನೂ ಇಂದ್ರಿಯಗಳನ್ನೂ ಆವರಿಸಿಕೊಳ್ಳುತ್ತಾನೆ. ಅವನ ಮನೋಬುದ್ಧಿಗಳು ನಾಶವಾಗುವುದಿಲ್ಲ. ಒಂದು ಮನೆಯಿಂದ ಮತ್ತೊಂದು ಮನೆಗೆ ಹೋದಂತೆ ಆಗುತ್ತದೆ ಅಷ್ಟೆ

ಅನ್ಯಕಾಯಪ್ರವೇಶದ ಕ್ರಮವನ್ನು ಹೇಳಿಕೊಡುತ್ತಾ ಮಯನು ಚಂದ್ರಪ್ರಭನಿಗೆ ಹೇಳುವ ವಿಚಾರಗಳು ಕುತೂಹಲಕರವಾಗಿವೆ. ಸಾಂಖ್ಯವನ್ನು ವಿವರಿಸಿ ಅದರ ಒಳಮರ್ಮವನ್ನು ಹೇಳಿ ಅನಂತರ ಪರಕಾಯಪ್ರವೇಶದ ಯುಕ್ತಿಯನ್ನು ಉಪದೇಶಿಸಿ ನಿಗಮನಗೊಳಿಸುತ್ತಾನೆ. 'ಇದೇ ಸಿದ್ಧಿ. ಇದೇ ಜ್ಞಾನ. ಇದೇ ಸ್ವಾತಂತ್ರ್ಯ, ಐಶ್ವರ್ಯ, ಅಣಿಮಾಡಿ ಅಷ್ಟಸಿದ್ಧಿಗಳ ನಿಕೇತನ. ಈ ಐಶ್ವರ್ಯದಲ್ಲಿ ನೆಲೆಸಿದ ಸುರೇಶ್ವರರೂ ಮೋಕ್ಷವನ್ನು ಬಯಸುವುದಿಲ್ಲ. ಬಲ್ಲವರು ಈ ಯೋಗವಿದ್ದರೆ ಸಾಕು, ಸ್ವರ್ಗಭೋಗ ಬಂದರೂ ಬೇಡವೆನ್ನುತ್ತಾರೆ' ಎಂದು ಹೇಳಿ ನಿದರ್ಶನವಾಗಿ ಕಾಲನೆಂಬ ದ್ವಿಜನ ಕಥೆಯನ್ನು ಹೇಳುತ್ತಾನೆ. 'ಸ್ವರ್ಗವಿಮುಖರಾದ ವಿವೇಕಿಗಳು ಸಿದ್ಧಿಯನ್ನೇ ಅರಸುತ್ತಾರೆ. ಆ ಸಿದ್ಧಿಯೂ ನಿನಗೆ ದೊರೆತಿದೆ' ಎಂದು ಅವನು ಕೊನೆಯಲ್ಲಿ ಹೇಳಿದ ಮೇಲೆ ಚಂದ್ರಪ್ರಭನು ಅವನು ಹೇಳಿದಂತೆಯೇ ತನ್ನ ಹಿಂದಿನ ಶರೀರವನ್ನು ಪ್ರವೇಶಿಸಿ ಸುನೀಥನಾಗುತ್ತಾನೆ.

ಅನಂತರ ತನ್ನ ಪೂರ್ವಜನ್ಮದ ತಾಯಿ, ಅಂದರೆ ಮಯಾಸುರನ ಪತ್ನಿಯನ್ನು ಸಂಧಿಸುತ್ತಾನೆ. ಎಲ್ಲರೂ ಬಲಿಯನ್ನು ನೋಡಲು ಹೋಗುತ್ತಾರೆ. ಅಲ್ಲಿಗೆ ಪ್ರಹ್ಲಾದಾದಿಗಳೂ ಬರುತ್ತಾರೆ. ಸಪ್ತ ಪಾತಾಳಲೋಕಗಳ ಅಧಿಪತಿಗಳೂ ಅಲ್ಲಿ ಸಮಾವೇಶಗೊಳ್ಳುತ್ತಾರೆ. ಸುನೀಥನ ಹಿಂದಿನ ಭಾರ್ಯೆಯರು ಅವನೊಡನೆ ಸೇರುತ್ತಾರೆ. ರಾತ್ರಿ ದಾನವೇಂದ್ರ ಅಮೀಲನ ಪುತ್ರಿ ಇವನಲ್ಲಿಗೆ ಬಂದು ಇವರಿಬ್ಬರ ಗಾಂಧರ್ವವಿವಾಹವಾಗುತ್ತದೆ.

ಮುಂದೆ ಆ ಲೋಕದಲ್ಲಿ ಏರ್ಪಡಿಸಲಾಗಿದ್ದ ನೃತ್ಯಕಾರ್ಯಕ್ರಮವನ್ನು ನೋಡುತ್ತಿದ್ದ ಸುನೀಥನ ಕಣ್ಣುಗಳಿಗೆ ನೃತ್ಯದಲ್ಲಿ ಭಾಗವಹಿಸಿದ್ದ ಮಹಲ್ಲಿಕೆಯು ಬೀಳುತ್ತಾಳೆ. ಅವಳು ಪ್ರಹ್ಲಾದನ ಪುತ್ರಿ. ಅವಳು ಪಾತಾಳವನ್ನು ನೋಡುವ ಕುತೂಹಲದಿಂದ ಮೂರ್ತಿವೆತ್ತು ಬಂದ ಚಂದ್ರಲೇಖೆಯಂತಿದ್ದಳು. ಆ ಲಲಾಟತಿಲಕೋಪೇತೆ, ಚಾರುನೂಪುರಪಾದೆ, ಮಂದಹಾಸಯುತೆ, ಬ್ರಹ್ಮನು ನೃತ್ಯಕ್ಕೋಸ್ಕರವೇ ಸೃಷ್ಟಿ ಮಾಡಿದಂತೆ ಇದ್ದಳು. ಸೂರ್ಯಪ್ರಭನ ಮನಸ್ಸನ್ನು ಅವಳು ಅಪಹರಿಸುತ್ತಾಳೆ. ಮುಂದೆ ಅವರಿಬ್ಬರ ವಿವಾಹ ನೆರವೇರುತ್ತದೆ. ಮುಂದೆ ತಮ್ಮ ತಮ್ಮ ಪಾತಾಳಲೋಕಗಳಿಗೆ ದಾನವೇಂದ್ರರು ಹೋಗಿ ಸೂರ್ಯಪ್ರಭನಿಗೆ ತಮ್ಮ ತಮ್ಮ ಮಕ್ಕಳನ್ನು ವಿವಾಹಮಾಡಿಕೊಡುತ್ತಾರೆ. ಮಹಲ್ಲಿಕೆಯ ೧೨ ಜನ ಸಖಿಯರೊಂದಿಗೆ ಅವನ ವಿವಾಹವಾಗುತ್ತದೆ.

ಪಾತಾಳ ಲೋಕಗಳ ಸೌಂದರ್ಯವನ್ನು ಈ ಸಂದರ್ಭದಲ್ಲಿ ಕವಿಯು ವೈಭವೀಕರಿಸಿ ವರ್ಣಿಸುತ್ತಾನೆ. ವಿಚಿತ್ರರತ್ನಪ್ರಾಸಾದಗಳುಳ್ಳ, ಮಯನ ಮಾಯೆಯಿಂದ ನಿರ್ಮಿತವಾದ ಆ ಲೋಕ 'ನವಂ ನವಮಿವ ಆಭಾಸಮಾನ'ವಾದದ್ದು. ಪ್ರತಿಯೊಂದು ಬಾರಿ ನೋಡಿದಾಗಲೂ ಹೊಸದೆಂಬಂತೆ ಕಾಣುವಂತಹುದು.

ಅನಂತರ ದಿತಿ ದನು ಮಾತೆಯರ ದರ್ಶನ. ಅವರ ಆಶೀರ್ವಾದದ ನಂತರ ಕಶ್ಯಪ ಮುನಿಯ ಆಶ್ರಮಕ್ಕೆ ಹೋಗಿ ಮುನಿಯ ದರ್ಶನ. ಆ ಮುನಿಯು ನೋಡಲು 'ದ್ರುತಶುದ್ಧಹಾಟಕಾಭ' ಕರಗಿದ ಚಿನ್ನದಂತೆ ತೇಜೋಮಯ, ಜ್ವಾಲಾಕಪಿಲಜಟಾಧರ, ಅನಲಸಮಾನ, ದುರಾಧರ್ಷ, ಯಾರಿಗೂ ಪರಿಭವಗೊಳಿಸಲು ಸಾಧ್ಯವಿಲ್ಲದವನು.

ಆ ಮುನಿಯು ದಾನವರಿಗೆ ಈ ರೀತಿ ಉಪದೇಶ ಮಾಡುತ್ತಾನೆ. 'ನೀವೆಲ್ಲರೂ ಧರ್ಮಮಾರ್ಗದಲ್ಲೇ ಇರಬೇಕು. ಅಪಾರ ಸಂಪತ್ತನ್ನು ಪಡೆದು ನಿರಂತರವಾದ ಸುಖವನ್ನು ಅನುಭವಿಸಿ. ಹಿಂದೆ ಆದಂತೆ ನಿಮಗೆ ಶತ್ರುಗಳಿಂದ ಪರಾಜಯವಾಗದಿರಲಿ. ಧರ್ಮಮಾರ್ಗಭ್ರಷ್ಟರಾದ ಅಸುರರು ಮುರಾರಿಯ ಚಕ್ರಕ್ಕೆ ಸಿಲುಕಿ ನಾಶವಾಗಲಿಲ್ಲವೇ ? ನಮ್ಮ ಪಕ್ಷವು ಕ್ರಮವಾಗಿ ಏಳ್ಗೆಗೆ ಬರುತ್ತದೆ. ಧೈರ್ಯವಾಗಿರಿ. ಧರ್ಮವನ್ನು ಬಿಡದಿರಿ.'

ಆಗ ಇಂದ್ರನು ಬಂದು ಒಂದು ವಾಗ್ವಾದವಾಗುತ್ತದೆ. ಕಶ್ಯಪರ ಹುಂಕಾರದಿಂದ ಅವನು ಸುಮ್ಮನಾಗುತ್ತಾನೆ. ಆಗ ಶ್ರುತಶರ್ಮನೂ ಬರುತ್ತಾನೆ. ಸ್ವಾಭಿಪ್ರಾಯವನ್ನು ಮಯನು ಹೇಳಿದನಂತರ ಶಕ್ರನು ಅದಿತಿಯ ಮಾತಿನಂತೆ ಮಯನನ್ನು ಸಮಾಧಾನಗೊಳಿಸುತ್ತಾನೆ. ಅಲ್ಲಿಂದ ಹಿಂದಿರುಗಿದ ನಂತರ ಎಲ್ಲರೂ ಮುಂದೆ ಮಾಡಬೇಕಾದ ಸಿದ್ಧತೆಗಳನ್ನು ಮಾಡತೊಡಗುತ್ತಾರೆ.

ಕವಿಯು ಇಲ್ಲಿ ದಾನವರ ವ್ಯಕ್ತಿತ್ವವನ್ನು ವಿಭಿನ್ನರೀತಿಯಲ್ಲಿ ತೋರಿಸಿ ಅವರನ್ನು ಧರ್ಮಮಾರ್ಗಗಳನ್ನಾಗಿಸಿದ್ದಾನೆ. ಸಾತ್ವಿಕ ದಾನವಶ್ರೇಷ್ಠರಾದ ಮಯ, ಪ್ರಹ್ಲಾದ, ಬಲಿಗಳ ನೇತೃತ್ವದಲ್ಲಿರುವ ದಾನವರು ಅನ್ಯಾಯಮಾಡುವವರನ್ನು ಅವರು ಮೇಲೆಬಿದ್ದರೆ ಸುಮ್ಮನೆಬಿಡುವವರಲ್ಲ. ಇಲ್ಲಿ ಇಂದ್ರನೇ ಒಳಸಂಚು, ವಂಚನೆಗಳನ್ನು ಮಾಡುವವನು. ಇಂತಹ ದಾನವರ ಮೈತ್ರಿ, ಮಾರ್ಗದರ್ಶನಗಳು ಸೂರ್ಯಪ್ರಭನಿಗೆ ದೊರಕಿ ಅವನು ವಿದ್ಯಾಧರೇಶನಾಗುವ ಮಾರ್ಗವು ತೆರೆದುಕೊಳ್ಳುತ್ತದೆ. ಆದರೆ ಅವನ ಪ್ರತಿಸ್ಪರ್ಧಿಯಾದ ಶ್ರುತಶರ್ಮನೊಡನೆ ಯುದ್ಧವು ಅನಿವಾರ್ಯವಾಗಿ ಅದಕ್ಕಾಗಿ ಸಿದ್ಧತೆ ನಡೆಯುತ್ತದೆ.

ಮೂರನೆಯ ತರಂಗವು ಸೂರ್ಯಪ್ರಭನ ಸಹಾಯಕ್ಕಾಗಿ ದಾನವಸೇನೆಗಳು ಅಪಾರಸಂಖ್ಯೆಯಲ್ಲಿ ಆಕಾಶಮಾರ್ಗದಲ್ಲಿ ಬಂದು ಸೇರುವುದರೊಡನೆ ಪ್ರಾರಂಭವಾಗುತ್ತದೆ. ಮಯನೇ ಈ ಎಲ್ಲದಕ್ಕೂ ಸೂತ್ರಧಾರ. ಸೈನ್ಯಗಳು ಬಂದು ಸೇರಿದಮೇಲೆ ಸೈನ್ಯವೀಕ್ಷಣೆ ನಡೆಯುತ್ತದೆ. ಶಕ್ತಿಸಂಚಯಕ್ಕಾಗಿ ಹೋಮ ಮಾಡಿದಾಗ ಮಹಾಪ್ರಮಾಣದ ಅಜಗರವೊಂದು ಭೂಮಿಯಿಂದ ಮೇಲೇಳುತ್ತದೆ. ಅದನ್ನು ಹಿಡಿಯಲು ಶ್ರುತಶರ್ಮನಾದಿಯಾಗಿ ಎಲ್ಲರೂ ಪ್ರಯತ್ನಿಸಿ ಸೋತಾಗ ಸೂರ್ಯಪ್ರಭನು ಅದನ್ನು ಹಿಡಿಯುತ್ತಾನೆ. ಆಗ ಅದೊಂದು ಶ್ರೇಷ್ಠ ಬತ್ತಳಿಕೆಯಾಗಿ ಮಾರ್ಪಡುತ್ತದೆ. ಮುಂದೆ ಮಾನಸ ಸರೋವರಕ್ಕೆ ಹೋಗಿ ಹೋಮ ಮಾಡಿದಾಗ ಘೋರವಾದ ಮೇಘವೊಂದು ಆವಿರ್ಭವಿಸಿ ಮಳೆಯನ್ನು ಸುರಿಸುತ್ತದೆ. ಅದರ ಮಧ್ಯದಿಂದ ನಾಗವೊಂದು ಕೆಳಗೆ ಬೀಳುತ್ತದೆ. ಅದನ್ನು ಸೂರ್ಯಪ್ರಭನು ಹಿಡಿದಾಗ ಅದು ಶ್ರೇಷ್ಠಧನುಸ್ಸಾಗಿ ಮಾರ್ಪಡುತ್ತದೆ. ಮತ್ತೊಂದು ನಾಗವು ಬಿದ್ದಾಗ ಅದನ್ನು ಸೂರ್ಯಪ್ರಭನು ಹಿಡಿದಕೂಡಲೇ ಅದು ಧನುಸ್ಸಿನ ಹುರಿಯಾಗುತ್ತದೆ.

ಸುಮೇರುವು ಕೀಚಕವನಕ್ಕೆ ಎಲ್ಲರೂ ಹೋಗಿ ಮಹಾಧನುಸ್ಸುಗಳನ್ನು ಸಾಧಿಸಿಕೊಳ್ಳಲು ಹೇಳುತ್ತಾನೆ. ಅದರಂತೆ ಎಲ್ಲರೂ ಹೋಗಿ ಅಜೇಯವಾದ ಧನುಸ್ಸುಗಳನ್ನು ಸಾಧಿಸಿಕೊಳ್ಳುತ್ತಾರೆ.

ಸಿದ್ಧಿಗಳ ಬಗ್ಗೆ ವಿವರಿಸುತ್ತಾ ಮಯನು ಹೇಳುವ ಮಾತುಗಳನ್ನು ಇಲ್ಲಿ ಗಮನಿಸಬೇಕು. ಶಕ್ತಿಗಳು, ಅನುಶಕ್ತಿಗಳು ಇವೆಲ್ಲ ಅವ್ಯಕ್ತದಿಂದ ಹುಟ್ಟುತ್ತವೆ. ಅಲ್ಲಿ ಪ್ರಾಣಯುಕ್ತಿಯಿಂದ ನಾದೋತ್ಪತ್ತಿ. ಆ ನಾದವು ಬಿಂದುಪಥವನ್ನು ಆಶ್ರಯಿಸಿದೆ. ಇದೇ ಪರತತ್ವದ ಅಂಶಗಳಿಂದ ಕೂಡಿ ವಿದ್ಯೆಗಳನ್ನು ಸಿದ್ಧಿಸಿಕೊಡುವ ಮಂತ್ರಗಳಾಗುತ್ತದೆ, ಜ್ಞಾನದಿಂದಾಗಲಿ, ಸಿದ್ಧಪುರುಷರ ಆಜ್ಞೆಯಿಂದಾಗಲಿ ಪಡೆದ ಆ ಮಂತ್ರವಿದ್ಯೆಯ ಪ್ರಭಾವ ಅನುಲ್ಲಂಘನೀಯ.

ಮತ್ತೆ ಮೋಹಿನೀ ಮತ್ತು ಪರಿವರ್ತಿನೀ ಎಂಬೆರಡು ವಿದ್ಯೆಗಳನ್ನು ಸಿದ್ಧಿಸಿಕೊಳ್ಳಲು ಮಯನು ಯಾಜ್ಞವಲ್ಕ್ಯರ ಬಳಿ ಹೋಗಲು ಸೂಚಿಸುತ್ತಾನೆ. ಅಲ್ಲಿಗೆ ಹೋಗಿ ಸರ್ಪಕೊಳದ ವಾಸ, ಬೆಂಕಿಯ ನಡುವೆ ಕುಳಿತು ತಪಸ್ಸು, ವಹ್ನಿ ಕುಂಡಪ್ರವೇಶಗಳೆಲ್ಲವೂ ಆಗಿ ಸೂರ್ಯಪ್ರಭನಿಗೆ ಸಿದ್ಧಿಗಳ ಉಪದೇಶವಾಗುತ್ತದೆ. ಆಗ ಮಹಾಪದ್ಮ ಎಂಬ ವಿಮಾನವು ಸೂರ್ಯಪ್ರಭನ ಬಳಿ ಬರುತ್ತದೆ. ಇದು ಚಕ್ರವರ್ತಿವಿಮಾನ.

ಈ ಘಟನೆಗಳ ನಂತರ ಮುಂದಿನ ಕಥಾಭಾಗದಲ್ಲಿ ಒಂದು ಸ್ವಪ್ನವಿಚಾರ ಬರುತ್ತದೆ. ಇದರ ಅರ್ಥವಿವರಣೆ ಕುತೂಹಲಕರವಾಗಿದೆ. ಸೂರ್ಯಪ್ರಭನಿಗೆ ಒಂದು ಸ್ವಪ್ನವಾಗಿ ಅವನು ಆ ಸ್ವಪ್ನವನ್ನು ಈ ರೀತಿ ವಿವರಿಸುತ್ತಾನೆ. 'ಬೆಳಗಿನ ಜಾವದಲ್ಲಿ ನಾವೆಲ್ಲರೂ ಮಹಾಜಲಪ್ರವಾಹವೊಂದರಲ್ಲಿ ಸಿಲುಕಿದ್ದೆವು. ಆದರೂ ಯಾರೂ ಮುಳುಗಲಿಲ್ಲ. ಎಲ್ಲರೂ ಸಂತೋಷದಿಂದ ನರ್ತಿಸುತ್ತಿದ್ದೆವು. ಅಷ್ಟರಲ್ಲಿ ಎದುರುಗಾಳಿ ಬೀಸಿ ಪ್ರವಾಹದ ವೇಗ ತಗ್ಗಿಹೋಯಿತು. ಅನಂತರ ತೇಜೋಮಯವಾದ ಪುರುಷನೊಬ್ಬ ಬಂದು ನಮ್ಮನ್ನೆಲ್ಲ ಎತ್ತಿ ಬೆಂಕಿಗೆ ಹಾಕಿದ. ಆದರೆ ಯಾರಿಗೂ ಸುಟ್ಟ ಘಾಯಗಳಾಗಲಿಲ್ಲ. ಬಳಿಕ ಒಂದು ಮೋಡವು ಉದಿಸಿ ರಕ್ತದ ಮಳೆಯನ್ನೇ ಸುರಿಸಿತು. ಅದರಿಂದ ದಿಕ್ಕುಗಳೆಲ್ಲ ಕೆಂಪಾದುವು. ಅಷ್ಟರಲ್ಲಿ ಬೆಳಗಾಗಿತ್ತು. ಎಚ್ಚರವೂ ಆಯಿತು.

ಈ ಸ್ವಪ್ನಕ್ಕೆ ಮುನಿ ಸುವಾಸಕುಮಾರನು ಈ ರೀತಿ ಅರ್ಥವನ್ನು ಹೇಳುತ್ತಾನೆ. 'ಈ ಸ್ವಪ್ನದ ಪ್ರಕಾರ ಏಳ್ಗೆಯೆಂಬುದು ಕಷ್ಟಪಟ್ಟರೆ ಮಾತ್ರ ಲಭಿಸತಕ್ಕದ್ದು. ನೀರಿನ ಪ್ರವಾಹವೆಂಬುದು ಮಹಾಸಂಗ್ರಾಮ. ಅದರಲ್ಲಿ ಮುಳುಗದೆ ಇದ್ದದ್ದು ನಿಮ್ಮ ಧೈರ್ಯವನ್ನು ಸೂಚಿಸುತ್ತದೆ. ನೀರಿನಲ್ಲಿ ಕೊಚ್ಚಿಹೋಗುತ್ತಿದ್ದುದು ಹಾಗೂ ನೃತ್ಯ ಮಾಡುತ್ತಿದ್ದುದು ಬದಲಾವಣೆಗಳನ್ನು ಸೂಚಿಸುತ್ತದೆ. ನಂತರ ಬಂದ ಗಾಳಿ ಯಾರೋ ಬಂದು ರಕ್ಷಿಸುವ ಸೂಚನೆ. ತೇಜೋಮಯನಾದ ಪುರುಷ ಸಾಕ್ಷಾತ್ ಶಂಕರನೇ. ಬೆಂಕಿಯಲ್ಲಿ ಬಿದ್ದದ್ದು ಮಹಾಯುದ್ಧದ ಮುನ್ಸೂಚನೆ. ಮೇಘೋದಯವು ಮತ್ತೆ ಭಯಹುಟ್ಟುವುದೆಂಬುದರ ಸೂಚನೆ. ರಕ್ತಧಾರೆಯು ಭಯನಿವಾರಣೆಯ ಸೂಚನೆ. ದಿಕ್ಕುಗಳು ರಕ್ತದಿಂದ ತುಂಬುವುದು ಅಭಿವೃದ್ಧಿಯ ಸಂಕೇತ.

ಸ್ವಪ್ನವೆಂಬುದು ಅನೇಕಬಾರಿ ಅನ್ಯಾರ್ಥವನ್ನೂ, ಸತ್ಯವನ್ನೂ, ಅಪಾರ್ಥವನ್ನೂ ಹೇಳುತ್ತದೆ. ಈ ಸ್ವಪ್ನ ಅನ್ಯಾರ್ಥಸೂಚಕ. ಪ್ರಸನ್ನರಾದ ದೇವತೆಗಳು ವರವನ್ನು ಕೊಡುವಂತೆ ಆಗುವ ಕನಸು ಯಥಾರ್ಥವಾದದ್ದು. ಗಾಢವಾದ ಅನುಭವ, ಚಿಂತೆ ಇತ್ಯಾದಿಗಳು ಕನಸಿನಲ್ಲಿ ತೋರಿದರೆ ಅದು

ಅಪಾರ್ಥಸ್ವಪ್ನ. ಬಾಹ್ಯಾರ್ಥದಿಂದ ವಿಮುಖವಾದರೂ ರಜೋಗುಣದಿಂದ ಕೂಡಿದ ಮನಸ್ಸಿನಿಂದ ಜೀವಿಯು ನಿದ್ರೆಯಲ್ಲಿ ಅದೇ ಕಾರಣಗಳಿಂದಲೇ ಕನಸು ಕಾಣುತ್ತಾನೆ. ಆ ಕನಸಿನ ಕಾಲವಿಶೇಷಕ್ಕೆ ತಕ್ಕಂತೆ ಅದು ಶೀಘ್ರವಾಗಿಯೋ ನಿಧಾನವಾಗಿಯೋ ಫಲಕಾರಿಯಾಗುತ್ತದೆ. ಆದರೆ ಬೆಳಗಿನ ಜಾವದಲ್ಲಿ ಕಂಡ ಕನಸು ಬೇಗನೆ ಫಲಕಾರಿಯಾಗುತ್ತದೆ.

ಇದು ಸ್ವಪ್ನಶಾಸ್ತ್ರದ ಬಗ್ಗೆ ಒಂದು ಸಂಕ್ಷಿಪ್ತವಾದ ವಿಚಾರಧಾರೆ. ಮತ್ತೆ ಕಥೆಯ ಬಗ್ಗೆ ಬಂದಾಗ, ಪ್ರಹಸ್ತನೆಂಬ ಮಹಾವೀರನನ್ನು ಶ್ರುತಶರ್ಮನ ಕಡೆಗೆ ದೂತನಾಗಿ ಕಳಿಸಲಾಗಿದ್ದು ಅವನ ದೌತ್ಯ ವಿಫಲವಾಗುತ್ತದೆ. ಸಂಗ್ರಾಮ ನಿಶ್ಚಿತವಾಗುತ್ತದೆ. ಆ ರಾತ್ರಿ ಸೂರ್ಯಪ್ರಭನು ಸಮರದೀಕ್ಷೆಯಲ್ಲಿ ವ್ರತನಿಷ್ಠನಾಗಿ ಮಲಗಿದ್ದಾಗ ವಿಲಾಸಿನಿಯೆಂಬ ಅಸುರಕುವರಿ ಅಲ್ಲಿಗೆ ಮೆಲ್ಲನೆ ಬರುತ್ತಾಳೆ. ಸೂರ್ಯಪ್ರಭನು ನಿದ್ರಿಸುತ್ತಿದ್ದಾನೆಂದು ತಿಳಿದು ತನ್ನ ಸಖಿಗೆ ಹೇಳುತ್ತಾಳೆ. 'ಈತನಿಗೆ ಎಲ್ಲವೂ ಸಿದ್ಧಿಸಿದೆ. ಆದರೇನು ? ಓಷಧಿಗಳು ಇನ್ನೂ ಸಿದ್ಧಿಸಿಲ್ಲ. ಚಂದ್ರಪಾದಗಿರಿಯ ಗುಹೆಯಲ್ಲಿ ಎಲ್ಲ ಓಷಧಿಗಳೂ ಇವೆ. ಇಂದೇ ಹೋಗಿ ಅವನ್ನು ಸಿದ್ಧಿಸಿಕೊಳ್ಳಬೇಕು.' ಹೀಗೆ ಹೇಳಿ ಅವಳು ಹೊರಟನಂತರ ಅದನ್ನು ಕೇಳಿಸಿಕೊಂಡಿದ್ದ ಸೂರ್ಯಪ್ರಭನು ಎದ್ದು ಅವಳು ಸುಮೇರುವಿನ ತಮ್ಮನ ಮಗಳು ವಿಲಾಸಿನಿ ಎಂದು ವಿಚಾರಿಸಿ ಅರಿಯುತ್ತಾನೆ. ಅನಂತರ ಸಚಿವಾದಿಗಳೊಡನೆ ಚಂದ್ರಪಾದಗಿರಿಗೆ ಹೋಗಿ ಪ್ರಭಾಸನನ್ನು ಗುಹೆಯೊಳಗೆ ಕಳುಹಿಸಿ ಓಷಧಿಗಳನ್ನು ಪಡೆದುಕೊಳ್ಳುತ್ತಾನೆ.

ಅಂದು ರಾತ್ರಿ ಸೂರ್ಯಪ್ರಭನು ಪುನಃ ರಣದೀಕ್ಷೆಯಲ್ಲಿ ಮಲಗುತ್ತಾನೆ. ಇಲ್ಲಿಗೆ ಈ ತರಂಗ ಮುಗಿಯುತ್ತದೆ. ಚಿತ್ರವಿಚಿತ್ರ ಘಟನೆಗಳ ಕದಂಬವಾದ ಈ ತರಂಗದಲ್ಲಿ ಸಮರಕ್ಕೆ ಪೂರ್ವಭಾವಿಸಿದ್ಧತೆಯಾಗಿ ಬಲಸಂವರ್ಧನೆಯ ಯತ್ನಗಳು ನಡೆಯುತ್ತವೆ. ಮಾನವ ದಾನವ ಸಂಬಂಧಗಳು ಮತ್ತಷ್ಟು ಬಲವಾಗುತ್ತವೆ.

ನಾಲ್ಕನೆಯ ತರಂಗವು ಸೈನ್ಯವೀಕ್ಷಣೆಯಿಂದ ಆರಂಭವಾಗುತ್ತದೆ. ಸುನೀಥನು ಮಯನನ್ನು ತಮ್ಮ ಸೈನ್ಯದ ರಥಾದಿವಿಭಾಗಗಳನ್ನು ಹೇಗೆ ಮಾಡಬೇಕೆಂದು ಕೇಳಿದ ಪ್ರಕಾರ ಮಯನು ಪ್ರತಿಯೊಬ್ಬ ನಾಯಕನನ್ನೂ, ವಿಭಾಗವನ್ನೂ ನಿರ್ದೇಶಿಸಿ ಹೇಳುತ್ತಾನೆ. ಅರ್ಧರಥಿಗಳು, ಅರ್ಧರಥರು, ಪೂರ್ಣರಥರು, ದ್ವಿಗುಣರಥರು, ತ್ರಿಗುಣರು, ಪಂಚಗುಣರು, ಷಡ್‌ಗುಣರಥಿಗಳು, ಸಪ್ತರಥಿಗಳು, ಮಹಾರಥಗಣದ ಒಡೆಯರು, ಮಹಾರಥರು, ಮಹಾರಥಗಣಮುಖ್ಯರು, ಅತಿರಥಮುಖ್ಯರು, ರಥಾತಿರಥಪತಿಗಳು, ರಥಗಣಮುಖ್ಯರು, ರಥಾತಿರಥಗಣಮುಖ್ಯರು, ಅತಿರಥ ಯೂಥಾಧಿಪತಿಗಳ ಅಧಿಪತಿಗಳು, ಸೇನಾನಾಯಕರು, ಮಹಾರಥಯೂಥಪತಿಗಳು, ಎಂದು ಅವರ ಹೆಸರುಗಳೊಡನೆ ಮಹಾವಿಭಾಗಗಳನ್ನು ತೋರಿಸುತ್ತಾನೆ.

ವ್ಯೂಹರಚನೆಗಳ ನಂತರ ಸಮರವು ಪ್ರಾರಂಭವಾಗುತ್ತದೆ. ಭೂಮಿ ಕೆಂಪಾಗುತ್ತದೆ. ಆ ಮಹಾಸಂಗ್ರಾಮವನ್ನು ಕವಿ ಈ ರೀತಿ ವರ್ಣಿಸುತ್ತಾನೆ. ದಶದಿಕ್ಕುಗಳಲ್ಲೂ ಬಾಣಗಳೆಂಬ ಮೋಡಗಳು ಕವಿಯುತ್ತವೆ. ಬಾಣಗಳ ಸಂಘರ್ಷದಿಂದ ಉಂಟಾದ ಕಿಡಿಗಳೇ ಮಿಂಚುಗಳು, ಆನೆ ಕುದುರೆಗಳ ದೇಹಗಳಿಂದ ಸುರಿದ ರಕ್ತಧಾರೆಯೇ ಮಳೆಯ ಧಾರಾಪ್ರವಾಹ. ಆ ರಕ್ತ ಪ್ರವಾಹದಲ್ಲಿ ತೋರಿದ ಯೋಧರ ಶರೀರಗಳೇ ಮೇಘಗಳು. ಒಟ್ಟಿನಲ್ಲಿ ಅದೊಂದು ಸಮರದ ವರ್ಷಾಕಾಲ.

ಸೈನ್ಯಗಳ ಯುದ್ಧಾನಂತರ ಸೇನಾನಾಯಕರ ದ್ವಂದ್ವಯುದ್ಧ ಆರಂಭವಾಗುತ್ತದೆ. ಎರಡು ಪಕ್ಷಗಳಲ್ಲೂ ಭಯಂಕರವಾದ ಸಾವುನೋವುಗಳು. ಆ ರಕ್ತದಿಂದ ತೊಯ್ದಿದ್ದ ಸಮರಾಂಗಣವು ಮಾತ್ರವಲ್ಲ, ಸಂಧ್ಯಾಸಾನ್ನಿಧ್ಯದಿಂದ ಆಕಾಶವೂ ರಕ್ತವರ್ಣವಾಯಿತು. ಈ ಅಸಂಭಾವ್ಯವನ್ನು ನೋಡಲಾರದೆ ಸೂರ್ಯನೂ ದುಗುಡದಿಂದಲೋ ಎಂಬಂತೆ ಅಸ್ತಂಗತನಾಗುತ್ತಾನೆ. ಬಹಳ ಜನ ಶೂರರನ್ನು ಕಳೆದುಕೊಂಡ ಸೂರ್ಯಪ್ರಭನು ನೊಂದು ನಿದ್ರೆಯಿಲ್ಲದೆ ಸಚಿವಾದಿಗಳೊಡನೆ ಕಥಾಪ್ರಸಂಗಗಳನ್ನು ಚರ್ಚಿಸುತ್ತಾ ರಾತ್ರಿಯನ್ನು ಕಳೆಯುತ್ತಾನೆ.

ಆ ಸಂದರ್ಭದಲ್ಲಿ ಸಾಂತ್ವನಕ್ಕಾಗಿ ಬಂದ ಆತನ ಭಾರ್ಯೆಯರು ಮಾತನಾಡಿಕೊಳ್ಳುವುದನ್ನು ಕವಿಯು ಚಿತ್ರಿಸುತ್ತಾನೆ. ಸಮರ ಸನ್ನಿವೇಶದ ಪರಿವೆಯೇ ಇಲ್ಲದ ಆ ಅಂತಃಪುರಸ್ತ್ರೀಯರ ಸ್ವಭಾವಗಳನ್ನೂ, ರಾಜರ ಸ್ತ್ರೀವಿಷಯಕ ಚಾಪಲ್ಯಗಳನ್ನೂ, ಸ್ತ್ರೀಯರ ಗುಣಲಕ್ಷಣಗಳನ್ನೂ ಈ ಸಂವಾದದಲ್ಲಿ ಕವಿಯು ತೋರಿಸುತ್ತಾನೆ. ಎಂತಹ ಸನ್ನಿವೇಶವಿದ್ದರೂ ಸ್ತ್ರೀಯರು ಒಂದೆಡೆ ಕುಳಿತರೆ ತಮ್ಮ ಮತ್ತು ಬೇರೆಯವರ ಬಗ್ಗೆ ಒಂದು ಕ್ಷಣವೂ ಮಾತನಾಡದೇ ಇರಲಾರರು. 'ಸ್ತ್ರೀಣಾಂ ನ ಸ ಕ್ಷಣೋ ಯತ್ರ ನ ಕಥಾ ಸ್ವಪರಾಶ್ರಯಾ' ಎಂಬ ಪೀಠಿಕೆಯೊಡನೆ ಈ ಹರಟೆಯ ಸ್ವಭಾವವನ್ನು ಚಿತ್ರಿಸುವ ಸಂವಾದ ಆರಂಭಗೊಳ್ಳುತ್ತದೆ.

ರಾಜಪುತ್ರಿಯೊಬ್ಬಳು ಈ ರೀತಿ ಹೇಳುತ್ತಾಳೆ. 'ಏನಿದಾಶ್ಚರ್ಯ ! ನಮ್ಮ ಆರ್ಯಪುತ್ರನು ಅಂಗನೆಯಿಲ್ಲದೆ ಏಕಾಂಗಿಯಾಗಿ ಹೇಗೆ ಮಲಗಿದನು ? ಅದಕ್ಕೆ ಮತ್ತೊಬ್ಬಳ ಉತ್ತರ ಇದು. 'ಇಂದು ಯುದ್ಧದಲ್ಲಿ ತನ್ನವರನ್ನು ಕಳೆದುಕೊಂಡು ನೋವು ಅನುಭವಿಸುತ್ತಿರುವ ನಮ್ಮ ಪತಿ ಸ್ತ್ರೀಸುಖವನ್ನರಸುವನೆ ?' ಇವಳು ಸ್ವಲ್ಪ ವಿವೇಕವುಳ್ಳವಳು ಹಾಗೂ ಸನ್ನಿವೇಶದ ಜ್ಞಾನವಿರುವವಳು. ಆಗ ಮತ್ತೊಬ್ಬಳು ಹೇಳುತ್ತಾಳೆ. 'ಹೊಸಬಳಾದ ಸುಂದರಕನ್ಯೆ ದೊರೆತಳೆಂದರೆ ಈ ದುಃಖವನ್ನು ಈಗಲೇ ಮರೆಯಬಲ್ಲವನು ನಮ್ಮ ಪತಿರಾಯ.' ಇವಳಿಗೆ ಪತಿಯ ಬಗ್ಗೆ ನಂಬಿಕೆಯಿಲ್ಲ. ಮತ್ತೊಬ್ಬಳು 'ಸ್ತ್ರೀ ಲಂಪಟನೇ ಆಗಿದ್ದರೂ ಇಂತಹ ದುಃಖದ ಸಂದರ್ಭದಲ್ಲಿ ಲಂಪಟತನವನ್ನು ತೋರಲಾರ.' ಎನ್ನುತ್ತಾಳೆ. ಸನ್ನಿವೇಶದ ಬಗ್ಗೆ ಇವಳಿಗೆ ಪರಿಜ್ಞಾನ ಹೆಚ್ಚು.

ಇವರೆಲ್ಲರೂ ಹೀಗೆ ಮಾತನಾಡುತ್ತಿದ್ದಾಗ ಒಬ್ಬಳಿಗೆ ಆಶ್ಚರ್ಯವೋ ಆಶ್ಚರ್ಯ. 'ನಮ್ಮ ಪತಿರಾಯ ಈ ರೀತಿಯ ಸ್ತ್ರೀಲಂಪಟ ಹೇಗೆ ಆದ ?' ಎಂದು ಕೇಳುತ್ತಾಳೆ. 'ಹೊಸಹೊಸದಾಗಿ ರಾಜಕನ್ಯೆಯರನ್ನು ಮತ್ತೆ ಮತ್ತೆ ಆತ ವಿವಾಹ ಮಾಡಿಕೊಳ್ಳುತ್ತಿದ್ದರೂ ತೃಪ್ತಿಹೊಂದುತ್ತಿಲ್ಲವಲ್ಲ !' ಇದು ಇವಳ ಅನುಭವದ ಮಾತು. ಆಗ ಮನೋವತಿಯೆಂಬ ವಿದಗ್ಧೆ ರಾಜರ ಈ ಮನೋಭಾವಕ್ಕೆ ಕಾರಣಗಳನ್ನು ಹೇಳುತ್ತಾ ವಿಶ್ಲೇಷಣೆ ಮಾಡುತ್ತಾಳೆ. ರಾಜಾನೋ ಬಹುವಲ್ಲಭಾಃ ಎಂದು ಕೇಳಿಲ್ಲವೇ. ವರನಾರಿಯರು ದೇಶ, ರೂಪ, ವಯಸ್ಸು, ನಡವಳಿಕೆ, ಜ್ಞಾನ ಮುಂತಾದುವುಗಳಿಂದ ಭಿನ್ನಭಿನ್ನರಾಗಿರುತ್ತಾರೆ. ಯಾವ ಒಬ್ಬಳೂ ಎಲ್ಲ ಗುಣಗಳಿಂದಲೂ ಕೂಡಿರುವುದಿಲ್ಲ.

ಕರ್ಣಾಟ, ಲಾಟ, ಸೌರಾಷ್ಟ್ರ, ಮಧ್ಯದೇಶ ಮುಂತಾದ ದೇಶಗಳಲ್ಲಿ ಹುಟ್ಟಿದ ಸ್ತ್ರೀಯರು ತಮ್ಮ ತಮ್ಮ ದೇಶಗಳ ವಿಶಿಷ್ಟ ಆಚಾರಗಳಿಂದ ಸಂತೋಷಗೊಳಿಸುತ್ತಾರೆ. ಕೆಲವು ಸುಂದರಿಯರು ಮುಖಶರಚ್ಚಂದ್ರಕಾಂತಿಯಿಂದ ಶೋಭಿಸುತ್ತಾರೆ. ಕೆಲವರು ಮನ್ಮಥನ ಸಿಂಹಾಸನವಾದ ಜಘನಗಳ

ಸೌಂದರ್ಯದಿಂದ, ಕೆಲವರು ಇತರ ಅಂಗಗಳ ಸಂಮೋಹಕ ಲಾವಣ್ಯದಿಂದ ಮನೋಹಾರಿಣಿಯಾಗಿರುತ್ತಾರೆ. ಒಬ್ಬಳು ಕನಕಗೌರಾಂಗಿ, ಮತ್ತೊಬ್ಬಳು ಪ್ರಿಯಂಗುಶ್ಯಾಮಲೆ, ಮತ್ತೊಬ್ಬಳದು ಪುಟಿಯುತ್ತಿರುವ ರಕ್ತದ ಕಾಂತಿ. ಒಬ್ಬಳು ಪ್ರೌಢೆಯಾಗಿದ್ದು ಬೆಡಗು ಬಿನ್ನಾಣಗಳಿಂದ ಮನಸ್ಸು ಸೆಳೆಯುತ್ತಾಳೆ. ಒಬ್ಬಳ ನಗು, ಸೊಗಸು, ಮತ್ತೊಬ್ಬಳ ಹುಸಿಕೋಪವೇ ಚಂದ. ಒಬ್ಬಳು ಗಜಗಮನೆ, ಮತ್ತೊಬ್ಬಳು ಹಂಸಿನಿಯಂತೆ ವಿಲಾಸಗಮನೆ. ಒಬ್ಬಳ ನುಡಿ ಅಮೃತ. ಒಬ್ಬಳು ಮನದಿಂಗಿತವನ್ನು ಭ್ರೂವಿಲಾಸದಿಂದ ತಿಳಿಸುತ್ತಾಳೆ. ಒಬ್ಬಳು ನೃತ್ಯದಿಂದ, ಮತ್ತೊಬ್ಬಳು ಗಾಯನದಿಂದ, ವೀಣಾದಿವಾದನದಿಂದ ಮಗುದೊಬ್ಬಳು. ಒಬ್ಬಳು ಬಾಹ್ಯರಸಾಭಿಜ್ಞೆ, ಮತ್ತೊಬ್ಬಳು ಆಭ್ಯಂತರ ರತಾಭಿಜ್ಞೆ. ಅಂದರೆ ಪ್ರೀತಿಸುವಕಲೆ ಒಬ್ಬಳಿಗೆ ಗೊತ್ತಿದ್ದರೆ ಮತ್ತೊಬ್ಬಳು ಅಂತರಂಗದ ಪ್ರೀತಿ ಸಂಪಾದಿಸುವುದರಲ್ಲಿ ಕುಶಲೆ. ಒಬ್ಬಳು ಅಲಂಕಾರದಿಂದ ಆಕರ್ಷಿಸಿದರೆ ಮತ್ತೊಬ್ಬಳು ವಿದಗ್ಧತೆಯಿಂದ. ಪತಿಯ ಮನವನ್ನು ಗೆಲ್ಲುವ ಕಲೆಯನ್ನು ಕರಗತಮಾಡಿಕೊಂಡಿರುವವಳೇ ಸೌಭಾಗ್ಯವತಿ. ಇವೆಲ್ಲ ನಿದರ್ಶನ ಮಾತ್ರ. ಇನ್ನೂ ಎಷ್ಟೋ ಗುಣಗಳಿರಬಹುದು. ಎಲ್ಲವೂ ಒಬ್ಬಳಲ್ಲೇ ಇರುವುದಿಲ್ಲ. ಕೆಲವು ಗುಣಗಳನ್ನು ಮಾತ್ರ ಒಬ್ಬಳಲ್ಲಿ ಕಾಣಬಹುದು. ಆದ್ದರಿಂದ ನಾನಾ ರುಚಿಗಳ ಅನುಭವಕ್ಕೆ ಮಾರು ಹೋದ ರಾಜರಿಗೆ ಎಷ್ಟು ಬಾರಿ ಮದುವೆಯಾದರೂ ತೃಪ್ತಿಯೇ ಇಲ್ಲ.

ಆದರೆ ನಮ್ಮ ಪತಿ ಪರಸ್ತ್ರೀಸಂಗ ಮಾಡುವವನಲ್ಲ. ನಾವು ಅವನಲ್ಲಿ ಸುಮ್ಮನೆ ದೋಷ ಕಾಣಬಾರದು ಎಂದು ಹೇಳಿ ವಿದಗ್ಧೆಯಾದ ಮನೋವತಿಯು ತನ್ನ ವಿಶ್ಲೇಷಣೆಯನ್ನು ನಿಗಮನಗೊಳಿಸುತ್ತಾಳೆ. ಯುದ್ಧದ ಭೀಕರ ಸನ್ನಿವೇಶದಲ್ಲೂ ಅಂತಃಪುರಸ್ತ್ರೀಯರು ತೇಲುವ ಲೋಕವೇ ಬೇರೆ, ರುದ್ರ ಭಯಾನಕ ಸನ್ನಿವೇಶಗಳಲ್ಲೂ ಅವರ ಶೃಂಗಾರಭಾವಗಳು ನಿರರ್ಗಳವಾಗಿ ಹೊರಹೊಮ್ಮುತ್ತವೆ ಎಂದು ಹೇಳುವುದು ಕವಿಯ ಆಶಯ. ಪರಮಶೂರನಾದ ಸೂರ್ಯಪ್ರಭನಿರುವಾಗ ಅವರಿಗೆ ಪ್ರಾಯಃ ಸಮರಭೀತಿ ಇಲ್ಲವೇ ಇಲ್ಲ.

ಅಂತೂ ಹಾಗೆ ಮಾತಿಗೆ ಮಾತು ಸೇರಿ ಭಾವನೆಗಳು ಉಕ್ಕಿ ಹರಿಯುತ್ತಿದ್ದಾಗ ರಾತ್ರಿದೇವಿಯೂ ಹಿಂದೆ ಮೆಲ್ಲನೆ ಸರಿಯುತ್ತಾಳೆ. ಸೂರ್ಯಪ್ರಭನು ಶತ್ರುಮರ್ದನಕ್ಕೆ ಸಿದ್ಧನಾಗುತ್ತಾನೆ.

ಐದನೆಯ ತರಂಗದಲ್ಲಿ ಯುದ್ಧವು ಮುಂದುವರಿಯುತ್ತದೆ. ವ್ಯೂಹರಚನೆ ಮಾಡಿಕೊಂಡು ವೀರರು ಯುದ್ಧನಿರತರಾಗುತ್ತಾರೆ. ಇದರಲ್ಲಿ ಸೂರ್ಯಪ್ರಭನಿಗೇ ಗೆಲುವು. ಅಷ್ಟರಲ್ಲಿ ಶತ್ರುವಾದ ಶ್ರುತವರ್ಮನ ಪಕ್ಷದಿಂದ ಇಬ್ಬರು ವಿದ್ಯಾಧರರು ಬಂದು ಸೂರ್ಯಪ್ರಭನನ್ನು ಸೇರಿಕೊಳ್ಳುತ್ತಾರೆ. ಶತ್ರುಪಾಳೆಯದಲ್ಲಿ ಉಂಟಾದ ಒಡಕಿನಿಂದ ಸಂತುಷ್ಟನಾಗಿ ಹಾಗೂ ಯುದ್ಧದಲ್ಲಾದ ಶತ್ರುನಾಶದಿಂದ ಬೀಗುತ್ತಾ ಸೂರ್ಯಪ್ರಭನು ಸಚಿವರೊಡನೆ ವಿಶ್ರಾಂತಿಗೃಹವನ್ನು ಪ್ರವೇಶಿಸುತ್ತಾನೆ.

ಆರನೆಯ ತರಂಗದಲ್ಲಿ ಸಚಿವನಾದ ವೀತಭೀತಿಗೆ, ಮನೋವಿನೋದಕ್ಕಾಗಿ ಸತ್ವವೀರಗಳಿಗೆ ಆಶ್ರಯವಾದ ಒಳ್ಳೆಯ ಕಥೆ ಹೇಳು ಎಂದು ಸೂರ್ಯಪ್ರಭನು ಕೇಳುತ್ತಾನೆ. ಆಗ ವೀತಭೀತಿಯು ಗುಣಶರ್ಮನೆಂಬವನ ಕಥೆಯನ್ನು ಹೇಳುತ್ತಾನೆ. ಈ ಕಥೆಯು ಈ ಇಡೀ ತರಂಗವನ್ನು ವ್ಯಾಪಿಸಿ ಕೊಂಡಿದೆ.

ಗುಣಶರ್ಮನು ರಾಜನಾದ ಮಹಾಸೇನನ ಆಪ್ತಮಿತ್ರ. ಅವನು ಸಕಲಕಲಾವಲ್ಲಭ. ಒಮ್ಮೆ

ಅವನನ್ನು ನೃತ್ಯ ಮಾಡಿ ತೋರಿಸೆಂದು ರಾಜನು ಹೇಳಿದಾಗ ಅವನು ಮಾಡಿದ ನೃತ್ಯವನ್ನು ನೋಡಿ ರಾಣಿಗೆ ಅವನಲ್ಲಿ ಮನಸ್ಸಾಗುತ್ತದೆ. ಅವನು ವೀಣಾವಾದನ, ಶಸ್ತ್ರಾಸ್ತ್ರ ವಿದ್ಯೆಗಳನ್ನೆಲ್ಲ ತೋರಿಸುತ್ತಾನೆ. ರಾಣಿಯು ತನಗೆ ವೀಣಾವಾದನವನ್ನು ಗುಣಶರ್ಮನಿಂದ ಹೇಳಿಸಬೇಕೆಂದು ರಾಜನಿಗೆ ಹೇಳಿ ಒಪ್ಪಿಸುತ್ತಾಳೆ. ವೀಣಾಶಿಕ್ಷಣವನ್ನು ಒಲ್ಲದ ಮನಸ್ಸಿನಿಂದ ಗುಣಶರ್ಮ ಆರಂಭಿಸಿದಾಗ ರಾಣಿಯು ತನ್ನನ್ನು ಪರಿಗ್ರಹಿಸಲು ಕೇಳುತ್ತಾಳೆ. ಗುಣಶರ್ಮನು ಒಪ್ಪುವುದಿಲ್ಲ. ರಾಣಿಯು ಕ್ರೋಧದಿಂದ ಅವನ ಮೇಲೆ ಮಿಥ್ಯಾರೋಪಗಳನ್ನು ಮಾಡಿ ರಾಜನಿಗೆ ಹೇಳಿದಾಗ ರಾಜನು ಆಸ್ಥಾನದಲ್ಲಿ ಗುಣಶರ್ಮನ ಮೇಲೆ ಮಾಡಲಾದ ಆರೋಪಗಳನ್ನು ಹೇಳಿ ಅವನನ್ನು ಕೊಲ್ಲಲು ಯತ್ನಿಸಿದಾಗ ಗುಣಶರ್ಮನು ಚಾತುರ್ಯದಿಂದ ತಪ್ಪಿಸಿಕೊಂಡು ತನ್ನ ಮೇಲೆ ಬಿದ್ದ ನೂರಾರು ಯೋಧರನ್ನು ಕೊಂದು ಕಣ್ಣಿಗೆ ಅಂಜನ ಹಾಕಿಕೊಂಡು ಅದೃಶ್ಯನಾಗಿ ದಕ್ಷಿಣಾಪಥದೆಡೆಗೆ ಹೊರಟುಬಿಡುತ್ತಾನೆ. ಅಲ್ಲಿ ಬ್ರಾಹ್ಮಣಗುರುವೊಬ್ಬನನ್ನು ಸಂಧಿಸಿ ತನ್ನ ಕಥೆಯನ್ನೆಲ್ಲ ಹೇಳುತ್ತಾನೆ. ಆ ಬ್ರಾಹ್ಮಣನ ಕೋರಿಕೆಯಂತೆ ಅವನಲ್ಲಿಯೇ ರಹಸ್ಯವಾಗಿ ತಂಗಿ ತನ್ನ ಮನೋರಥಗಳ ಸಿದ್ಧಿಯಂತೆ ಕಾಣುತ್ತಿದ್ದ ಅವನ ಮಗಳನ್ನು ಮದುವೆಯಾಗುತ್ತಾನೆ. ಆ ವಿಪ್ರನು ಹೇಳಿಕೊಟ್ಟ ಮಂತ್ರವನ್ನು ಸಿದ್ಧಿ ಮಾಡಿಕೊಂಡು ಮಹಾಸೇನರಾಜನನ್ನು ಜಯಿಸಿ ರಾಜ್ಯವನ್ನು ಹೊಂದಿ ಸಾಮ್ರಾಟನಾಗುತ್ತಾನೆ. ಈ ಕಥೆಯ ಭರತವಾಕ್ಯವಾಗಿ ವ್ಯಕ್ತಿವಿಶೇಷಗಳ ಅಂತಃಸತ್ವವನ್ನು ತಿಳಿಯದ ಮೂಢ ಮಹಾಸೇನರಾಜ ಮಹಾವಿಪತ್ತಿಗೊಳಗಾದ, ಧೈರ್ಯವೊಂದನ್ನೇ ಸಹಾಯವೆಂದು ತಿಳಿದ ಗುಣಶರ್ಮ ಅಭಿವೃದ್ಧಿಯನ್ನು ಪಡೆದ, ಎನ್ನುತ್ತಾನೆ ಕವಿ.

ಈ ಇಡೀ ತರಂಗವನ್ನು ವ್ಯಾಪಿಸಿರುವ ಗುಣಶರ್ಮನ ಕಥೆಯು ವಿವರಗಳಲ್ಲಿ ಸ್ವಾರಸ್ಯಕರವಾಗಿರುವ ಕಥೆ. ಗುಣಶರ್ಮನು ರಾಜನನ್ನು ಅನೇಕಬಾರಿ ಕಾಪಾಡುವ ಶೌರ್ಯವೃತ್ತಾಂತ, ಗುಣಶರ್ಮನ ಧ್ಯೇಯಮಾರ್ಗ, ರಾಜನೀತಿಕೌಶಲಗಳು, ಇವೆಲ್ಲ ವಿವರಗಳನ್ನು ನೋಡಿದಾಗ ಗುಣಶರ್ಮನು ಈ ತರಂಗದ ನಾಯಕನಾಗಿ ಶೋಭಿಸುತ್ತಾನೆ.

ವೀತಭೀತಿಯು ಹೇಳಿದ ಈ ವೀರರಸಮಯವಾದ ಕಥೆಯನ್ನು ಕೇಳಿದ ಸೂರ್ಯಪ್ರಭನಿಗೆ ತನ್ನ ಮುಂದಿರುವ ಮಹಾಸಾಗರೋಪಮವಾದ ಸಮರವನ್ನು ದಾಟಲು ಉತ್ಸಾಹವು ವರ್ಧಿಸುತ್ತದೆ.

ಏಳನೆಯ ತರಂಗದಲ್ಲಿ ಮಹಾಸಮರ ಮುಂದುವರಿಯುತ್ತದೆ. ಇದರಲ್ಲಿ ಅಶ್ವಿನೀ ದೇವತೆಗಳು, ಕುಬೇರ, ಹರಿ, ಹರರೆಲ್ಲರೂ ಸೇರುತ್ತಾರೆ. ಇಂದ್ರನು ಕೂಡ ಈ ಯುದ್ಧದಲ್ಲಿ ವಜ್ರಾಯುಧಪ್ರಯೋಗ ಮಾಡುತ್ತಾನೆ. ಕೊನೆಗೆ ಹರನು ಎಲ್ಲರನ್ನೂ ಸಂಧಿಮಾಡಿಕೊಳ್ಳಲು ಸೂಚಿಸುತ್ತಾನೆ. ಅದರಂತೆ ಶ್ರುತಶರ್ಮನು ಸೂರ್ಯಪ್ರಭನಿಗೆ ಪ್ರಣಾಮ ಮಾಡುತ್ತಾನೆ. ಇಬ್ಬರೂ ಕಂಠಾಲಿಂಗನ ಮಾಡಿಕೊಳ್ಳುತ್ತಾರೆ. ವೈರವು ಅಳಿಯುತ್ತದೆ. ಸೂರ್ಯಪ್ರಭನಿಗೆ ದಕ್ಷಿಣವೇದಿಯ ಅರ್ಧಕ್ಕೆ ಚಕ್ರವರ್ತಿಯಾಗಲು ಹಾಗೂ ಉತ್ತರವೇದಿಯ ಅರ್ಧವನ್ನು ಶ್ರುತಶರ್ಮನಿಗೆ ಕೊಡಲು ಆದೇಶಿಸುತ್ತಾನೆ. ಮತ್ತೆ ಯುದ್ಧದಲ್ಲಿ ಮಡಿದವರೆಲ್ಲರೂ ಜೀವ ತಳೆಯುವಂತೆ ಅನುಗ್ರಹಿಸುತ್ತಾನೆ.

ಸುರಾಸುರರು ಸಂತೋಷದಿಂದ ಮಿತ್ರರಾಗಿ ಬಾಳಬೇಕು ಎಂಬ ಸಂದೇಶವನ್ನು ದನು ದೇವಿಯು ಕಳುಹಿಸುತ್ತಾಳೆ. ಅದನ್ನು ಕೇಳಿ ಬೃಹಸ್ಪತಿಯು ಹೇಳುತ್ತಾನೆ. 'ದೇವತೆಗಳಿಗೆ ಅಸುರರ ಬಗ್ಗೆ ಯಾವ

ಆಗ್ರಹವೂ ಇಲ್ಲದಿದ್ದರೂ ಅವರು ದೇವತೆಗಳಿಗೆ ತೊಂದರೆ ಕೊಡುತ್ತಲೇ ಇರುತ್ತಾರೆ.' ಆಗ ಮಯನು ಹೇಳುತ್ತಾನೆ.

"ಅಸುರರು ಹಿಂಸೆ ಕೊಡುವವರಾದರೆ ನಮುಚಿಯು ಮೃತಸಂಜೀವನ ಅಶ್ವವಾದ ಉಚ್ಚೈಶ್ರವಸ್ಸನ್ನು ಹೇಗೆ ಅರ್ಪಿಸುತ್ತಿದ್ದ ? ಮೂರು ಲೋಕಗಳನ್ನು ಹರಿಗೆ ದಾನಮಾಡಿ ಬಲಿಯು ಹೇಗೆ ತಾನಾಗಿಯೇ ಕಾರಾಗೃಹದಲ್ಲಿ ಬಂದಿಯಾಗಿರುತ್ತಿದ್ದ ? ಅಯೋದೇಹಿಯು ವಿಶ್ವಕರ್ಮನಿಗೆ ತನ್ನ ದೇಹವನ್ನು ಕೊಟ್ಟಿದ್ದಾದರೂ ಹೇಗೆ ? ಒಂದೇ ಮಾತಿನಲ್ಲಿ ಮುಗಿಸುತ್ತೇನೆ. ಮೋಸದಿಂದ ತಮಗೆ ಬಾಧೆ ಮಾಡದಿದ್ದಲ್ಲಿ ಅಸುರರು ದೇವತೆಗಳನ್ನು ನಿತ್ಯವೂ ಗೌರವಿಸುವವರೇ. ಅವರಿಂದ ದೇವತೆಗಳಿಗೆ ಯಾವ ಅಪಕಾರವೂ ಆಗುವುದಿಲ್ಲ.'

ಈ ಮಾತಿನ ಮೇಲೆ ಸುರಾಸುರರ ಮೈತ್ರಿಯು ಗಟ್ಟಿಗೊಳ್ಳುತ್ತದೆ. ಮುಂದೆ ಸೂರ್ಯಪ್ರಭನು ವಿದ್ಯಾಧರ ಚಕ್ರವರ್ತಿಯಾಗುತ್ತಾನೆ. ಆ ಅಭಿಷೇಕ ಸಂಭ್ರಮಕ್ಕೆ ಸಾಕ್ಷಾತ್ ಶಂಕರನೇ ಆಹ್ವಾನದ ಮೇರೆಗೆ ಬಂದು ಆಶೀರ್ವದಿಸುತ್ತಾನೆ. ಆ ಅಭಿಷೇಕ ಸಂದರ್ಭದ ವೈಭವ ವರ್ಣನಾತೀತ.

ಹೀಗೆ ಸೂರ್ಯಪ್ರಭನು ಮರ್ತ್ಯನಾದರೂ ವಿದ್ಯಾಧರೇಶ್ವರನಾಗುತ್ತಾನೆ. ಇದೇ ಒಂದು ದೊಡ್ಡ ಉಪಕಥೆ.

ಈ ಇಡೀ ಲಂಬಕವೇ ಸೂರ್ಯಪ್ರಭನ ಕಥೆಯ ಒಂದು ಮಹಾವಾಹಿನಿ. ಈ ಕಥೆಯು ನರವಾಹನದತ್ತನಿಗೆ ಉತ್ಸಾಹ ತುಂಬುವ ಒಂದು ಪೂರ್ವನಿದರ್ಶನವಾಗಿ ಔಚಿತ್ಯವನ್ನು ಪಡೆಯುತ್ತದೆ. ಮರ್ತ್ಯರ ಮಟ್ಟದಿಂದ ಮೇಲೇರಿ ವಿದ್ಯಾಧರರ ಮಟ್ಟವನ್ನು ತಲುಪಿ ಅವರಿಗೇ ಚಕ್ರವರ್ತಿಯಾಗುವ ಮರ್ತ್ಯನ ಉತ್ಕರ್ಷವನ್ನು ತೋರಿಸುವ ಹಾಗೂ ಅಸುರರನ್ನು ಧರ್ಮಮಾರ್ಗಿಗಳಾಗಿ ತೋರಿಸುವ ಈ ಲಂಬಕ ಈ ದೃಷ್ಟಿಯಿಂದ ಒಂದು ವಿಶಿಷ್ಟವಾದ ಲಂಬಕ.

ಈ ಲಂಬಕವನ್ನು ಸಾಧ್ಯವಾದಷ್ಟು ಸುಲಭಗ್ರಾಹ್ಯವಾಗುವಂತೆ ಅನುವಾದ ಮಾಡಲು ಪ್ರಯತ್ನಿಸಲಾಗಿದೆ. ಕನ್ನಡದ ಓದುಗರಿಗೆ ಇದು ಪ್ರಿಯವಾಗುತ್ತದೆಯೆಂಬುದು ನಮ್ಮ ಆಶಾಭಾವನೆ.

**ಪಿ.ಎಸ್. ರಾಮಾನುಜಂ**

ಸಂಪಾದಕರು

# ಪರಿವಿಡಿ



## ಕಥಾಸರಿತ್ಸಾಗರ

ಮಹಾಕವಿ ಶ್ರೀ ಸೋಮದೇವಭಟ್ಟನಿಂದ
ವಿರಚಿತವಾದ

# ಕಥಾಸರಿತ್ಸಾಗರ

## 'ಸೂರ್ಯಪ್ರಭ' ಎಂಬ ಎಂಟನೆಯ ಲಂಬಕ

ಇದು ಬಹಳ ಹಿಂದೆ ಗಿರಿಜೆಯ ಪ್ರೇಮವೆಂಬ ಮಂದರ ಪರ್ವತದ ಮಥನಕಾರಣವಾಗಿ ಶಿವನ ಮುಖಸಮುದ್ರದಿಂದ ಹೊಮ್ಮಿದ ಕಥಾಮೃತ. ಇದನ್ನು ಆಸ್ವಾದಿಸುವವರು ಪರಮೇಶ್ವರನ ಪ್ರಸಾದದಿಂದ ಯಾವುದೇ ವಿಘ್ನವಿಲ್ಲದೆ ಸಮೃದ್ಧಿಯನ್ನು ಪಡೆದು ಭೂಲೋಕದಲ್ಲಿ ಜ್ಞಾನಮಾರ್ಗದಲ್ಲಿ ಧುರಂಧುರರಾಗುತ್ತಾರೆ.

## ಮೊದಲನೆಯ ತರಂಗ

೧ ನಿರಂತರ ಚಲಿಸುತ್ತಿರುವ ತನ್ನ ಕಿವಿಗಳಿಂದ ಬೀಸುವ ಗಾಳಿಯಿಂದ ಮೇಲೆದ್ದ (ಗಂಡಸ್ಥಲದ) ಸಿಂದೂರವು ಆಕಾಶದಲ್ಲೆಲ್ಲಾ ಹರಡಿದ ಕಾರಣ, ಅಕಾಲದಲ್ಲಿ ಸಂಧ್ಯಾಕಾಲವನ್ನು ನಿರ್ಮಾಣ ಮಾಡುತ್ತಿರುವಂತಿರುವ ಗಜಾನನಿಗೆ ಜಯವಾಗಲಿ.

---

ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತ :
ಕಥಾಸರಿತ್ಸಾಗರ:
ಸೂರ್ಯಪ್ರಭೋ ನಾಮ ಅಷ್ಟಮೋ ಲಂಬಕಃ

ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

## ಪ್ರಥಮಸ್ತರಂಗಃ

ಚಲತ್ಕರ್ಣಾನಿಲೋದ್ಧೂತಸಿಂದೂರಾರುಣಿತಾಂಬರಃ ।
ಜಯತ್ಯಕಾಲೇಽಪಿ ಸೃಜನ್ಸಂಧ್ಯಾಮಿವ ಗಜಾನನಃ ॥ ೧

೨. ಹೀಗೆ ವತ್ಸೇಶ್ವರನ ಮಗನಾದ ನರವಾಹನದತ್ತನು ತನ್ನ ಪತ್ನಿಯರೊಡನೆ ಕೌಶಾಂಬಿಯಲ್ಲಿ ತಂದೆಯ ಮನೆಯಲ್ಲಿ ಸುಖದಿಂದಿದ್ದನು.

೩. ಒಮ್ಮೆ ತಂದೆಯ ಆಸ್ಥಾನದಲ್ಲಿದ್ದಾಗ ದಿವ್ಯರೂಪಿಯಾದ ಪುರುಷನೊಬ್ಬನು ಸ್ವರ್ಗದಿಂದ ಇಳಿದು ಬಂದದ್ದನ್ನು ನೋಡಿದನು.

೪. ನಮಸ್ಕರಿಸಿದ ಆತನನ್ನು ತಂದೆಯೊಡಗೂಡಿ ಸತ್ಕರಿಸಿದ ನಂತರ, "ನೀನಾರು ? ಏತಕ್ಕಾಗಿ ಬಂದಿರುವೆ ?" ಎಂದು ಕೇಳಿದಾಗ, ಆತ ಹೇಳಿದನು.

೫. ಹಿಮಾಲಯದ ತಪ್ಪಲಲ್ಲಿ ವಜ್ರಕೂಟವೆಂಬ ನಗರವಿದೆ. ಅದು ಹೆಸರಿಗೆ ತಕ್ಕಂತೆ ವಜ್ರಸಾರವುಳ್ಳದ್ದು.

೬. ವಿದ್ಯಾಧರರಾಜನಾದ ವಜ್ರಪ್ರಭನೆಂಬ ನಾನು ಆ ನಗರದಲ್ಲಿ ವಾಸವಾಗಿದ್ದೆ. ನನ್ನ ದೇಹವೂ ವಜ್ರನಿರ್ಮಿತವಾದ್ದರಿಂದ ನನ್ನ ಹೆಸರೂ ಅನ್ವರ್ಥವಾಗಿದೆ.

೭–೮. ತನ್ನ ತಪಸ್ಸಿನಿಂದ ಸಂತುಷ್ಟನಾದ ಶಂಭುವಿನಿಂದ, 'ನಾನು ನಿರ್ಮಿಸಿದ ಚಕ್ರವರ್ತಿ ಕ್ಷೇತ್ರದಲ್ಲಿ ನನ್ನ ಭಕ್ತನಾದ ನೀನು ನನ್ನ ಅನುಗ್ರಹದಿಂದ ಶತ್ರುಗಳಿಗೆ ಅಜೇಯನಾಗಿ ಉಳಿಯುವೆ' ಎಂದು ಆದೇಶ ದೊರಕಿತು. ಆದ್ದರಿಂದ ಈಗ ಪ್ರಭುವಿಗೆ ಪ್ರಣಾಮ ಮಾಡಲು ಬಂದಿರುವೆ.

---

ಏವಂ ವತ್ಸೇಶ್ವರಸುತಃ ಕೌಶಾಂಬ್ಯಾಂ ಸ ಪಿತುರ್ಗೃಹೇ ।
ನರವಾಹನದತ್ತಸ್ತಾ ಭಾರ್ಯಾಃ ಪ್ರಾಪ್ಯಾವಸತ್ಸುಖಮ್ ॥ ೨
ಏಕದಾ ಪಿತುರಾಸ್ಥಾನೇ ಸ್ಥಿತಶ್ಚ ಪುರುಷಂ ದಿವಃ ।
ಅವತೀರ್ಣಾಗತಂ ತತ್ರ ದಿವ್ಯರೂಪಂ ದದರ್ಶ ಸಃ ॥ ೩
ಪ್ರಣತಂ ತಂ ಚ ಸತ್ಕೃತ್ಯ ಪಿತ್ರಾ ಸಾಕಂ ಕ್ಷಣಾಂತರೇ ।
ಕಸ್ತ್ವಂ ಕಿಮಾಗತೋಽಸೀತಿ ಪೃಷ್ಟವಾನ್ಸೋಽಪ್ಯಥಾಬ್ರವೀತ್ ॥ ೪
ಅಸ್ತೀಹ ವಜ್ರಕೂಟಾಖ್ಯಂ ಪೃಷ್ಠೇ ಹಿಮವತಃ ಪುರಮ್ ।
ವಜ್ರಸಾರಮಯತ್ವಾದ್ಯತ್ ಖ್ಯಾತಮನ್ವರ್ಥನಾಮಕಮ್ ॥ ೫
ತತ್ರ ವಜ್ರಪ್ರಭಾಖ್ಯೋಽಹಮಾಸಂ ವಿದ್ಯಾಧರಾಧಿಪಃ ।
ವಜ್ರನಿರ್ಮಿತದೇಹತ್ವಾನ್ನಾಮಾನ್ವರ್ಥಂ ತಥೈವ ಮೇ ॥ ೬
ಮನ್ನಿರ್ಮಿತೇ ಯಥಾಕಾಲಂ ಭಕ್ತ ಸಂಶ್ಚಕ್ರವರ್ತಿನಿ ।
ಅಜೇಯಸ್ತ್ವಂ ವಿಪಕ್ಷಾಣಾಂ ಮತ್ಪ್ರಸಾದಾದ್ಭವಿಷ್ಯಸಿ ॥ ೭
ಇತಿ ಚಾಹಂ ತಪಸ್ತುಷ್ಟೇನಾದಿಷ್ಟಃ ಶಂಭುನಾ ಯದಾ ।
ತದಾ ಪ್ರಭೋಃ ಪ್ರಣಾಮಾರ್ಥಮಾಗತೋಽಸ್ಮೀಹ ಸಾಂಪ್ರತಮ್ ॥ ೮

೯. ವತ್ಸರಾಜಸುತನಾದ ನರವಾಹನದತ್ತನು ದಿವ್ಯಪುರುಷನು. ಕಾಮಾಂಶ ಸಂಭವನು. ಅವನು ಶಂಭುವಿನಿಂದಲೇ ನಿರ್ಮಿತನಾದವನು.

೧೦. ಮರ್ತ್ಯನಾದರೂ ಎರಡು ವೇದ್ಯರ್ಧಗಳಿಗೂ ಚಕ್ರವರ್ತಿಯಾಗುತ್ತಾನೆ. ಇದನ್ನು ಈಗ ನನ್ನ ವಿದ್ಯಾಪ್ರಭಾವದಿಂದ ತಿಳಿದಿದ್ದೇನೆ.

೧೧. ಹಿಂದೆ ನಾನು ಮನುಷ್ಯನಾಗಿದ್ದರೂ ಶಂಕರನ ದಿವ್ಯಾನುಗ್ರಹದಿಂದ ದಿವ್ಯಶರೀರ ಲಭಿಸಿತು. ನಾನು ಸೂರ್ಯಪ್ರಭನೆಂಬ ಚಕ್ರವರ್ತಿಯಾಗಿದ್ದೆ.

೧೨. ಆದರೂ ಅವನು ಒಂದು ವೇದ್ಯರ್ಧದಲ್ಲಿ ದಕ್ಷಿಣಕ್ಕೆ ಪ್ರಭುವಾಗಿದ್ದನು. ಉತ್ತರದಲ್ಲಿ ಶ್ರುತಶರ್ಮನೆಂಬವನು ಚಕ್ರವರ್ತಿಯಾಗಿದ್ದನು.

೧೩. ಅವರಲ್ಲಿ ಒಬ್ಬನು ಇಡೀ ಒಂದು ದಿವ್ಯ ಕಲ್ಪಕಾಲದವರೆಗೆ ವಿದ್ಯಾಧರ ಚಕ್ರವರ್ತಿಯಾಗಿರುತ್ತಾನೆ. ದೇವ, ನೀನೇ ಪುಣ್ಯಶಾಲಿ'.

೧೪. ಹೀಗೆಂದು ಹೇಳಿದ ವಿದ್ಯಾಧರನನ್ನು ವತ್ಸೇಶನಾದ ಉದಯನ ಮಹಾರಾಜನೊಡನಿದ್ದ ನರವಾಹನದತ್ತನು ಕುತೂಹಲದಿಂದ ಕೇಳಿದನು.

೧೫. 'ಮನುಷ್ಯನಾಗಿದ್ದರೂ ಸೂರ್ಯಪ್ರಭನಾಗಿ ನೀನು ವಿದ್ಯಾಧರ ಪದವಿಯನ್ನು ಹೇಗೆ ಪಡೆದೆಯೆಂದು ಹೇಳು.'

---

ವತ್ಸರಾಜಸುತೋ ದಿವ್ಯಂ ಕಲ್ಪಂ ಕಾಮಾಂಶಸಂಭವಃ ।
ನರವಾಹನದತ್ತೋ ನಃ ಶಶಿಶೇಖರನಿರ್ಮಿತಃ ॥ ೯
ಮರ್ತ್ಯೋಽಪ್ಯಭಯವೇದ್ಯರ್ಧಚಕ್ರವರ್ತೀ ಭವಿಷ್ಯತಿ ।
ಇತಿ ವಿದ್ಯಾಪ್ರಭಾವೇಣ ವಿಜ್ಞಾತಂ ಹ್ಯಧುನಾ ಮಯಾ ॥ ೧೦
ಆಸೀಚ್ಚ ದಿವ್ಯಂ ಕಲ್ಪಂ ನಃ ಪುರಾ ಮರ್ತ್ಯೋಽಪ್ಯನುಗ್ರಹಾತ್ ।
ಶಾರ್ವಾತ್ಸೂರ್ಯಪ್ರಭೋ ನಾಮ ಚಕ್ರವರ್ತೀಹ ಯದ್ಯಪಿ ॥ ೧೧
ತಥಾಪ್ಯಭೂತ್ಸ ಏಕಸ್ಮಿನ್ವೇದ್ಯರ್ಧೇ ದಕ್ಷಿಣೇ ಪ್ರಭುಃ ।
ಉತ್ತರೇ ಶ್ರುತಶರ್ಮಾಖ್ಯಶ್ಚಕ್ರವರ್ತೀ ತ್ವಭೂತ್ತದಾ ॥ ೧೨
ಉಭಯೋಸ್ತು ತಯೋರೇಕಃ ಕಲ್ಪಸ್ಥಾಯೀ ದ್ಯುಚಾರಿಣಾಮ್ ।
ಚಕ್ರವರ್ತ್ಯತ್ರ ಭವಿತಾ ದೇವ ಏವಾತಿಪುಣ್ಯವಾನ್ ॥ ೧೩
ಇತ್ಯುಕ್ತವಂತಂ ವತ್ಸೇಶಸಹಿತಸ್ತಂ ಕುತೂಹಲಾತ್ ।
ನರವಾಹನದತ್ತಃ ಸ ಪ್ರಾಹ ವಿದ್ಯಾಧರಂ ಪುನಃ ॥ ೧೪
ಕಥಂ ವಿದ್ಯಾಧರೈಶ್ವರ್ಯಂ ಮಾನುಷೇಣ ಸತಾ ಪುರಾ ।
ಪ್ರಾಪ್ತಂ ಸೂರ್ಯಪ್ರಭೇಣೇತಿ ತ್ವಯಾ ನಃ ಕಥ್ಯತಾಮಿತಿ ॥ ೧೫

೧೬. ಬಳಿಕ, ದೇವಿಯರ ಮತ್ತು ಮಂತ್ರಿಗಳ ಸಮ್ಮುಖದಲ್ಲಿ ರಾಜಾ ವಜ್ರಪ್ರಭನು ತನ್ನ ಕಥೆಯನ್ನು ಹೇಳಲು ಉಪಕ್ರಮಿಸಿದನು.

೧೭. ಹಿಂದೆ ಮದ್ರ ದೇಶದಲ್ಲಿ ಶಾಕಲವೆಂಬ ನಗರವಿದ್ದಿತು. ಅಲ್ಲಿ ಅಂಗಾರಪ್ರಭನ ಪುತ್ರನಾದ ಚಂದ್ರಪ್ರಭನು ರಾಜನಾಗಿದ್ದನು.

೧೮. ಲೋಕಕ್ಕೆಲ್ಲ ಆಹ್ಲಾದಕಾರಿಯಾದ ಆತನು ಹೆಸರಿಗೆ ತಕ್ಕಂತೆ ಇದ್ದನು. ಹಾಗೆಯೇ ಶತ್ರುಗಳನ್ನು ಸಂತಾಪಗೊಳಿಸುತ್ತಾ ಅವರ ಪಾಲಿಗೆ ಜ್ವಲನ (ಸೂರ್ಯ)ಪ್ರಭನೂ ಆಗಿದ್ದನು.

೧೯. ಆತನಿಗೆ ಕೀರ್ತಿಮತಿ ಎಂಬ ದೇವಿಯಲ್ಲಿ ಶುಭಲಕ್ಷಣಗಳಿಂದ ಸೂಚಿತವಾದ ಉತ್ತಮ ಭವಿಷ್ಯವುಳ್ಳ ಪುತ್ರನ ಜನನವಾಯಿತು.

೨೦. "ಇವನೇ ತ್ರಿಪುರಾರಿಯ ಅನುಗ್ರಹದಿಂದ ಭಾವೀ ವಿದ್ಯಾಧರ ಚಕ್ರವರ್ತಿಯೆಂದು ನಿಶ್ಚಯಿಸಲ್ಪಟ್ಟ ಸೂರ್ಯಪ್ರಭನೆಂಬವನು.'

೨೧. ಎಂದು ಆ ಮಗು ಹುಟ್ಟಿದಾಗ ಸ್ಪಷ್ಟವಾದ ಆಕಾಶವಾಣಿಯಾಯಿತು. ಆ ವಾಣಿಯು ಚಂದ್ರಪ್ರಭ ಮಹಾರಾಜನ ಕಿವಿಯಲ್ಲಿ ಮಾಡಿದ ಅಮೃತವರ್ಷದಂತೆ ಇತ್ತು.

೨೨. ಹೀಗೆ ಪರಮೇಶ್ವರನ ಅನುಗ್ರಹೋತ್ಸವಕ್ಕೆ ಪಾತ್ರನಾದ ಆ ಭಾಗ್ಯಶಾಲಿ ರಾಜಕುಮಾರನು ತಂದೆಯ ಮನೆಯಲ್ಲಿ ಚೆನ್ನಾಗಿ ಬೆಳೆದನು.

---

ತತೋ ವಿವಿಕ್ತೇ ದೇವೀನಾಂ ಮಂತ್ರಿಣಾಂ ಸನ್ನಿಧೌ ಚ ಸಃ ।
ರಾಜಾ ವಜ್ರಪ್ರಭೋ ವಕ್ತುಂ ಕಥಾಂ ತಾಮುಪಚಕ್ರಮೇ ॥ ೧೬
ಶಾಕಲಂ ನಾಮ ಮದ್ರೇಷು ಬಭೂವ ನಗರಂ ಪುರಾ ।
ಚಂದ್ರಪ್ರಭಾಖ್ಯಸ್ತತ್ರಾಸೀದ್ರಾಜಾಂಗಾರಪ್ರಭಾತ್ಮಜಃ ॥ ೧೭
ಆಹ್ಲಾದಕಾರೀ ವಿಶ್ವಸ್ಯ ನಾಮ್ನಾನ್ವರ್ಥೋಽಪಿ ಯೋ ಭವನ್ ।
ಸಂತಾಪಕಾರೀ ಶತ್ರೂಣಾಂ ಬಭೂವ ಜ್ವಲನಪ್ರಭಃ ॥ ೧೮
ಕೀರ್ತಿಮತ್ಯಭಿಧಾನಾಯಾಂ ತಸ್ಯ ದೇವ್ಯಾಮಜಾಯತ ।
ಪುತ್ರೋ ನೃಪಸ್ಯಾತಿಶುಭೈರ್ಲಕ್ಷಣೈಃ ಸೂಚಿತೋದಯಃ ॥ ೧೯
ಏಷ ಸೂರ್ಯಪ್ರಭೋ ನಾಮ ರಾಜಾ ಜಾತಃ ಪುರಾರಿಣಾ ।
ಭಾವೀ ವಿದ್ಯಾಧರಾಧೀಶಚಕ್ರವರ್ತೀ ವಿನಿರ್ಮಿತಃ ॥ ೨೦
ಇತ್ಯುಚ್ಚಚಾರ ಗಗನಾತ್ತಸ್ಮಿನ್ಜಾತೇ ಸ್ಫುಟಂ ವಚಃ ।
ಸುಧಾವರ್ಷಂ ಶ್ರವಣಯೋಶ್ಚಂದ್ರಪ್ರಭಮಹೀಭೃತಃ ॥ ೨೧
ತತಸ್ತಸ್ಯ ಪುರಾರಾತಿಪ್ರಸಾದೋತ್ಸವಶಾಲಿನಃ ।
ಸೂರ್ಯಪ್ರಭಃ ಸ ವವೃಧೇ ರಾಜಪುತ್ರಃ ಪಿತುರ್ಗೃಹೇ ॥ ೨೨

೨೩. ಬಾಲ್ಯದಲ್ಲಿಯೇ ಗುರೂಪಾಸನೆಮಾಡಿದ, ಮೇಧಾವಿಯಾದ ಆ ಕುಮಾರನು ವಿದ್ಯೆಗಳನ್ನೂ, ಕಲೆಗಳನ್ನೂ ಪೂರ್ಣವಾಗಿ ವಶಮಾಡಿಕೊಂಡನು.

೨೪. ಹ©ನಾರು ವರ್ಷಗಳು ತುಂಬಿದಾಗ ಆ ನವ ಯುವಕನು ತನ್ನ ಗುಣ ಗೌರವದಿಂದಲೇ ಪ್ರಜಾನುರಾಗಕ್ಕೆ ಪೂರ್ಣ ಪಾತ್ರನಾಗಿದ್ದನು. ತಂದೆ aÜí¨ÜÅಪ್ರಭನು ಆತನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು.

೨೫. ಹಾಗೆಯೇ ತನ್ನ ಮಂತ್ರಿಪುತ್ರರಾದ ಭಾಸ, ಪ್ರಭಾಸ, ಸಿದ್ಧಾರ್ಥ, ಪ್ರಹಸ್ತ ಮುಂತಾದವರನ್ನು ಅವನಿಗೆ ಅರ್ಪಿಸಿದನು.

೨೬. ಅವರೊಡನೆ ಕುಮಾರನು ಯುವರಾಜನ ಕಾರ್ಯಭಾರವನ್ನು ನಿರ್ವಹಿಸುತ್ತಿರುವಾಗ ಒಮ್ಮೆ ಮಯನೆಂಬ ಮಹಾಸುರನು ಅಲ್ಲಿಗೆ ಬಂದನು.

೨೭. ಸೂರ್ಯಪ್ರಭನೂ ಇದ್ದಾಗ ಚಂದ್ರಪ್ರಭರಾಜನ ಸಮ್ಮುಖದಲ್ಲಿ ಮಯನು ರಾಜನಿಗೆ ಗೌರವ ತೋರಿ ಹೀಗೆಂದನು.

೨೮. 'ರಾಜನೇ, ತ್ರಿಶೂಲಿಯಾದ ಶಿವನು ನಿನ್ನ ಪುತ್ರನಾದ ಸೂರ್ಯಪ್ರಭನನ್ನು ಭಾವೀ ವಿದ್ಯಾಧರ ಚಕ್ರವರ್ತಿಯಾಗಿ ನಿರ್ಮಾಣಮಾಡಿದ್ದಾನೆ

೨೯. ಆ ಪದವಿಗೆ ಅರ್ಹವಾದ ವಿದ್ಯೆಗಳನ್ನು ಪಡೆಯಲು ಈತ ಸಮರ್ಥನಿದ್ದಾನೆ. ಇದಕ್ಕಾಗಿಯೇ ಶಂಭುವು ನನ್ನನ್ನಿಲ್ಲಿ ಕಳಿಸಿದ್ದಾನೆ.

---

ಬಾಲ ಏವ ಚ ವಿದ್ಯಾನಾಂ ಕಲಾನಾಂ ಚ ಕ್ರಮೇಣ ಸಃ ।
ಸರ್ವಾಸಾಂ ಸುಮತಿಃ ಪಾರಮುಪಾಸಿತಗುರುರ್ಯಯೌ ॥ ೨೩
ಪೂರ್ಣಷೋಡಶವರ್ಷೇ ಚ ಗುಣೈರಾವರ್ಜಿತಪ್ರಜಮ್ ।
ಯೌವರಾಜ್ಯೇಽಭ್ಯಷಿಂಚತ್ತಂ ಪಿತಾ ಚಂದ್ರಪ್ರಭೋಽಥ ಸಃ ॥ ೨೪
ಸ ಏವ ಮಂತ್ರಿಪುತ್ರಾಂಶ್ಚ ನಿಜಾಂಸ್ತಸ್ಮೈ ಸಮರ್ಪಯತ್ ।
ಭಾಸಪ್ರಭಾಸಸಿದ್ಧಾರ್ಥಪ್ರಹಸ್ತಪ್ರಭೃತೀನ್‌ಬಹೂನ್ ॥ ೨೫
ತೈಃ ಸಮಂ ಯುವರಾಜತ್ವಧುರಂ ತಸ್ಮಿಂಶ್ಚ ಬಿಭ್ರತಿ ।
ಆಜಗಾಮೈಕದಾ ತತ್ರ ಮಯೋ ನಾಮ ಮಹಾಸುರಃ ॥ ೨೬
ಆಸ್ಥಾನೇ ಚ ಸತಂ ಚಂದ್ರಪ್ರಭಂ ಸೂರ್ಯಪ್ರಭೇ ಸ್ಥಿತೇ ।
ಉಪೇತ್ಯ ರಚಿತಾತಿಥ್ಯಂ ಜಗಾದೈವಂ ಮಯೋ ನೃಪಮ್ ॥ ೨೭
ರಾಜನ್ ವಿದ್ಯಾಧರೇಶಾನಾಂ ಚಕ್ರವರ್ತೀ ತ್ರಿಶೂಲಿನಾ ।
ಅಯಂ ವಿನಿರ್ಮಿತೋ ಭಾವೀಪುತ್ರಃ ಸೂರ್ಯಪ್ರಭಸ್ತವ ॥ ೨೮
ತತ್ಕಿಂ ನ ಸಾಧಯತ್ಯೇಷ ವಿದ್ಯಾಸ್ತತ್ಪ್ರಾಪ್ತಿದಾಯಿನೀಃ ।
ಏತದರ್ಥಂ ವಿಸೃಷ್ಟೋಽಹಮಿಹ ದೇವೇನ ಶಂಭುನಾ ॥ ೨೯

೩೦. ಆದ್ದರಿಂದ ಈ ನಿನ್ನ ಪುತ್ರನನ್ನು ಕರೆದುಕೊಂಡುಹೋಗಿ ವಿದ್ಯಾಧರೇಂದ್ರಸ್ಥಾನಕ್ಕೆ ಯೋಗ್ಯವಾದ ವಿದ್ಯೆಗಳನ್ನು ಹೇಳಿಕೊಡಲು ನನಗೆ ಅನುಮತಿ ನೀಡು. ವಿದ್ಯಾಸಾಧನೆಗೆ ಬೇಕಾದ ಸತ್‌ಕ್ರಿಯೆಗಳನ್ನು ಉಪದೇಶಿಸುತ್ತೇನೆ.

೩೧. ಇವನಿಗೆ ಅಡ್ಡಗಾಲು ಹಾಕಲು ಒಬ್ಬನಿದ್ದಾನೆ. ಆಕಾಶಗಾಮಿಗಳ ಒಡೆಯನಾದ ಆತನ ಹೆಸರು ಶ್ರುತಶರ್ಮ ಎಂದು. ಅವನೂ ಇಂದ್ರನಿಂದಲೇ ನಿರ್ಮಿಸಲ್ಪಟ್ಟವನು.

೩೨. ಆದರೆ ವಿದ್ಯೆಗಳನ್ನು ವಶಪಡಿಸಿಕೊಂಡಮೇಲೆ ಈ ನಿನ್ನ ಕುಮಾರನು ಅವನನ್ನೂ ಒಳಗೊಂಡಂತೆ ಎಲ್ಲರನ್ನೂ ಜಯಿಸಿ ವಿದ್ಯಾಧರ ಚಕ್ರವರ್ತಿಯಾಗುತ್ತಾನೆ.'

೩೩. ಮಯಾಸುರನು ಹೀಗೆ ಹೇಳಲಾಗಿ, ಚಂದ್ರಪ್ರಭರಾಜನು, 'ನಾವು ಧನ್ಯರು. ಈತನೇ ಪುಣ್ಯಶಾಲಿ. ನೀನು ನಿನ್ನಿಷ್ಟದಂತೆ ಕರೆದುಕೊಂಡು ಹೋಗಬಹುದು' ಎಂದನು.

೩೪. ಹೀಗೆ ಮಯನು ರಾಜನನ್ನು ಬೀಳ್ಕೊಂಡು ಅಮಾತ್ಯನೊಡನೆ ಸೂರ್ಯಪ್ರಭನನ್ನು ಕರೆದುಕೊಂಡು ಶೀಘ್ರದಲ್ಲಿ ಪಾತಾಲಲೋಕಕ್ಕೆ ಹೋದನು.

೩೫. ಅಲ್ಲಿ ನಾನಾವಿಧವಾದ ತಪಸ್ಸುಗಳನ್ನು ಉಪದೇಶಿಸಿದನು. ಅಮಾತ್ಯನೊಡನಿದ್ದ ರಾಜಪುತ್ರನು ಬೇಗ ಆಯಾ ವಿದ್ಯೆಗಳ ಮರ್ಮವನ್ನು ಗ್ರಹಿಸಿದನು.

೩೬. ಮಯಾಸುರನು ವಿಮಾನ ಸಾಧನೆಯನ್ನು ರಾಜಪುತ್ರನಿಗೆ ಉಪದೇಶಿಸಲಾಗಿ, ಅವನು 'ಭೂತಾಸನ'ವೆಂಬ ವಿಮಾನವನ್ನು ಪಡೆದುಕೊಂಡನು.

---

ಅನುಜಾನೀಹಿ ತದ್ಯಾವನ್ನೀತ್ವೈನಂ ಶಿಕ್ಷಯಾಮ್ಯಹಮ್ ।
ವಿದ್ಯಾಧರೇಂದ್ರತಾಹೇತುಂ ವಿದ್ಯಾಸಾಧನಸತ್ಕ್ರಿಯಾಮ್ ॥ ೩೦

ಏತಸ್ಯ ಪರಿಪಂಥೀ ಹಿ ಕಾರ್ಯೇಽಸ್ಮಿನ್ ಖೇಚರೇಶ್ವರಃ ।
ವಿದ್ಯತೇ ಶ್ರುತಶರ್ಮಾಖ್ಯಃ ಸೋಽಪಿ ಶಕ್ರೇಣ ನಿರ್ಮಿತಃ ॥ ೩೧

ಸಿದ್ಧವಿದ್ಯಾಪ್ರಭಾವಸ್ತು ಸ ಹಾಸ್ಮಾಭಿರ್ವಿಜಿತ್ಯ ತಮ್ ।
ಏಷ ವಿದ್ಯಾಧರಾಧೀಶಚಕ್ರವರ್ತಿತ್ವಮಾಪ್ಸ್ಯತಿ ॥ ೩೨

ಏವಂ ಮಯೇನಾಭಿಹಿತೇ ರಾಜಾ ಚಂದ್ರಪ್ರಭೋಽಬ್ರವೀತ್ ।
ಧನ್ಯಾಃ ಸ್ಮ ಪುಣ್ಯವಾನೇಷ ಯಥೇಚ್ಛಂ ನೀಯತಾಮಿತಿ ॥ ೩೩

ತತಸ್ತಮಾಮಂತ್ರ್ಯ ನೃಪಂ ತದನುಜ್ಞಾನಮಾಶು ತಮ್ ।
ಸೂರ್ಯಪ್ರಭಂ ಸ ಸಾಮಾತ್ಯಂ ಪಾತಾಲಂ ನೀತವಾನ್ಮಯಃ ॥ ೩೪

ತತ್ರೋಪದಿಷ್ಟಾಂಸ್ತಸ್ಮೈ ಸ ತಪಾಂಸಿ ತಥಾ ಯಥಾ ।
ರಾಜಪುತ್ರಃ ಸ ಸಾಮಾತ್ಯೋ ವಿದ್ಯಾಃ ಶೀಘ್ರಮಸಾಧಯತ್ ॥ ೩೫

ವಿಮಾನಸಾಧನಂ ತಸ್ಮೈ ತಥೈವೋಪದಿದೇಶ ಸಃ ।
ಯೇನ ಭೂತಾಸನಂ ನಾಮ ಸ ವಿಮಾನಮುಪಾರ್ಜಯತ್ ॥ ೩೬

೩೭. ನಂತರ ಮಯನು ವಿದ್ಯೆಯನ್ನು ಸಿದ್ಧಿಸಿಕೊಂಡ, ಮಂತ್ರಿಸಹಿತನಾದ ರಾಜಪುತ್ರನನ್ನು ಪಾತಾಲದಿಂದ ವಿಮಾನದಲ್ಲಿಯೇ ಆತನ ನಗರಕ್ಕೆ ಕರೆತಂದನು.

೩೮. ತಂದೆಯ ಬಳಿಯಲ್ಲಿ ಪುತ್ರನನ್ನು ಬಿಟ್ಟು , 'ನಾನಿನ್ನು ಬರುತ್ತೇನೆ; ಇಲ್ಲಿದ್ದುಕೊಂಡು ಸಿದ್ಧಿಭೋಗಗಳನ್ನು ಅನುಭವಿಸುತ್ತಿರು, ಮತ್ತೆ ನಿನ್ನನ್ನು ಕಾಣುತ್ತೇನೆ' ಎಂದು ಕುಮಾರನಿಗೆ ಹೇಳಿ ಹೊರಟನು.

೩೯. ಅತ್ತ ಮಯನು ಗೌರವವನ್ನು ಸ್ವೀಕರಿಸಿ ಹೊರಟಮೇಲೆ ಇತ್ತ ಮಗನ ವಿದ್ಯಾಸಿದ್ಧಿಗಳಿಂದ ಚಂದ್ರಪ್ರಭ ರಾಜನು ಆನಂದವನ್ನು ಪಡೆದನು.

೪೦. ಸೂರ್ಯಪ್ರಭನು ತನ್ನ ಸಚಿವರೊಡಗೂಡಿ ವಿಮಾನವನ್ನೇರಿ ನಾನಾ ದೇಶಗಳನ್ನು ಲೀಲೆಯಿಂದ ಸುತ್ತಾಡತೊಡಗಿದನು.

೪೧. ಎಲ್ಲೆಲ್ಲಿ ಯಾವ ಯಾವ ರಾಜಕನ್ಯೆ ಇವನನ್ನು ನೋಡುತ್ತಿದ್ದಳೋ, ಅಲ್ಲಲ್ಲೇ ಅವಳು ಕಾಮಮೋಹಿತಳಾಗಿ ಇವನನ್ನು ಸ್ವಯಂವರ ಮಾಡಿಕೊಳ್ಳುತ್ತಿದ್ದಳು.

೪೨. ಅವರಲ್ಲಿ , ತಾಮ್ರಲಿಪ್ತಿಯ ರಾಜ ವೀರಭಟನ ಪುತ್ರಿಯಾದ ಮದನಸೇನೆ ಎಂಬ ರಾಜಕನ್ಯೆಯೂ ಒಬ್ಬಳು. ಅವಳು ಲೋಕೈಕ ಸುಂದರಿಯಾಗಿದ್ದಳು.

೪೩. ಮತ್ತೋರ್ವಳು ಅಪರಾಂತ ರಾಜ್ಯದ ಸುಭಟರಾಜನ ಮಗಳು ಚಂದ್ರಿಕಾವತೀ. ಈಕೆಯನ್ನು ಸಿದ್ಧರು ಎಲ್ಲೋ ಕರೆದುಕೊಂಡುಹೋಗಿ ತಂದುಬಿಟ್ಟಿದ್ದರು.

---

ತದ್ವಿಮಾನಾಧಿರೂಢಂ ತಂ ಸಿದ್ಧವಿದ್ಯಂ ಸಮಂತ್ರಿಕಮ್ ।
ಸೂರ್ಯಪ್ರಭಂ ಸ ಪಾತಾಲಾನ್ಮಯಃ ಸ್ವಪುರಮಾನಯತ್ ॥ ೩೭
ಪ್ರಾಪಯ್ಯ ಪಿತ್ರೋಃ ಪಾರ್ಶ್ವಂ ಚ ತಂ ಜಗಾದ ವ್ರಜಾಮ್ಯಹಮ್ ।
ತ್ವಂ ಸಿದ್ಧಿಭೋಗಾನ್ಭುಂಕ್ಷ್ವೇಹ ಯಾವದೇಷ್ಯಾಮಹಂ ಪುನಃ ॥ ೩೮
ಇತ್ಯುಕ್ತವಾನಾತ್ತಪೂಜೋ ಜಗಾಮ ಸ ಮಯಾಸುರಃ ।
ನನಂದ ವಿದ್ಯಾಸಿದ್ಧ್ಯಾ ಚ ಸೂನೋಶ್ಚಂದ್ರಪ್ರಭೋ ನೃಪಃ ॥ ೩೯
ಸೋಽಥ ಸೂರ್ಯಪ್ರಭೋ ವಿದ್ಯಾಪ್ರಭಾವಾತ್ ಸಚಿವೈಃ ಸಹ ।
ನಾನಾದೇಶಾನ್ವಿಮಾನೇನ ಸದಾ ಬಭ್ರಾಮ ಲೀಲಯಾ ॥ ೪೦
ಯತ್ರ ಯತ್ರ ಚ ಯಾ ಯಾ ತಮಪಶ್ಯದ್ರಾಜಕನ್ಯಕಾ ।
ತತ್ರ ತತ್ರ ಸ್ವಯಂ ವವ್ರೇ ಸಾ ಸಾ ತಂ ಕಾಮಮೋಹಿತಾ ॥ ೪೧
ಏಕಾ ಮದನಸೇನಾಖ್ಯಾ ತಾಮ್ರಲಿಪ್ತ್ಯಾಂ ಮಹೀಪತೇಃ ।
ಸುತಾ ವೀರಭಟಾಖ್ಯಸ್ಯ ಕನ್ಯಾ ಲೋಕೈಕಸುಂದರೀ ॥ ೪೨
ದ್ವಿತೀಯಾ ಸುಭಟಾಖ್ಯಸ್ಯ ತನಯಾ ಚಂದ್ರಿಕಾವತೀ ।
ಅಪರಾಂತಾಧಿರಾಜಸ್ಯ ಸಿದ್ಧೈರ್ನೀತ್ವೋಜ್ಝಿತಾನ್ಯತಃ ॥ ೪೩

೪೪. ಇನ್ನೊಬ್ಬಳು ಕಾಂಚೀನಗರದ ರಾಜ ಕುಂಭೀರನ ಮಗಳು. ವರುಣಸೇನೆಯೆಂಬ ಹೆಸರಿನ ಈಕೆ ಮೂರನೆಯ ರೂಪವತಿ.

೪೫. ನಾಲ್ಕನೆಯವಳು ಲಾವಾಣಕದ ರಾಜ ಪೌರವನ ಮಗಳಾದ ಸುಲೋಚನೆಯೆಂಬ ಲಾವಣ್ಯವತಿ.

೪೬. ಚೀನಾ ದೇಶದ ರಾಜ ಸುರೋಹನ ಮಗಳು ಸ್ವರ್ಣವರ್ಣದ ಮೈಕಾಂತಿಯಿಂದ ಕಂಗೊಳಿಸುವ ರೂಪಸಿ, ವಿದ್ಯುನ್ಮಾಲಾ ಎಂಬುವಳು ಐದನೆಯವಳು.

೪೭. ಶ್ರೀಕಂಠದೇಶದ ಒಡೆಯ ಕಾಂತಿಸೇನನ ಸುತೆ ಕಾಂತಿಮತಿ ಎಂಬುವಳು ಆರನೆಯವಳು. ಇವಳು ತನ್ನ ದೇಹಕಾಂತಿಯಿಂದ ಅಪ್ಸರೆಯರನ್ನು ಮೀರಿಸಿದವಳು.

೪೮. ಕೌಶಾಂಬಿಯ ಒಡೆಯನಾದ ಜನಮೇಜಯ ರಾಜನ ಮಗಳಾದ ಪರಪುಷ್ಟಾ (ಕೋಗಿಲೆ) ಎಂಬ ಮಂಜುಭಾಷಿಣಿಯಾದ ಏಳನೆಯವಳು ಮತ್ತೋರ್ವಳು.

೪೯. ಈ ರಮಣಿಯರ ಬಾಂಧವರು ಅವರನ್ನು ಯಾರೋ ಅಪರಿಚಿತರು ಒಯ್ದಿದ್ದಾರೆ ಎಂದು ತಿಳಿದೂ, ವಿದ್ಯಾಬಲದಿಂದ ಗರ್ವಿತನಾದ ಆತನ ವಿಚಾರದಲ್ಲಿ ವಿನಯದಿಂದಲೇ ನಡೆದುಕೊಂಡರು.

೫೦. ಸೂರ್ಯಪ್ರಭನು ತನ್ನ ವಿದ್ಯಾಬಲದಿಂದ ಏಕಕಾಲದಲ್ಲಿ ಅನೇಕ ದೇಹಗಳನ್ನು ಹೊಂದಿ, ವಿದ್ಯಾವತಿಯರಾದ ಆ ರಮಣಿಯರೊಡನೆ ಒಮ್ಮೆಲೆ ರಮಿಸಿದನು.

---

ಕಾಂಚೀನಗರ್ಯಾ ನೃಪತೇಃ ಕುಂಭೀರಾಖ್ಯಸ್ಯ ಚಾತ್ಮಜಾ ।
ಖ್ಯಾತಾವರುಣಸೇನಾಖ್ಯಾ ತೃತೀಯಾ ರೂಪಶಾಲಿನೀ ॥ ೪೪
ಲಾವಾಣಕಾಧಿರಾಜಸ್ಯ ಪೌರವಾಖ್ಯಸ್ಯ ಭೂಪತೇಃ ।
ಸುತಾ ಸುಲೋಚನಾ ನಾಮ ಚತುರ್ಥೀ ಚಾರುಲೋಚನಾ ॥ ೪೫
ಚೀನದೇಶಪತೇ ರಾಜ್ಞಃ ಸುರೋಹಸ್ಯಾತ್ಮಸಂಭವಾ ।
ಹಾರಿಹೇಮಾವದಾತಾಂಗೀ ವಿದ್ಯುನ್ಮಾಲೇತಿ ಪಂಚಮೀ ॥ ೪೬
ಕಾಂತಿಸೇನಸ್ಯ ನೃಪತೇಃ ಶ್ರೀಕಂಠವಿಷಯಪ್ರಭೋಃ ।
ಸುತಾ ಕಾಂತಿಮತೀ ನಾಮ ಷಷ್ಠೀ ಕಾಂತಿಜಿತಾಪ್ಸರಾಃ ॥ ೪೭
ಜನಮೇಜಯಭೂಪಸ್ಯ ಕೌಶಾಂಬೀನಗರೀಪತೇಃ ।
ತನಯಾ ಪರಪುಷ್ಟಾಖ್ಯಾ ಸಪ್ತಮೀ ಮಂಜುಭಾಷಿಣೀ ॥ ೪೮
ಅವಿಜ್ಞಾತಹೃತಾನಾಂ ಚ ತಾಸಾಂ ಬುದ್ಧ್ವಾಪಿ ಬಾಂಧವಾಃ ।
ವಿದ್ಯಾಬಲೋದ್ಧತೇ ತಸ್ಮಿನ್ನಾಸನ್ವೇತಸವೃತ್ತಯಃ ॥ ೪೯
ತಾಭಿಶ್ಚೋಪಾತ್ತವಿದ್ಯಾಭಿಃ ಸಮಂ ಯುಗಪದಾರಮತ್ ।
ವಿದ್ಯಾವಿರಚಿತಾನೇಕದೇಹಃ ಸೂರ್ಯಪ್ರಭೋಽತ್ರ ಸಃ ॥ ೫೦

೫೧. ಆಕಾಶಾಗಮನ, ಸಂಗೀತ, ಪಾನಗೋಷ್ಠಿಗಳಲ್ಲಿ ಅವರೊಡನೆ ಕ್ರೀಡಿಸಿದನು, ಪ್ರಹಸ್ತನೇ ಮೊದಲಾದ ಮಂತ್ರಿಕುಮಾರರೊಡನೆಯೂ ಆಡಿದನು.

೫೨. ಒಳ್ಳೆಯ ಚಿತ್ರಕಲಾವಿದನಾದ ಸೂರ್ಯಪ್ರಭನು ವಿದ್ಯಾಧರಾಂಗನೆಯರ ಚಿತ್ರಗಳನ್ನು ಬಿಡಿಸುತ್ತಾ ಶೃಂಗಾರಸಂಬಂಧಿತವಾದ ಸರಸಮಾತುಗಳನ್ನಾಡುತ್ತಾ ತನ್ನ ಪ್ರಿಯತಮೆಯರು ಕೋಪಗೊಳ್ಳುವಂತೆ ಮಾಡುತ್ತಿದ್ದನು.

೫೩. ಅವರು ಪ್ರಣಯ ಕೋಪದಿಂದ ತೋರುತ್ತಿದ್ದ ಭ್ರೂಭಂಗಗಳನ್ನೂ, ಕೆಂಪು ಕಣ್ಣುಗಳನ್ನೂ ನೋಡಿ, ಹಾಗೂ ಅವರ ಅದುರುವ ಚೆಂದುಟಿಗಳಿಂದ ಹೊಮ್ಮುತ್ತಿದ್ದ ಅಸ್ಪಷ್ಟವಾದ ನುಡಿಗಳನ್ನು ಕೇಳಿ ಸಂತೋಷಿಸಿದನು.

೫೪. ಗಗನಸಂಚಾರವುಳ್ಳ ಸೂರ್ಯಪ್ರಭನು ಪತ್ನಿಯರೊಡಗೂಡಿ ತಾಮ್ರಲಿಪ್ತಿ ನಗರಕ್ಕೆ ಬಂದು ಅಲ್ಲಿನ ಉದ್ಯಾನಗಳಲ್ಲಿ ಮದನಸೇನೆಯೊಡನೆಯೂ ವಿಹರಿಸಿದನು.

೫೫. ಅಲ್ಲಿ ತನ್ನ ಪತ್ನಿಯರನ್ನೆಲ್ಲ ನೆಲೆಗೊಳಿಸಿ ಪ್ರಹಸ್ತನೊಡಗೂಡಿ ಭೂತಾಸನ ವಿಮಾನವನ್ನೇರಿ ವಜ್ರಸಾರ ನಗರಕ್ಕೆ ಬಂದನು.

೫೬. ಅಲ್ಲಿನ ರಾಜನಾದ ರಂಭನು ನೋಡುತ್ತಿದ್ದಂತೆಯೇ ಅವನ ಮಗಳು ತಾರಾವಲಿಯನ್ನು ಪರಿಗ್ರಹಿಸಿದನು. ಏಕೆಂದರೆ ಅವಳು ಇವನಲ್ಲಿಯೇ ಅನುರಕ್ತಳಾಗಿ ಕಾಮಾಗ್ನಿಯಿಂದ ಬೇಯುತ್ತಿದ್ದಳು.

೫೭. ಮತ್ತೆ ತಾಮ್ರಲಿಪ್ತಿಗೆ ಬಂದು ಅಲ್ಲಿ ಮತ್ತೋರ್ವ ರಾಜಕನ್ಯೆಯಾದ ವಿಲಾಸಿನಿ ಎಂಬುವಳನ್ನು ಮದುವೆಯಾದನು.

---

ನಭೋವಿಹಾರಸಂಗೀತಪಾನಗೋಷ್ಠ್ಯಾದಿಭಿಸ್ತಥಾ ।
ಚಿಕ್ರೀಡ ಸಹಿತಸ್ತಾಭಿಃ ಪ್ರಹಸ್ತಾದ್ಯೈಶ್ಚ ಮಂತ್ರಿಭಿಃ ॥ ೫೧
ದಿವ್ಯಚಿತ್ರಕಲಾಭಿಜ್ಞೋ ಲಿಖನ್ ವಿದ್ಯಾಧರಾಂಗನಾಃ ।
ಕುರ್ವಂಶ್ಚ ನರ್ಮವಕ್ರೋಕ್ತೀಃ ಕೋಪಯಾಮಾಸ ತಾಃ ಪ್ರಿಯಾಃ ॥ ೫೨
ರೇಮೇ ಚ ತಾಸಾಂ ವದನೈಃ ಸಭ್ರೂಭಂಗಾರುಣೇಕ್ಷಣೈಃ ।
ವಚನೈಶ್ಚ ಸಕಂಪೌಷ್ಠಪುಟವಿಸ್ಖಲಿತಾಕ್ಷರೈಃ ॥ ೫೩
ಸದಾರಸ್ತಾಮ್ರಲಿಪ್ತೀಂ ಚ ಗತ್ವೋದ್ಯಾನೇಷು ಖೇಚರಃ ।
ಸ ರಾಜಸೂನುರ್ವ್ಯಹರತ್ ಸಮಂ ಮದನಸೇನಯಾ ॥ ೫೪
ಸ್ಥಾಪಯಿತ್ವಾ ಪ್ರಿಯಾಶ್ಚಾತ್ರ ಭೂತಾಸನವಿಮಾನಗಃ ।
ಜಗಾಮ ವಜ್ರಸಾರಾಖ್ಯಂ ಪ್ರಹಸ್ತೈಕಸಖಃ ಪುರಮ್ ॥ ೫೫
ಜಗ್ರಾಹ ತತ್ರ ತನಯಾಂ ರಾಜ್ಞೋ ರಂಭಸ್ಯ ಪಶ್ಯತಃ ।
ರಕ್ತಾಂ ತಾರಾವಲೀಂ ನಾಮ ದಹ್ಯಮಾನಾಂ ಸ್ಮರಾಗ್ನಿನಾ ॥ ೫೬
ಆಯಯೌ ತಾಮ್ರಲಿಪ್ತೀಂ ಚ ಪುನಸ್ತತ್ರಾಪ್ಯುಪಾಹರತ್ ।
ಅಪರಾಂ ರಾಜತನಯಾಂ ಕನ್ಯಾಂ ನಾಮ್ನಾ ವಿಲಾಸಿನೀಮ್ ॥ ೫೭

೫೮. ಇದರಿಂದ ಕುಪಿತನಾಗಿ ಬಂದು ಗರ್ವಿಯಾದ ಆತನ ಅಣ್ಣ ಸಹಸ್ರಾಯುಧನನ್ನು ತನ್ನ ವಿದ್ಯೆಯಿಂದ ಸ್ತಂಭನಗೊಳಿಸಿದನು.

೫೯. ತನ್ನ ಪತ್ನಿಯನ್ನು ಅಪಹರಿಸಲು ಅವನೊಡನೆ ಬಂದಿದ್ದ ಸೋದರಮಾವನನ್ನೂ, ಅವನೊಡನಿದ್ದ ಮತ್ತೋರ್ವನನ್ನೂ ಸೋಲಿಸಿ ಅವನ ತಲೆಯನ್ನು ಮುಂಡನ ಮಾಡಿಸಿ ಕಳಿಸಿದನು.

೬೦. ಎಷ್ಟೇ ಕೋಪಗೊಂಡರೂ ಭಾರ್ಯಾಬಂಧುಗಳೆಂಬ ಕಾರಣದಿಂದ ಅವರಿಬ್ಬರನ್ನು ಕೊಲ್ಲದೆ ಬಿಟ್ಟನು. ಅವರ ಅಹಂಕಾರವನ್ನು ಅಡಗಿಸಿ ನಕ್ಕು ಸುಮ್ಮನಾದನು.

೬೧. ಅನಂತರ ಒಂಭತ್ತು ಜನ ಕಾಂತೆಯರೊಡಗೂಡಿ ತಂದೆಯ ಆಹ್ವಾನದ ಮೇರೆಗೆ ತನ್ನ ಊರಾದ ಶಾಕಲಕ್ಕೆ ಬಂದನು.

೬೨. ಆಗ ತಾಮ್ರಲಿಪ್ತಿಯ ರಾಜನಾದ ವೀರಭಟನು ಇವನ ತಂದೆಯಾದ ಚಂದ್ರಪ್ರಭರಾಜನ ಬಳಿಗೆ ದೂತನನ್ನು ಅಟ್ಟಿದನು.

೬೩. " ತಮ್ಮ ಮಗನು ನನ್ನ ಇಬ್ಬರು ಕುಮಾರಿಯರನ್ನು ಅಪಹರಿಸಿದ್ದಾನೆ. ಆದರೂ ವಿದ್ಯಾಸಿದ್ಧನಾದ್ದರಿಂದ ನನ್ನ ಪುತ್ರಿಯರಿಗೆ ಶ್ಲಾಘ್ಯನಾದ ಪತಿಯೇ ದೊರಕಿದ್ದಾನೆ ಎಂದು ನೆಮ್ಮದಿಗೊಂಡು, ನನ್ನ ಸಮ್ಮತಿಯನ್ನು ಸೂಚಿಸುತ್ತೇನೆ.

---

ತದರ್ಥಂ ಕುಪಿತಾಯಾತಂ ತಸ್ಯಾ ಭ್ರಾತರಮುದ್ಧತಮ್ ।
ಸ ಸಹಸ್ರಾಯುಧಂ ನಾಮ ವಿದ್ಯಯಾ ಸ್ತಂಭಿತಂ ವ್ಯಧಾತ್ ॥ ೫೮
ಮಾತುಲಂ ಚ ಸಹಾಯಾತಂ ತಸ್ಯ ಸಂಸ್ತಭ್ಯ ಸಾನುಗಮ್ ।
ಚಕ್ರೇ ಮುಂಡಿತಮೂರ್ಧಾನಂ ತತ್ಕಾಂತಾಹರಣೈಷಿಣಮ್ ॥ ೫೯
ಭಾರ್ಯಾಬಂಧೂ ಇತಿ ಕ್ರುದ್ಧೋಽಪ್ಯವಧೀನ್ನ ಸತಾವುಭೌ ।
ದರ್ಪಭಂಗವಿಲಕ್ಷೌ ತು ವಿಹಸ್ಯ ಪ್ರತಿಮುಕ್ತವಾನ್ ॥ ೬೦
ತತಃ ಸ ನವಭಿಃ ಸೂರ್ಯಪ್ರಭಃ ಕಾಂತಾಭಿರನ್ವಿತಃ ।
ಪಿತ್ರಾಹೂತೋ ವಿಮಾನೇನ ಸ್ವಪುರಂ ಶಾಕಲಂ ಯಯೌ ॥ ೬೧
ತತಶ್ಚಾಸ್ಯ ಪಿತುಶ್ಚಂದ್ರಪ್ರಭಭೂಮಿಭೃತೋಽಂತಿಕಮ್ ।
ಪ್ರಾಹಿಣೋತ್ತಾಮ್ರಲಿಪ್ತಿತೋ ದೂತಂ ವೀರಭಟೋ ನೃಪಃ ॥ ೬೨
ಸಂದಿದೇಶ ಚ ಪುತ್ರೇಣ ತವ ಮೇಽಪಹೃತೇ ಸುತೇ ।
ತದಸ್ತು ವಿದ್ಯಾಸಿದ್ಧೋ ಹಿ ಶ್ಲಾಘ್ಯ ಏಷ ಪತಿಸ್ತಯೋಃ ॥ ೬೩

೬೪. ನಮ್ಮಲ್ಲಿ ನಿಮಗೆ ಸ್ನೇಹವಿದ್ದಲ್ಲಿ ಇಂದೇ ಇಲ್ಲಿಗೆ ಬನ್ನಿರಿ. ಮದುವೆಯ ಮಂಗಳಾಚಾರಗಳನ್ನು ನೆರವೇರಿಸಿ ಸತ್ಕಾರ ಪೂರ್ವಕವಾದ ಸ್ನೇಹವನ್ನು ಬೆಳೆಸೋಣ," ಎಂದು ದೂತನು ಸಂದೇಶ ನೀಡಿದನು.

೬೫–೬೬. ಇದನ್ನು ಕೇಳಿ ದೂತನನ್ನು ಸತ್ಕರಿಸಿ ಕಳಿಸಿದ ಚಂದ್ರಪ್ರಭರಾಜನು ನಾಳೆಯೇ ಅಲ್ಲಿಗೆ ಹೋಗೋಣವೆಂದು ಹೇಳಿ, ವೀರಭಟನ ಸಂದೇಶದ ಪ್ರಾಮಾಣಿಕತೆ ಯನ್ನರಿಯುವ ಸಲುವಾಗಿ, ದೂರಹೋಗಿ ಬರಲು ಸಮರ್ಥನೆಂದು ಪ್ರಹಸ್ತನನ್ನು ನೇಮಿಸಿದನು.

೬೭–೬೮. ಪ್ರಹಸ್ತನು ವೇಗವಾಗಿ ಹೋಗಿ ವೀರಭಟರಾಜನನ್ನು ಕಂಡನು. ಇದರಿಂದ ವಿಸ್ಮಿತನಾದ ಆತನಿಂದ ಸತ್ಕಾರ ಪಡೆದವನಾಗಿ ತನ್ನ ಪ್ರಭುಗಳು ಬೆಳಿಗ್ಗೆ ಬರುವ ವಾರ್ತೆಯನ್ನು ಹೇಳಿ, ಮುಹೂರ್ತಕಾಲದಲ್ಲೇ ಆಕಾಶಗಾಮಿಯಾಗಿ ಚಂದ್ರಪ್ರಭನ ಬಳಿಗೆ ಬಂದನು.

೬೯. ವೀರಭಟನು ಸಿದ್ಧತೆ ಮಾಡಿಕೊಂಡಿರುವುದನ್ನು ತನ್ನ ರಾಜನಿಗೆ ಹೇಳಿದನು. ಸಂತುಷ್ಟನಾದ ರಾಜನು ಪುತ್ರನ ಮಂತ್ರಿಯನ್ನು ಸತ್ಕರಿಸಿದನು.

---

ಸ್ನೇಹಶ್ಚ ಯದಿ ವೋಽಸ್ಮಾಸು ತದಿಹಾಗಚ್ಛತಾಧುನಾ ।
ವಿವಾಹಾಚಾರಸತ್ಕಾರಸಖ್ಯಂ ಯಾವದ್ವಿದಧ್ಮಹೇ ॥ ೬೪
ಏತಚ್ಛ್ರುತ್ವಾ ಸ ಸತ್ಕೃತ್ಯ ದೂತಂ ನಿಶ್ಚಿತವಾನ್ಸ್ತದಾ ।
ಶ್ವ ಏವ ತತ್ರ ಗಮನಂ ರಾಜಾ ಚಂದ್ರಪ್ರಭೋ ದ್ರುತಮ್ ॥ ೬೫
ಸತ್ಯತ್ವನಿಶ್ಚಯಂ ಜ್ಞಾತುಂ ರಾಜ್ಞೋ ವೀರಭಟಸ್ಯ ತು ।
ಪ್ರಹಸ್ತಂ ಪ್ರಾಹಿಣೋನ್ಮತ್ವಾ ದೂರಂ ದೂತಗಮಾಗಮೌ ॥ ೬೬
ಸ ಪ್ರಹಸ್ತೋ ಜವಾದ್ಗತ್ವಾ ದೃಷ್ಟ್ವಾ ವೀರಭಟಂ ಚ ತಮ್ ।
ನೃಪಂ ದೃಷ್ಟ್ವಾ ಚ ತತ್ಕಾರ್ಯಂ ತಚ್ಚ್ರದ್ಧಿತಸುಪೂಜಿತಃ ॥ ೬೭
ತಸ್ಮೈ ಸವಿಸ್ಮಯಾಯೋಕ್ತ್ವಾ ಪ್ರಭೂಣಾಂ ಪ್ರಾತರಾಗಮಮ್ ।
ಮುಹೂರ್ತೇನಾಯಯೌ ಚಂದ್ರಪ್ರಭಪಾರ್ಶ್ವಂ ವಿಹಾಯಸಾ ॥ ೬೮
ಶಶಂಸ ತಸ್ಮೈ ರಾಜ್ಞೇ ಚ ಸಜ್ಜಂ ವೀರಭಟಂ ಸ್ಥಿತಮ್ ।
ಸೋಽಪಿ ತಂ ಸಚಿವಂ ಸೂನೋಸ್ತುಷ್ಟೋ ರಾಜಾಭ್ಯಪೂಜಯತ್ ॥ ೬೯

೨೦–೨೧. ಬಳಿಕ, ಕೀರ್ತಿಮತೀದೇವಿಯೊಡಗೂಡಿದ ರಾಜಾ ಚಂದ್ರಪ್ರಭನೂ, ವಿಲಾಸಿನೀ ಮದನಸೇನೆಯರೊಡಗೂಡಿದ ಸೂರ್ಯಪ್ರಭನನ್ನೂ ತಮ್ಮ ಪರಿವಾರದವರನ್ನೂ ಅಮಾತ್ಯರನ್ನೂ ಕರೆದುಕೊಂಡು, ಮಾರನೆಯದಿನ ಬೆಳಿಗ್ಗೆ ವಿಮಾನದಲ್ಲಿ ಕುಳಿತು ಹೊರಟರು.

೨೨. ಅಂದೇ ಪ್ರಹರ (ಮೂರು ಘಂಟೆಗಳಕಾಲ) ಮಾತ್ರದಲ್ಲಿ ತಾಮ್ರಲಿಪ್ತಿನಗರವನ್ನು ಸೇರಿದರು. ಆಕಾಶಗಾಮಿಗಳಾದ ಇವರನ್ನು ಜನರು ಕುತೂಹಲದಿಂದ ತಲೆಯೆತ್ತಿ ನೋಡುತ್ತಿದ್ದರು.

೨೩. ಭೂಮಿಯ ಮೇಲೆ ಇಳಿದ ಇವರನ್ನು ಎದುರ್ಗೊಂಡ ರಾಜಾವೀರಭಟನೊಡನೆ ಪುರಪ್ರವೇಶವನ್ನು ಮಾಡಿದರು.

೨೪–೨೫. ಚಂದನದ ನೀರಿನಿಂದ ಸಿಂಪಡಿಸಿದ್ದ ಸುಂದರವಾದ ಬೀದಿಗಳಲ್ಲಿ, ಪುರನಾರಿಯರ ಕುತೂಹಲಭರಿತ ಕಣ್ಣುಗಳೆಂಬ ಕನ್ನೈದಿಲೆಗಳಿಂದ ಪದೇಪದೇ ಸಂಬಂಧಿರಾಜನಿಗೂ, ಅಳಿಯನಿಗೂ ಪೂಜೆಯನ್ನು ಸಮರ್ಪಿಸಿ, ರಾಜನು ತನ್ನ ಪುತ್ರಿಯರ ಮದುವೆಯ ಶುಭಕಾರ್ಯಗಳನ್ನು ನೆರವೇರಿಸಿದನು.

---

ತತಃ ಕೀರ್ತಿಮತೀದೇವ್ಯಾ ಸಹ ಚಂದ್ರಪ್ರಭಃ ಪ್ರಭುಃ ।
ಸೂರ್ಯಪ್ರಭೋ ವಿಲಾಸಿನ್ಯಾ ತಥಾ ಮದನಸೇನಯಾ ॥ ೨೦
ಭೂತಾಸನವಿಮಾನಂ ತದಾರುಹ್ಯ ಸಪರಿಚ್ಛದೌ ।
ಸಾಮಾತ್ಯೌ ಚಾಪರೇದ್ಯುಸ್ತೌ ಪ್ರಾತಃ ಪ್ರಯಯತುಸ್ತತಃ ॥ ೨೧
ಅಹ್ನಃ ಪ್ರಹರಮಾತ್ರೇಣ ತಾಮ್ರಲಿಪ್ತೀಮವಾಪತುಃ ।
ದೃಶ್ಯಮಾನೌ ಜನೈರ್ವ್ಯೋಮ್ನಿ ಕೌತುಕೋತ್‌ಕ್ಷಿಪ್ತಲೋಚನೈಃ ॥ ೨೨
ನಭಸ್ತಲಾವತೀರ್ಣೌ ಚ ಕೃತಪ್ರತ್ಯುದ್ಗಮೇನ ತೌ ।
ರಾಜ್ಞಾ ವೀರಭಟೇನೈತಾಂ ಸಮಂ ವಿವಿಶತುಃ ಪುರೀಮ್ ॥ ೨೩
ಚಂದನೋದಕಸಂಸಿಕ್ತಚಾರುರಥ್ಯಾಂ ಪದೇಪದೇ ।
ಕಟಾಕ್ಷೈಃ ಪೌರನಾರೀಣಾಂ ಪ್ರಕೀರ್ಣೇಂದೀವರಾಮಿವ ॥ ೨೪
ತತ್ರ ಸಂಬಂಧಿಜಾಮಾತ್ರೋಃ ಕೃತ್ವಾ ವೀರಭಟಸ್ತಯೋಃ ।
ಪೂಜಾಂ ಯಥಾವತ್ತನಯಾವಿವಾಹಪ್ರಕ್ರಿಯಾಂ ವ್ಯಧಾತ್ ॥ ೨೫

೨೬–೨೮. ವೀರಭಟಮಹಾರಾಜನು, ಬೆಳ್ಳಿ ಮತ್ತು ಚಿನ್ನದ ಸಾವಿರ ಹೊನ್ನುಗಳನ್ನೂ ರತ್ನಾಭರಣಗಳ ಭಾರವನ್ನೂ ಹೊತ್ತ ನೂರು ಒಂಟೆಗಳನ್ನೂ, ನಾನಾವಸ್ತ್ರಗಳ ಭಾರದಿಂದ ತುಂಬಿದ ಐವತ್ತು ಒಂಟೆಗಳನ್ನೂ, ಸಾವಿರ ಕುದುರೆಗಳನ್ನೂ ಎಪ್ಪತ್ತೈದು ಆನೆಗಳನ್ನೂ, ಆಭರಣಗಳಿಂದ ಶೋಭಿಸುವ ರೂಪವತಿಯರಾದ ಸಾವಿರ ವಾರವನಿತೆಯರನ್ನೂ ತನ್ನ ಇಬ್ಬರು ಹೆಣ್ಣುಮಕ್ಕಳಿಗೆ ಮದುವೆಯ ಬಳುವಳಿಯಾಗಿ ನೀಡಿದನು.

೨೯. ಅಳಿಯನಾದ ಸೂರ್ಯಪ್ರಭನಿಗೂ, ಆತನ ತಂದೆಯಾದ ಚಂದ್ರಪ್ರಭನಿಗೂ ಒಳ್ಳೆಯ ರತ್ನಗಳನ್ನು ನೀಡಿ ಉಪಚರಿಸಿದನು.

೩೦. ಹಾಗೆಯೇ ಮಂತ್ರಿಗಳಾದ ಪ್ರಹಸ್ತನೇ ಮೊದಲಾದವರನ್ನೂ ಸನ್ಮಾನಿಸಿದನು. ಇಡೀ ನಗರವೇ ಸಂತೋಷಗೊಳ್ಳುವಂತೆ ಮಹೋತ್ಸವವನ್ನು ಆಚರಿಸಿದನು.

೩೧. ಪ್ರಿಯಪತ್ನಿಯರೊಡಗೂಡಿದ ಸೂರ್ಯಪ್ರಭನು ತಂದೆಯ ಸಾನ್ನಿಧ್ಯದಿಂದಲೂ ಕೂಡಿ (ಹರ್ಷದಿಂದ) ವಿವಿಧಾಹಾರ ಪಾನೀಯಗಳನ್ನೂ ಸಂಗೀತಾದಿಕಲೆಗಳನ್ನೂ ಅನುಭವಿಸುತ್ತಾ ವೈಭೋಗದಲ್ಲಿದ್ದನು.

೩೨. ಅಷ್ಟರಲ್ಲಿ ವಜ್ರರಾತ್ರನಗರದಿಂದ ರಂಭರಾಜನ ದೂತನು ಆಸ್ಥಾನಕ್ಕೆ ಬಂದು ತನ್ನ ರಾಜನ ಸಂದೇಶವನ್ನು ಅರುಹಿದನು.

---

ವಿಶುದ್ಧಸ್ಯ ಹಿ ಭಾರಾಣಾಂ ಸಹಸ್ರಂ ಕಾಂಚನಸ್ಯ ಚ ।
ಭೃತಂ ಚ ಶತಮುಷ್ಟ್ರಾಣಾಂ ರತ್ನಾಭರಣಭಾರಕೈಃ ॥ ೨೬
ಉಷ್ಟ್ರಪಂಚಶತೀಂ ನಾನಾವಸ್ತ್ರಭಾರಾಭಿಪೂರಿತಾಮ್ ।
ವಾಜಿನಾಂ ಚ ಸಹಸ್ರಾಣಿ ಸಪ್ತ ಪಂಚ ಚ ದಂತಿನಾಮ್ ॥ ೨೭
ರೂಪಾಭರಣಯುಕ್ತಾನಾಂ ಸಹಸ್ರಂ ವಾರಯೋಷಿತಾಂ ।
ವೇದ್ಯಾಂ ದುಹಿತ್ರೋಃ ಪ್ರದದೌ ರಾಜಾ ವೀರಭಟಸ್ತಯೋಃ ॥ ೨೮
ಸೂರ್ಯಪ್ರಭಸ್ಯ ಜಾಮಾತುಸ್ತತ್‌ಪಿತುಶ್ಚ ತಯೋಃ ಪುನಃ ।
ಉಪಚಾರಂ ಸ ಸದ್ರತ್ನೈಶ್ಚಕಾರ ವಿಷಯೈಸ್ತಥಾ ॥ ೨೯
ತನ್ಮಂತ್ರಿಣೋ ಯಥಾವಚ್ಚ ಪ್ರಹಸ್ತಾದೀನಮಾನಯತ್ ।
ಚಕಾರ ಸೋತ್ಸವಂ ಹೃಷ್ಯದಶೇಷನಗರೀಜನಮ್ ॥ ೩೦
ಸೂರ್ಯಪ್ರಭಶ್ಚ ತತ್ರಾಸೀತ್ ಪಿತೃಯುಕ್ತಃ ಪ್ರಿಯಾಸಖಃ ।
ತತ್ಕಾಲಂ ವಿವಿಧಾಹಾರಪಾನಗೇಯಾದಿಭೋಗಭುಕ್ ॥ ೩೧
ತಾವಚ್ಚ ತತ್ರ ರಂಭಸ್ಯ ಸಕಾಶಾದ್ವಜ್ರರಾತ್ರತಃ ।
ಆಗಾದ್ದೂತಃ ಸ ಚಾಸ್ಥಾನೇ ಜಗಾದ ಸ್ವಪ್ರಭೋರ್ವಚಃ ॥ ೩೨

೮೩. 'ವಿದ್ಯಾಬಲದಿಂದ ಗರ್ವಿತನಾದ ಯುವರಾಜನಾದ ಸೂರ್ಯಪ್ರಭನು ನಮ್ಮ ಮಗಳನ್ನು ಅಪಹರಿಸಿ ನಮಗೆ ಅಪಮಾನ ಮಾಡಿದ್ದಾನೆ.

೮೪. ಸಮಾನವ್ಯಸನಿಯಾದ ವೀರಭಟರಾಜನ ಸಂಧಾನದಿಂದ ನೀವು ಬಂದಿದ್ದೀರಿ ಎಂಬುದು ಈಗ ನಮಗೆ ತಿಳಿಯಿತು.

೮೫–೮೬. ಹಾಗೆಯೇ ನಮ್ಮೊಡನೆಯೂ ಸಂಧಿಯನ್ನು ಒಪ್ಪಿಕೊಂಡು ನಮ್ಮಲ್ಲಿಗೆ ಬನ್ನಿ. ಇಲ್ಲದಿದ್ದರೆ ನಮಗೆ ಮೃತ್ಯುವೇ ಗತಿ.' ಎಂಬುದಾಗಿ ರಂಭರಾಜನ ದೂತನ ವಾಕ್ಯವನ್ನು ಕೇಳಿ ವೀರಭಟನೊಡನಿದ್ದ ಚಂದ್ರಪ್ರಭರಾಜನು ದೂತನನ್ನು ಸನ್ಮಾನಿಸಿ ಕಳಿಸಿದ ನಂತರ ಪ್ರಹಸ್ತನನ್ನು ಕುರಿತು ಇಂತೆಂದನು:

೮೭–೮೯. "ನೀನೇ ಹೋಗಿ ರಂಭರಾಜನಿಗೆ ನಮ್ಮ ಮಾತನ್ನು ತಿಳಿಸಬೇಕು. ಅದೆಂದರೆ, 'ವ್ಯರ್ಥವಾಗಿ ತಾಪವನ್ನೇಕೆ ಅನುಭವಿಸುತ್ತೀಯ ? ಭಾವೀ ಚಕ್ರವರ್ತಿಯ ಆವಿರ್ಭಾವವಾಗಿದೆ. ಸಾಕ್ಷತ್ ಶಿವನೇ ಸೂರ್ಯಪ್ರಭನನ್ನು ವಿದ್ಯಾಧರ ಚಕ್ರವರ್ತಿಯಾಗಿಸಿದ್ದಾನೆ. ನಿನ್ನ ಪುತ್ರಿಯರು ಈತನ ಪತ್ನಿಯರೆಂದು ಸಿದ್ಧರೇ ನಿಶ್ಚಯಿಸಿದ್ದಾರೆ. ಅವರು ತಮಗೆ ಯೋಗ್ಯವಾದ ಸ್ಥಳಕ್ಕೇ ಬಂದು ಸೇರಿದ್ದಾರೆ. ನೀನು ಕಠೋರನಾದ್ದರಿಂದ ನಿನ್ನನ್ನು ಕೇಳಲಿಲ್ಲ ಅಷ್ಟೆ ಆದರೂ ನೀನೂ ನಮ್ಮ ಸ್ನೇಹಿತನೇ. ನಿಮ್ಮ ನಗರಕ್ಕೂ ಬರುತ್ತೇವೆ. ಸಂತೋಷಚಿತ್ತನಾಗು' ಎಂದು."

---

ವಿದ್ಯಾಬಲಾವಲಿಪ್ತೇನ ಯುವರಾಜೇನ ನಃ ಕೃತಃ ।
ಸೂರ್ಯಪ್ರಭೇಣ ತನಯಾಹರಣೋತ್ಥಃ ಪರಾಭವಃ ॥ ೮೩
ಅದ್ಯ ಚ ಜ್ಞಾತಮಸ್ಮಾಭಿಃ ಯದ್ವೀರಭಟಭೂಭೃತಃ ।
ಪ್ರತಿಪನ್ನಾಃ ಸ್ಥ ಸಂಧಾನೇ ಸಮಾನವ್ಯಸನಸ್ಯ ನಃ ॥ ೮೪
ತಥೈವ ಚಾನುಮನ್ಯಧ್ವೇ ಯದ್ಯಸ್ಮತ್ಸಂಧಿಮಾಶು ತತ್ ।
ಇಹಾಪ್ಯಾಗಮ್ಯತಾಂ ನೋ ಚೇನ್ಮೃತ್ಯುನಾ ನೋಽತ್ರ ನಿಷ್ಕೃತಿಃ ॥ ೮೫
ತಚ್ಛ್ರುತ್ವಾ ತಂ ಚ ಸಂಮಾನ್ಯ ದೂತಂ ವೀರಭಟಾಚಿತಃ ।
ಪ್ರಹಸ್ತಂ ಸೋಽಬ್ರವೀದ್ರಾಜಾ ತತ್ರ ಚಂದ್ರಪ್ರಭಃ ಪುನಃ ॥ ೮೬
ತ್ವಮೇವ ಗಚ್ಛ ತಂ ರಂಭಮಸ್ಮದ್ವಾಕ್ಯಾದಿದಂ ವದ ।
ಕಿಂ ತಪ್ಯಸೇ ವೃಥಾ ಭಾವೀ ಚಕ್ರವರ್ತೀ ಹಿ ನಿರ್ಮಿತಃ ॥ ೮೭
ವಿದ್ಯಾಧರಾಣಾಂ ಗಿರಿಶೇನೈವ ಸೂರ್ಯಪ್ರಭೋಽಧುನಾ ।
ಅಸ್ಯೈತಾಸ್ತ್ವತ್ಸುತಾದ್ಯಾಶ್ಚ ಭಾರ್ಯಾಃ ಸಿದ್ಧೈರುದಾಹೃತಾಃ ॥ ೮೮
ತತ್ಪ್ರಾಪ್ತಾ ತೇ ಸುತಾ ಸ್ಥಾನಂ ಕರ್ಕಶಸ್ತ್ವಂ ತು ನಾರ್ಥಿತಃ ।
ತತ್ಪ್ರೀಯಸ್ವ ಸಖಾ ನಸ್ತ್ವಮೇಷ್ಯಾಮೋಽತ್ರಾಪ್ಯಮೀ ವಯಮ್ ॥ ೮೯

೯೦. ಹೀಗೆ ರಾಜನ ಸಂದೇಶವನ್ನು ಹೊತ್ತ ಪ್ರಹಸ್ತನು ಆಕಾಶಮಾರ್ಗದಲ್ಲಿ ಹೊರಟು ಒಂದೇ ಪ್ರಹರಕಾಲದಲ್ಲಿ ವಜ್ರರಾತ್ರನಗರಕ್ಕೆ ಬಂದು ಸೇರಿದನು.

೯೧. ಅಲ್ಲಿ ರಂಭನಿಗೆ ಸಂದೇಶ ನೀಡಿ, ಆತನಿಂದ ಅನುಮೋದನೆ ಪಡೆದು ಹಿಂತಿರುಗಿ ಬಂದು ಚಂದ್ರಪ್ರಭನಿಗೆ ರಂಭರಾಜನ ಮಾತನ್ನು ಅರುಹಿದನು.

೯೨. ಚಂದ್ರಪ್ರಭರಾಜನು ಪ್ರಭಾಸನೆಂಬ ಮಂತ್ರಿಯನ್ನು ಶಾಕಲಕ್ಕೆ ಕಳಿಸಿ ರಂಭರಾಜನ ಪುತ್ರಿಯಾದ ತಾರಾವಳಿಯನ್ನು ಕರೆಸಿಕೊಂಡನು.

೯೩-೯೪. ಬಳಿಕ ವೀರಭಟನಿಂದಲೂ ಇನ್ನೂ ಅನೇಕರಿಂದಲೂ ಪೂಜಿತನಾಗಿ ಸೂರ್ಯಪ್ರಭನೊಡನೆ ವಿಮಾನವೇರಿ ವಜ್ರರಾತ್ರಕ್ಕೆ ಬಂದನು. ಅಲ್ಲಿ ಕುತೂಹಲಿಗಳಾದ ಜನರಿಂದ ತುಂಬಿದ್ದ ರಾಜಮಾರ್ಗದಲ್ಲಿ ಎದುರ್ಗೊಂಡು ರಂಭರಾಜನು ಸತ್ಕರಿಸಲು, ರಾಜಧಾನಿಯನ್ನು ಹೊಕ್ಕನು.

೯೫. ರಂಭನು ವಿವಾಹಮಂಗಳ ಪ್ರಕ್ರಿಯೆಗಳನ್ನು ಕ್ರಮವಾಗಿ ಆಚರಿಸಿದ ನಂತರ ಮಗಳಿಗೆ ಲೆಕ್ಕವಿಲ್ಲದಷ್ಟು ಚಿನ್ನ, ರತ್ನ, ಆನೆ, ಕುದುರೆಗಳನ್ನು ನೀಡಿದನು.

೯೬. ಅಳಿಯ ಸೂರ್ಯಪ್ರಭನನ್ನು ಎಂಥಹ ವೈಭೋಗಗಳಿಂದ ಸತ್ಕರಿಸಿದನೆಂದರೆ ಆತನಿಗೆ ತಾನು ಇದುವರೆಗೆ ಅನುಭವಿಸಿದ ಮಹಾಭೋಗಗಳೆಲ್ಲ ಮರೆತೇ ಮಾಯವಾಗಿ ಹೋದವು.

---

ಇತಿ ರಾಜ್ಞೋಕ್ತಸಂದೇಶಃ ಪ್ರಹಸ್ತೋ ಗಗನೇನ ಸಃ ।
ಗತ್ವಾ ಪ್ರಹರಮಾತ್ರೇಣ ವಜ್ರರಾತ್ರಮವಾಪತತ್ ॥ ೯೦
ತತ್ರ ರಂಭಾಯ ಸಂದೇಶಮುಕ್ತ್ವಾ ತೇನಾನುಮೋದಿತಃ ।
ತಥೈವಾಗತ್ಯ ಸೋಽವಾದೀದ್ರಾಜ್ಞೇ ಚಂದ್ರಪ್ರಭಾಯ ತತ್ ॥ ೯೧
ಚಂದ್ರಪ್ರಭೋಽಥ ಸಚಿವಂ ಪ್ರಭಾಸಂ ಪ್ರೇಷ್ಯ ಶಾಕಲಾತ್ ।
ಆನಾಯಯತ್ತಾಂ ರಂಭಸ್ಯ ಪಾರ್ಶ್ವಂ ತಾರಾವಲೀಂ ಸುತಾಮ್ ॥ ೯೨
ತತೋ ಯಯೌ ವಿಮಾನೇನ ಸಹಸೂರ್ಯಪ್ರಭೇಣ ಸಃ ।
ರಾಜ್ಞಾ ವೀರಭಟೇನಾಪಿ ಸರ್ವೈಶ್ಚಾನ್ಯೈಃ ಸುಸೇವಿತಃ ॥ ೯೩
ವಜ್ರರಾತ್ರಂ ಚ ಸಂಪ್ರಾಪ ಮಾರ್ಗೋನ್ಮುಖಜನಾಕುಲಮ್ ।
ರಂಭೇಣಾಭ್ಯುದ್ಗತಸ್ತಸ್ಯ ರಾಜಧಾನೀಂ ವಿವೇಶ ಸಃ ॥ ೯೪
ತತ್ರ ರಂಭೋಽಪ್ಯಸೌ ಕ್ಲೃಪ್ತವಿವಾಹಪ್ರಕ್ರಿಯೋತ್ಸವಃ ।
ಅಸಂಖ್ಯಹೇಮಹಸ್ತ್ಯಶ್ವರತ್ನಾದಿ ದುಹಿತುರ್ದದೌ ॥ ೯೫
ಜಾಮಾತರಂ ಚ ಸ ತಥಾ ಸೂರ್ಯಪ್ರಭಮುಪಾಚರತ್ ।
ಯಥಾ ತಸ್ಯ ನಿಜಾ ಭೋಗಾಃ ಸರ್ವೇ ವಿಸ್ಮೃತಿಮಾಯಯುಃ ॥ ೯೬

೯೭. ಹೀಗೆ ಎಲ್ಲರೂ ಉತ್ಸವಾನಂದದಲ್ಲಿ ತಲ್ಲೀನರಾಗಿರುವಾಗ ರಂಭರಾಜನ ಬಳಿಗೆ ಕಾಂಚೀನಗರದಿಂದ ದೂತನು ಬಂದನು.

೯೮. ಆತನಿಂದ ಸಂದೇಶ ತಿಳಿದ ರಂಭನು ಚಂದ್ರಪ್ರಭರಾಜನನ್ನು ಕುರಿತು ಹೇಳಿದನು: 'ಕಾಂಚೀನಗರದ ರಾಜ ನನ್ನ ಅಣ್ಣ. ಕುಂಭೀರಕನೆಂದು ಅವನ ಹೆಸರು; ಆತ ತನ್ನ ಆಪ್ತದೂತನನ್ನು ನನ್ನ ಬಳಿಗೆ ಕಳಿಸಿ ಹೀಗೆಂದಿದ್ದಾನೆ:

೯೯–೧೦೨. 'ನನ್ನ ಮಗಳನ್ನು ಅಪಹರಿಸಿದ ಬಳಿಕ ನಿನ್ನ ಮಗಳನ್ನು ಅಪಹರಿಸಲಾಯಿತಲ್ಲವೇ ? ನೀನು ಅವರೊಡನೆ ಸ್ನೇಹಸಂಬಂಧ ಬೆಳೆಸಿದ್ದೀಯೆಂದು ಕೇಳಿದೆ. ಅವರೊಡನೆ ನನ್ನ ಸ್ನೇಹವೂ ಬೆಳೆಯುವಂತೆ ಮಾಡು. ನನ್ನ ಮನೆಗೆ ಅವರೂ ಬರಲಿ. ನಾನೇ ನನ್ನ ಮಗಳಾದ ವರುಣಸೇನೆಯನ್ನು ಅವರಿಗೆ ಅರ್ಪಿಸುತ್ತೇನೆ.' ಈ ಪ್ರಾರ್ಥನೆಯನ್ನು ತಾವು ಪುರಸ್ಕರಿಸಬೇಕು ಎಂದಾಗ, ಚಂದ್ರಪ್ರಭನು ಅವನ ಮಾತನ್ನು ಗೌರವಿಸಿದನು.

೧೦೩. ಶೀಘ್ರದಲ್ಲೇ ರಾಜನು ಪ್ರಹಸ್ತನನ್ನು ಕಳಿಸಿ ಶಾಕಲದಿಂದ ವರುಣಸೇನೆಯನ್ನು ಕರೆಸಿ ಆಕೆಯ ತಂದೆಯಾದ ಕುಂಭೀರಕನ ಬಳಿ ಸೇರಿಸಿದನು.

---

ಯಾವಚ್ಚ ತತ್ರ ತೇ ತಿಷ್ಠಂತ್ಯುತ್ಸವಾನಂದಿತಾಃ ಸುಖಮ್ ।
ತಾವದ್ರಂಭಾಂತಿಕಂ ಕಾಂಚೀನಗರ್ಯಾ ದೂತ ಆಯಯೌ ॥ ೯೭

ಸ ತಸ್ಮಾಚ್ಛ್ರುತಸಂದೇಶೋ ರಂಭಶ್ಚಂದ್ರಪ್ರಭಂ ನೃಪಮ್ ।
ಪ್ರಾಹ ಕಾಂಚೀಶ್ವರೋ ರಾಜಾ ಕುಂಭೀರಾಖ್ಯೋಽಸ್ತಿ ಮೇಽಗ್ರಜಃ ॥ ೯೮

ತೇನಾಪ್ತಃ ಪ್ರೇಷಿತೋ ಮೇಽದ್ಯ ದೂತೋ ವಕ್ತುಮಿದಂ ವಚಃ ।
ಮಮ ಸೂರ್ಯಪ್ರಭೇಣಾದೌ ಸುತಾನೀತಾ ತತಸ್ತವ ॥ ೯೯

ಕೃತಂ ಚಾದ್ಯ ತ್ವಯಾ ಸಖ್ಯಂ ತೈಃ ಸಹೇತಿ ಮಯಾ ಶ್ರುತಮ್ ।
ತನ್ಮಮಾಪಿ ತಥೈವ ತ್ವಂ ಸಖ್ಯಂ ತೈಃ ಸಹ ಸಾಧಯ ॥ ೧೦೦

ಆಯಾಂತು ತೇ ಮಮ ಗೃಹಂ ಯಾವತ್ಸೂರ್ಯಪ್ರಭಾಯ ತಾಂ ।
ಸ್ವಹಸ್ತೇನಾರ್ಪಯಾಮೀಹ ಸುತಾಃ ವರುಣಸೇನಿಕಾಮ್ ॥ ೧೦೧

ಇತ್ಯೇಷಾರ್ಭ್ಯರ್ಥನಾ ತಸ್ಯ ಕ್ರಿಯತಾಮಿತಿ ವಾದಿನಃ ।
ರಂಭಸ್ಯ ಶ್ರದ್ದಧೇ ಚಂದ್ರಪ್ರಭೋ ರಾಜಾ ತದಾ ವಚಃ ॥ ೧೦೨

ಪ್ರಹಸ್ತಂ ಪ್ರೇಷ್ಯ ಚ ಕ್ಷಿಪ್ರಂ ಶಾಕಲಾತ್ತಾಮನಾಯಯತ್ ।
ಪುರಾದ್ವರುಣಸೇನಾಂ ಸ ಕುಂಭೀರಸ್ಯಾಂತಿಕಂ ಪಿತುಃ ॥ ೧೦೩

೧೦೪. ಮರುದಿನ ವಿಮಾನದಲ್ಲಿ ಚಂದ್ರಪ್ರಭ, ಸೂರ್ಯಪ್ರಭ, ರಂಭ, ವೀರಭಟ ಎಲ್ಲರೂ ಪರಿವಾರಸಹಿತರಾಗಿ ಕಾಂಚೀಪುರಕ್ಕೆ ಹೊರಟರು.

೧೦೫. ಕುಂಭೀರರಾಜನ ಸ್ವಾಗತವನ್ನು ಪಡೆದು ಅವರೆಲ್ಲರೂ ನಾನಾರತ್ನಭೂಷಿತವಾದ ಬಹುಗುಣಶೋಭಿತವಾದ, ಭೂಮಿದೇವಿಯ ವಡ್ಯಾಣದಂತೆ ಕಾಣುವ ಕಾಂಚೀನಗರವನ್ನು ಪ್ರವೇಶಿಸಿದರು.

೧೦೬. ನಂತರ ಕುಂಭೀರಕನು ವಿಧಿವತ್ತಾಗಿ ತನ್ನ ಸುತೆಯನ್ನು ಸೂರ್ಯಪ್ರಭನಿಗೆ ವಿವಾಹ ಮಾಡಿಕೊಟ್ಟನು. ವಧೂವರರಿಬ್ಬರಿಗೂ ಅಪಾರವಾದ ಧನವನ್ನು ಉಡುಗೊರೆ ಯಾಗಿ ನೀಡಿದನು.

೧೦೭. ವಿವಾಹ ನೆರವೇರಿದನಂತರ ಊಟಮಾಡಿ ಸುಖಾಸನದಲ್ಲಿದ್ದ ಚಂದ್ರಪ್ರಭ ರಾಜನನ್ನು ಕುರಿತು ಪ್ರಹಸ್ತನು ಎಲ್ಲರೂ ಇರುವಾಗ ಹೀಗೆಂದನು:

೧೦೮. "ದೇವ ! ನಾನು ಸಂಚರಿಸುತ್ತಾ ಶ್ರೀಕಂಠದೇಶಕ್ಕೆ ಹೋದೆ. ಅಲ್ಲಿ ಅಕಸ್ಮಾತ್ತಾಗಿ ರಾಜಾ ಕಾಂತಿಸೇನನು ನನ್ನನ್ನು ನೋಡಿ ಹೇಳಿದನು:

೧೦೯. ಸೂರ್ಯಪ್ರಭನು ಅಪಹರಿಸಿರುವ ನನ್ನ ಮಗಳಾದ ಕಾಂತಿಮತಿಯನ್ನು ಕರೆದುಕೊಂಡು ನನ್ನ ಮನೆಗೆ ಬರಲಿ. ಅವನಿಗೆ ವಿಧಿವತ್ತಾಗಿ ಸತ್ಕಾರವನ್ನು ಮಾಡುತ್ತೇನೆ.

೧೧೦. ಇಲ್ಲದಿದ್ದರೆ ಮಗಳ ಮೇಲಣ ಪ್ರೀತಿಯಿಂದ ಮೋಹಿತನಾಗಿ ಪ್ರಾಣವನ್ನು ಬಿಟ್ಟುಬಿಡುತ್ತೇನೆ. ಹಾಗೆ ಅವನು ನನಗೆ ಅಲ್ಲಿ ಹೇಳಿದುದನ್ನು ಈ ಪ್ರಸ್ತಾಪದಲ್ಲಿ ನಿನಗೆ ಹೇಳಿದ್ದೇನೆ’

---

ಅನ್ಯೇದ್ಯುಶ್ಚ ವಿಮಾನೇನ ಸ ಚ ಸೂರ್ಯಪ್ರಭಶ್ಚ ಸಃ ।
ರಂಭೋ ವೀರಭಟಃ ಸರ್ವೇ ಕಾಂಚೀಂ ತೇ ಸಾನುಗಾ ಯಯುಃ ॥ ೧೦೪
ಕುಂಭೀರಾಭ್ಯುದ್ಗತಾಸ್ತಾಂ ಚ ನಾನಾರತ್ನಚಿತಾಂ ಪುರೀಮ್ ।
ಕಾಂಚೀಂ ಕಾಂಚೀಮಿವ ಭುವಃ ಪ್ರಾವಿಶನ್ ಗುಣಗುಂಫಿತಾಮ್ ॥ ೧೦೫
ತತ್ರ ತಾಂ ವಿಧಿನಾ ದತ್ವಾ ಸುತಾಂ ಸೂರ್ಯಪ್ರಭಾಯ ಸಃ ।
ವರವಧ್ವೋರದಾದ್ಭೂರಿ ಕುಂಭೀರೋ ದ್ರವಿಣಂ ತಯೋಃ ॥ ೧೦೬
ನಿರ್ವೃತ್ತೇ ಚ ವಿವಾಹೇಽತ್ರ ಭುಕ್ತೋತ್ತರಸುಖಸ್ಥಿತಮ್ ।
ಚಂದ್ರಪ್ರಭಮುವಾಚೈವಂ ಪ್ರಹಸ್ತಃ ಸರ್ವಸಂನಿಧೌ ॥ ೧೦೭
ದೇವ ಶ್ರೀಕಂಠವಿಷಯೇ ಭ್ರಮನ್ ಗತವಾನಹಮ್ ।
ತತ್ರ ಪ್ರಸಂಗದೃಷ್ಟೋ ಮಾಂ ಕಾಂತಿಸೇನನೃಪೋಽಬ್ರವೀತ್ ॥ ೧೦೮
ಸೂರ್ಯಪ್ರಭೋ ಮಮಾದಾಯ ಸುತಾಂ ಕಾಂತಿಮತೀಂ ಹೃತಾಮ್ ।
ಗೃಹಮೇತು ಕರಿಷ್ಯಾಮಿ ವಿಧಿವತ್ತಸ್ಯ ಸತ್ಕ್ರಿಯಾಮ್ ॥ ೧೦೯
ನೋ ಚೇತ್ತ್ಯಕ್ಷ್ಯಾಮ್ಯಹಂ ದೇಹಂ ದುಹಿತೃಸ್ನೇಹಮೋಹಿತಃ ।
ಇತ್ಯುಕ್ತ್ತೇನ ತತ್ರಾಹಂ ಪ್ರಸ್ತಾವೇ ಚ ಮಯೋದಿತಮ್ ॥ ೧೧೦

೧೧. ಪ್ರಹಸ್ತನು ಹಾಗೆ ಹೇಳಲಾಗ ರಾಜಾ ಚಂದ್ರಪ್ರಭನು ಹೇಳಿದನು. "ಹಾಗಾದರೆ ಹೋಗು. ಕಾಂತಿಮತಿಯನ್ನು ಅವನ ಬಳಿಗೆ ಕಳುಹಿಸು.

೧೨. ನಂತರ ನಾವು ಅಲ್ಲಿಗೆ ಬರುತ್ತೇವೆ.' ಎಂದು ರಾಜನು ಹೇಳಲಾಗಿ, ಪ್ರಹಸ್ತನು ಆಗಲೇ ಆಕಾಶಮಾರ್ಗದಲ್ಲಿ ಹೋಗಿ ರಾಜನು ಹೇಳಿದಂತೆಯೇ ಮಾಡಿದನು.

೧೩. ಬೆಳಗಾದಾಗ ಕುಂಭೀರರಾಜ ಸಹಿತರಾಗಿ ಚಂದ್ರಪ್ರಭ ಮೊದಲಾದವರು ಆಕಾಶಗಾಮಿಯಾದ ವಿಮಾನದಲ್ಲಿ ಹೊರಟು ಶ್ರೀಕಂಠದೇಶಕ್ಕೆ ಬಂದರು.

೧೪. ಅಲ್ಲೂ ಕೂಡ ಕಾಂತಿಸೇನರಾಜನು ಮೊದಲೇ ಬಂದು ಸ್ವಾಗತಿಸಿ ತನ್ನ ಅರಮನೆಗೆ ಕರೆದೊಯ್ದು ವಿವಾಹಮಂಗಳ ಕಲಾಪಗಳನ್ನು ನೆರವೇರಿಸಿದನು.

೧೫. ಮಗಳು ಕಾಂತಿಮತಿಗೂ ಮತ್ತು ಅಳಿಯ ಸೂರ್ಯಪ್ರಭನಿಗೂ ಎಂತಹ ರತ್ನಸಂಚಯವನ್ನು ನೀಡಿದನೆಂದರೆ, ಅಲ್ಲಿ ನೆರೆದಿದ್ದ ರಾಜರೆಲ್ಲರೂ ಅದನ್ನೆಲ್ಲ ನೋಡಿ ಚಕಿತರಾದರು.

೧೬. ಅಲ್ಲಿ ಎಲ್ಲರೂ ನಾನಾ ಭೋಗಭಾಗ್ಯಗಳನ್ನನುಭವಿಸುತ್ತಾ ಇರಲಾಗಿ, ಕೌಶಾಂಬಿಯಿಂದ ದೂತನೊಬ್ಬನು ಬಂದು ಹೇಳಿದನು.

೧೭. 'ನಿಮ್ಮೆಲ್ಲರಿಗೂ ಜನಮೇಜಯ ಭೂಪಾಲನು ಈ ಸಂದೇಶವನ್ನು ಕಳಿಸಿದ್ದಾನೆ; ನನ್ನ ಮಗಳಾದ ಪರಪುಷ್ಟೆಯನ್ನು ಇತ್ತೀಚೆಗೆ ಯಾರೋ ಕರೆದೊಯ್ದಿದ್ದರು.

---

ಏವಮುಕ್ತೇ ಪ್ರಹಸ್ತೇನ ರಾಜಾ ಚಂದ್ರಪ್ರಭೋಽಭ್ಯಧಾತ್ ।
ಗಚ್ಛ ಕಾಂತಿಮತೀಂ ತರ್ಹಿ ತಾಂ ಪ್ರಾಪಯ ತದಂತಿಕಮ್ ॥ ೧೧
ತತಸ್ತತ್ರ ವಯಂ ಯಾಮ ಇತ್ಯುಕ್ತಸ್ತೇನ ಭೂಭೃತಾ ।
ತದೈವ ನಭಸಾ ಗತ್ವಾ ಪ್ರಹಸ್ತಸ್ತತ್ತಥಾಕರೋತ್ ॥ ೧೨
ಪ್ರಾತಶ್ಚ ತೇ ಸಕುಂಭೀರಾಃ ಸರ್ವೇ ಚಂದ್ರಪ್ರಭಾದಯಃ ।
ಶ್ರೀಕಂಠವಿಷಯಂ ಜಗ್ಮುರ್ವಿಮಾನೇನ ದ್ಯುಗಾಮಿನಾ ॥ ೧೩
ತತ್ರಾಪ್ಯಗ್ರಾಗತೋ ರಾಜಾ ಕಾಂತಿಸೇನಃ ಸ್ವಮಂದಿರಮ್ ।
ತಾವತ್ಪ್ರವೇಶ್ಯ ದುಹಿತುರ್ವ್ಯಧಾದುದ್ವಾಹಮಂಗಲಮ್ ॥ ೧೪
ದದೌ ತಸ್ಯೈ ತದಾ ಕಾಂತಿಮತ್ಯೈ ಸೂರ್ಯಪ್ರಭಾಯ ಚ ।
ಆಶ್ಚರ್ಯಜನನಂ ರಾಜ್ಞಾಮಮಿತಂ ರತ್ನಸಂಚಯಮ್ ॥ ೧೫
ತತಃ ಸ್ಥಿತೇಷು ತೇಷ್ವತ್ರ ನಾನಾಭೋಗೋಪಸೇವಿಷು ।
ಸರ್ವೇಷು ದೂತಃ ಕೌಶಾಂಬ್ಯಾ ಆಗತ್ಯೈವಮಭಾಷತ ॥ ೧೬
ಜನಮೇಜಯಭೂಪಾಲೋ ಬ್ರವೀತಿ ಭವತಾಮಿದಮ್ ।
ಹೃತಾ ಕೇನಾಪಿ ನಚಿರಂ ಪರಪುಷ್ಟೇತಿ ಮೇ ಸುತಾ ॥ ೧೭

೧೧೮. ಈಗ ಆಕೆ ಸೂರ್ಯಪ್ರಭನ ಬಳಿಯಿದ್ದಾಳೆಂದು ತಿಳಿದು ಬಂದಿದೆ. ಆತನು ಅವಳೊಡನೆ ನಿರ್ಭಯವಾಗಿ ನಮ್ಮ ಮನೆಗೆ ಬರಲಿ.

೧೧೯. ಅವನನ್ನು ಸತ್ಕರಿಸಿ ಶಾಸ್ತ್ರೋಕ್ತವಾಗಿ ಮದುವೆಮಾಡಿ ಕಳಿಸಿಕೊಡುತ್ತೇನೆ. ಇಲ್ಲದಿದ್ದರೆ ನಾನು ನಿಮಗೆ ಶತ್ರು, ನೀವು ನಮಗೆ ಶತ್ರುಗಳು.'

೧೨೦. ಎಂದು ತನ್ನೊಡೆಯನ ಮಾತನ್ನು ಹೇಳಿ ಸುಮ್ಮನಾದನು. ಆಗ ಚಂದ್ರಪ್ರಭನು ಅವರೆಲ್ಲರನ್ನೂ ಕುರಿತು ಏಕಾಂತದಲ್ಲಿ ಹೀಗೆಂದನು.

೧೨೧. 'ಹೀಗೆ ಗರ್ವದ ನುಡಿಯಾಡುವವನ ಮನೆಗೆ ಹೋಗಲು ಹೇಗೆ ಸಾಧ್ಯ?' ಆಗ, ಸಿದ್ಧಾರ್ಥನೆಂಬ ಮಂತ್ರಿಯು ರಾಜನ ಮಾತನ್ನು ಕೇಳಿ ಹೇಳಿದನು.

೧೨೨. 'ದೇವ, ತಪ್ಪು ತಿಳಿಯಬಾರದು. ಆ ರಾಜನು ಇಂಥಹ ಮಾತನ್ನು ಹೇಳಲು ಅರ್ಹನಾಗಿಯೇ ಇದ್ದಾನೆ. ಆತನು ಮಹಾದಾನಿ, ಪಂಡಿತ ಮತ್ತು ಸತ್ಕುಲ ಪ್ರಸೂತ.

೧೨೩. ಅವನು ಶೂರನೂ, ಅಶ್ವಮೇಧಯಾಗ ಮಾಡಿದವನೂ ಆಗಿದ್ದಾನೆ. ಅಲ್ಲದೆ ಒಮ್ಮೆಯೂ ಕೂಡ ಶತ್ರುಗಳಿಂದ ಪರಾಜಿತನಾಗಿಲ್ಲ. ಇಷ್ಟೂ ಇದ್ದದ್ದನ್ನು ಇದ್ದಂತೆ ಹೇಳುವ ಅವನು ವಿರುದ್ಧವಾದುದನ್ನು ಏನು ಹೇಳಿದ್ದಾನೆ ?

೧೨೪. ಆತನು ಹೇಳಿದ ಶತ್ರುತ್ವ ಇಂದ್ರನಿಗೂ ಇದ್ದದ್ದೇ. ಆದ್ದರಿಂದ ಆ ರಾಜನ ಅರಮನೆಗೆ (ನಾವು) ಹೋಗಬೇಕು. ಆತ ಸತ್ಯಸಂಧನಾಗಿದ್ದಾನೆ.

---

ಜ್ಞಾತಂ ಚೇಹಾದ್ಯ ಯತ್ಪ್ರಾಪ್ತಾ ಹಸ್ತಂ ಸೂರ್ಯಪ್ರಭಸ್ಯ ಸಾ ।
ತತ್ತಯಾ ಸಹ ಸೋಽಸ್ಮಾಕಂ ಗೃಹಮಾಯಾತ್ವಶಂಕಿತಃ ॥ ೧೧೮
ಸತ್ಕೃತ್ಯ ಪ್ರೇಷಯಿಷ್ಯಾಮಿ ಸಭಾರ್ಯಂ ತಂ ಯಥಾವಿಧಿ ।
ಅನ್ಯಥಾ ಶತ್ರವೋ ಯೂಯಂ ಮಮ ಯುಷ್ಮಾಕಮಪ್ಯಹಮ್ ॥ ೧೧೯
ಇತ್ಯುಕ್ತ್ವಾ ಸ್ವಾಮಿವಚನಂ ದೂತಸ್ತೂಷ್ಣೀಂ ಬಭೂವ ಸಃ ।
ಅಥ ಚಂದ್ರಪ್ರಭಃ ಸರ್ವಾನೇಕಾಂತೇ ಕ್ಷಿತಿಪೋಽಬ್ರವೀತ್ ॥ ೧೨೦
ಕಥಮೇವಂ ಸದರ್ಪೋಕ್ತೇರ್ಗಮ್ಯತೇ ತಸ್ಯ ವೇಶ್ಮನಿ ।
ತಚ್ಛ್ರುತ್ವಾ ತಸ್ಯ ಸಿದ್ಧಾರ್ಥನಾಮಾ ಮಂತ್ರ್ಯೇವಮಭ್ಯಧಾತ್ ॥ ೧೨೧
ನಾನ್ಯಥಾ ದೇವ ಮಂತವ್ಯಂ ವಕ್ತುಮೇವಂ ಹಿ ಸೋಽರ್ಹತಿ ।
ಸ ಹಿ ರಾಜಾ ಮಹಾದಾತಾ ಪಂಡಿತಃ ಸತ್ಕುಲೋದ್ಗತಃ ॥ ೧೨೨
ಶೂರೋಽಶ್ವಮೇಧಯಾಜೀ ಚ ಸದೈವಾನ್ಯಾಪರಾಜಿತಃ ।
ವಿರುದ್ಧಂ ಕಿಂ ನು ತೇನೋಕ್ತಂ ಯಥಾವಸ್ತ್ವಭಿದಾಯಿನಾ ॥ ೧೨೩
ಶತ್ರುತೋದಾಹೃತಾ ಯಾ ವಾ ಸಾ ವಾಸವಕೃತೇಽಧುನಾ ।
ತದ್ಗಂತವ್ಯಂ ಗೃಹೇ ತಸ್ಯ ಸತ್ಯಸಂಧೋ ನೃಪೋ ಹಿ ಸಃ ॥ ೧೨೪

೧೨೫. ಆತನ ಮನಸ್ಸನ್ನು ಚೆನ್ನಾಗಿ ತಿಳಿಯಲು ಯಾರನ್ನಾದರೂ ಕಳಿಸಿಕೊಡಿ', ಎಂದು ಸಿದ್ಧಾರ್ಥನು ಹೇಳಿದ್ದನ್ನು ಎಲ್ಲರೂ ಅನುಮೋದಿಸಿದರು.

೧೨೬. ನಂತರ, ಜನಮೇಜಯ ರಾಜನನ್ನು (ಮನಸ್ಸನ್ನು) ತಿಳಿಯಲು ಪ್ರಹಸ್ತನನ್ನು ಕಳಿಸಲಾಯಿತು. ಅಲ್ಲಿಂದ ಬಂದಿದ್ದ ದೂತನನ್ನೂ ಚಂದ್ರಪ್ರಭನು ಸನ್ಮಾನಿಸಿದನು.

೧೨೭. ಅಲ್ಲಿಂದ ಹೊರಟು, ಮಂತ್ರಿಸಹಿತನಾದ ಕೌಶಾಂಬಿಯ ಒಡೆಯನನ್ನು ಪ್ರಹಸ್ತನು ಕಂಡನು. ಅಲ್ಲಿಂದ ಲೇಖವನ್ನು ತಂದು ಚಂದ್ರಪ್ರಭನಿಗೆ ನೀಡಿ ಆತನಿಗೆ ಸಂತೋಷವುಂಟುಮಾಡಿದನು.

೧೨೮. ಮತ್ತೆ ಪ್ರಹಸ್ತನನ್ನೇ ಕಳಿಸಿ ಶಾಕಲದಿಂದ ಶೀಘ್ರವಾಗಿ ಪರಪುಷ್ಟೆಯನ್ನು ಕರೆಸಿ ಆಕೆಯ ತಂದೆಯ ಬಳಿಗೆ ಕಳಿಸಿಕೊಟ್ಟನು.

೧೨೯. ನಂತರ, ಕಾಂತಿಸೇನನೇ ಮೊದಲಾದ ರಾಜರೊಡಗೂಡಿ ಚಂದ್ರಪ್ರಭ, ಸೂರ್ಯಪ್ರಭರು ವಿಮಾನದಲ್ಲಿ ಪಯಣಿಸಿ ಕೌಶಾಂಬಿಗೆ ಬಂದಿಳಿದರು.

೧೩೦. ಜನಮೇಜಯರಾಜನು ವಿನಮ್ರನಾಗಿ, ಅಳಿಯನೊಡನೆ ಬಂದ ಅವರನ್ನೆಲ್ಲ ಎದುರ್ಗೊಂಡು ಮರ್ಯಾದೆಯನ್ನು ಸಲ್ಲಿಸಿದನು.

೧೩೧. ಮಗಳ ಮದುವೆಯನ್ನು ವಿಧಿವತ್ತಾಗಿ ವಿಜೃಂಭಣೆಯಿಂದ ಮಾಡಿ ಐದು ಸಾವಿರ ಆನೆಗಳನ್ನೂ ಒಂದು ಲಕ್ಷ ಜಾತಿಕುದುರೆಗಳನ್ನೂ ಬಳುವಳಿಯಾಗಿ ನೀಡಿದನು.

---

ತದಪಿ ಪ್ರೇಷ್ಯತಾಂ ಕಶ್ಚಿತ್ತಸ್ಯ ಚಿತ್ತೋಪಲಬ್ಧಯೇ ।
ಇತಿ ಸಿದ್ಧಾರ್ಥವಚನಂ ಸರ್ವೇ ಶ್ರದ್ದಧುರತ್ರ ತೇ ॥ ೧೨೫
ತತೋ ಜಿಜ್ಞಾಸಿತುಂ ಚಂದ್ರಪ್ರಭಸ್ತಂ ಜನಮೇಜಯಮ್ ।
ಪ್ರಹಸ್ತಂ ವ್ಯಸೃಜತ್ತಂ ಚ ದೂತಂ ತಸ್ಯಾಪ್ಯಮಾನಯತ್ ॥ ೧೨೬
ಪ್ರಹಸ್ತಶ್ಚ ಸ ಗತ್ವಾ ತಂ ಕೌಶಾಂಬೀಶಂ ಸಸಂವಿದಮ್ ।
ವಿಧಾಯಾನೀಯ ತಲ್ಲೇಖಂ ಚಂದ್ರಪ್ರಭಮತೋಷಯತ್ ॥ ೧೨೭
ಸೋಽಪಿರಾಜಾ ತಮೇವಾಶು ಪ್ರಹಸ್ತಂ ಪ್ರೇಷ್ಯ ಶಾಕಲಾತ್ ।
ಜನಮೇಜಯಪಾರ್ಶ್ವಂ ತಾಂ ಪರಪುಷ್ಟಾಮನಾಯಯತ್ ॥ ೧೨೮
ತತಶ್ಚಂದ್ರಪ್ರಭಾದ್ಯಾಸ್ತೇ ಸೂರ್ಯಪ್ರಭಪುರೋಗಮಾಃ ।
ಸಕಾಂತಿಸೇನಾಃ ಕೌಶಾಂಬೀಂ ವಿಮಾನೇನಾಗಮನ್ನೃಪಾಃ ॥ ೧೨೯
ತತ್ರ ಸಂಬಂಧಿಜಾಮಾತೃಮುಖಾನ್ಪ್ರತ್ಯುದ್ಗಮಾದಿನಾ ।
ಪ್ರಹ್ವಸ್ತಾನ್ ಪೂಜಯಾಮಾಸ ಸ ರಾಜಾ ಜನಮೇಜಯಃ ॥ ೧೩೦
ದದೌ ಚ ಕೃತ್ವಾ ದುಹಿತುರ್ವಿವಾಹವಿಧಿಸತ್ಕ್ರಿಯಾಮ್ ।
ಪಂಚ ಹಸ್ತಿಸಹಸ್ರಾಣಿ ಲಕ್ಷಂ ಚ ವರವಾಜಿನಾಮ್ ॥ ೧೩೧

೧೩೨. ರತ್ನಗಳು, ಚಿನ್ನ, ಶ್ರೇಷ್ಠವಾದ ವಸ್ತ್ರಗಳು, ಕರ್ಪೂರ, ಅಗುರು, ಇವುಗಳ ಹೊರೆಹೊತ್ತ ಐದು ಸಾವಿರ ಒಂಟೆಗಳನ್ನೂ ಉಡುಗೊರೆಯಾಗಿ ನೀಡಿದನು.

೧೩೩. ಬಹುಜನರು ಸೇರಿದ್ದ, ನೃತ್ಯವಾದ್ಯಗಳಿಂದ ಕೂಡಿದ ಒಂದು ಉತ್ಸವವನ್ನೂ ಏರ್ಪಡಿಸಿ, ಬ್ರಾಹ್ಮಣರನ್ನು ಪೂಜಿಸಿ, ರಾಜಶ್ರೇಷ್ಠರನ್ನು ಸನ್ಮಾನಿಸಿದನು.

೧೩೪. ಅಷ್ಟರಲ್ಲಿ, ಮುಂದೊದಗುವ ಅಪಾಯವನ್ನು ಮುಂಗಾಣಿಸುತ್ತಿರುವಂತೆ, ಆಕಾಶವು ಇದ್ದಕ್ಕಿದ್ದಂತೆ ಕೆಂಪಾಯಿತು.

೧೩೫. ಆಕಾಶದಲ್ಲಿ ಶತ್ರುಸೈನ್ಯವು ಕಾಣಿಸಿಕೊಂಡು, ದಿಕ್ಕುಗಳೆಲ್ಲ ಗಾಬರಿಯಿಂದುಂಟಾದ ಭಯಧ್ವನಿಗಳಿಂದ ತುಂಬಿತೋ ಎಂಬಂತಾಯಿತು.

೧೩೬. ಆಗ ಆಕಾಶಗಾಮಿಗಳೊಡನೆ ಯುದ್ಧಮಾಡಲು ಭೂಮಿಚರರನ್ನು ಮೇಲಕ್ಕೆತ್ತಿತೋ ಎಂಬಂತೆ ಆ ಕ್ಷಣದಲ್ಲಿ ಬಿರುಗಾಳಿಯು ಬೀಸತೊಡಗಿತು.

೧೩೭. ಒಮ್ಮೆಲೇ, ಅಂತರಿಕ್ಷದಲ್ಲಿ ಮಹತ್ತರವಾದ ವಿದ್ಯಾಧರಸೇನೆ ತನ್ನ ದೀಪ್ತಿಯಿಂದ ದಿಕ್ಕುಗಳನ್ನು ಬೆಳಗುತ್ತಾ, ಮಹಾನಾದಗೈಯುತ್ತಾ ವೇಗವಾಗಿ ಬರುವುದು ಕಂಡಿತು.

೧೩೮. ಸೈನ್ಯಮಧ್ಯದಲ್ಲಿ ಅತಿಸುಂದರಾಕಾರನಾದ ವಿದ್ಯಾಧರಕುಮಾರನಿದ್ದುದನ್ನು ಸೂರ್ಯಪ್ರಭನೇ ಮುಂತಾಗಿ ಎಲ್ಲರೂ ವಿಸ್ಮಿತರಾಗಿ ನೋಡುತ್ತಿದ್ದರು.

---

ರತ್ನಕಾಂಚನಸದ್ವಸ್ತ್ರಕರ್ಪೂರಾಗುರುಪೂರಿತೈಃ ।
ಭಾರೈರ್ಭೃತಾನಾಮುಷ್ಟ್ರಾಣಾಂ ಸಹಸ್ರಾಣ್ಯಪಿ ಪಂಚ ಸಃ ॥ ೧೩೨
ಚಕ್ರೇ ಚ ವಾದ್ಯನೃತ್ತೈಕಮಯಂ ಲೋಕಮಹೋತ್ಸವಮ್ ।
ಪೂಜಿತಬ್ರಾಹ್ಮಣವರಂ ಮಾನಿತಾಖಿಲರಾಜಕಮ್ ॥ ೧೩೩
ತಾವಚ್ಚಾಶಂಕಿತಂ ತತ್ರ ನಭಃ ಪಿಂಜರತಾಂ ಯಯೌ ।
ರಕ್ತಾರುಣತ್ವಮಭ್ಯರ್ಣಭಾವಿ ಶಂಸದಿವಾತ್ಮನಃ ॥ ೧೩೪
ತುಮುಲಾಕಲಿಶಬ್ದಾಶ್ಚ ಬಭೂವುಃ ಸಹಸಾ ದಿಶಃ ।
ಭೀತಾ ಇವಾಗತಂ ದೃಷ್ಟ್ವಾ ಪರಸೈನ್ಯಂ ವಿಹಾಯ ಸಾ ॥ ೧೩೫
ತಾವಚ್ಚ ತತ್ಕ್ಷಣಂ ವಾತುಂ ಪ್ರವೃತ್ತೋಽಭೂನ್ಮಹಾನಿಲಃ ।
ಖೇಚರೈಃ ಸಹ ಯುದ್ಧಾಯ ಭೂಚರಾನುತ್ಕ್ಷಿಪನ್ನಿವ ॥ ೧೩೬
ಕ್ಷಣಾಚ್ಚ ದದೃಶೇ ವ್ಯೋಮ್ನಿ ವಿದ್ಯಾಧರಬಲಂ ಮಹತ್ ।
ದೀಪ್ತಿದ್ಯೋತಿತದಿಕ್ಚಕ್ರಮುದ್ಯನ್ನಾದಂ ಮಹಾಜವಮ್ ॥ ೧೩೭
ತನ್ಮಧ್ಯೇ ಚಾತಿಸುಭಗಂ ವಿದ್ಯಾಧರಕುಮಾರಕಮ್ ।
ಏಕಂ ಸೂರ್ಯಪ್ರಭಾದ್ಯಾಸ್ತೇ ಪಶ್ಯಂತಿ ಸ್ಮ ಸುವಿಸ್ಮಿತಾಃ ॥ ೧೩೮

೧೩೯–೧೪೧. ‘ಆಷಾಢೇಶ್ವರನ ಮಗನಾದ ದಾಮೋದರ ಯುವರಾಜನಿಗೆ ಜಯವಾಗಲಿ ! ಎಲೈ ಭೂಮಿಯಲ್ಲಿರುವ ಮಾನವಪ್ರಾಣಿ, ಸೂರ್ಯಪ್ರಭನೇ, ಈತನ ಕಾಲಿಗೆರಗು. ಎಲೈ ಜನಮೇಜಯ ! ನಮಸ್ಕರಿಸು. ಈ ಹುಲುಮಾನವನಿಗೆ ನಿನ್ನ ಮಗಳನ್ನು ಕೊಟ್ಟೆಯಲ್ಲ ಅದು ವ್ಯರ್ಥ ! ಈತನನ್ನು ಆರಾಧಿಸು, ಇಲ್ಲದಿದ್ದರೆ ನಿನಗೆ ಕ್ಷೇಮವಿಲ್ಲ’ ಎಂದು ವಿದ್ಯಾಧರ ವಂದಿಗಳು ಆಕಾಶದಿಂದಲೇ ದಾಮೋದರನ ಮುಂದೆ ಗಟ್ಟಿದನಿಯಲ್ಲಿ ಕೂಗಿದರು.

೧೪೨. ಅದನ್ನು ಕೇಳಿ ಅವನ ಸೈನ್ಯವನ್ನು ಕಂಡು ಕ್ರೋಧದಿಂದ ಕೂಡಿದ ಸೂರ್ಯಪ್ರಭನು ಖಡ್ಗಚರ್ಮಗಳನ್ನು ಧರಿಸಿ ತನ್ನ ವಿದ್ಯೆಯಿಂದ ಅಂಬರಕ್ಕೆ ಜಿಗಿದನು.

೧೪೩–೧೪೪. ಆತನ ಮಂತ್ರಿಗಳಾದ ಭಾಸ, ಪ್ರಹಸ್ತ, ಪ್ರಭಾಸ, ಸಿದ್ಧಾರ್ಥ, ಪ್ರಜ್ಞಾಢ್ಯ, ಸರ್ವದಮನ, ವೀತಭೀತಿ, ಶುಭಂಕರ ಮುಂತಾದವರು ಆಯುಧಧಾರಿಗಳಾಗಿ ಅವನನ್ನೇ ಅನುಸರಿಸಿ ಮೇಲಕ್ಕೆ ಹಾರಿದರು. ಅವರಿಗೂ ವಿದ್ಯಾಧರರಿಗೂ ಘೋರಯುದ್ಧವೇ ಆರಂಭವಾಯಿತು.

---

‘ಆಷಾಢೇಶ್ವರತನಯೋ ದಾಮೋದರ ಏಷ ಜಯತಿ ಯುವರಾಜಃ ।
ರೇ ಮರ್ತ್ಯ ಧರಣಿಗೋಚರ ಸೂರ್ಯಪ್ರಭ ನಿಪತ ಪಾದಯೋರಸ್ಯ ॥
೧೩೯
ಪ್ರಣಮ ಚ ರೇ ಜನಮೇಜಯ ಭವತಾ ದತ್ತಾ ಸುತಾ ಕಿಮಸ್ಥಾನೇ ।
ಆರಾಧಯ ತಮಿಮಂ ತದ್ದೇವಂ ನೈಷೋಽನ್ಯಥಾ ಕ್ಷಮತೇ ॥ ೧೪೦
ಇತ ತಸ್ಮಿನ್ಕ್ಷಣೇ ವಿದ್ಯಾಧರಬಂದೀ ತತೋಽಂಬರಾತ್ ।
ತಸ್ಯ ದಾಮೋದರಸ್ಯಾಗ್ರಾದ್ವ್ಯಾಜಹಾರೋಚ್ಚಯಾ ಗಿರಾ ॥ ೧೪೧
ತಚ್ಛ್ರುತ್ವಾ ದೃಷ್ಟತತ್ಸೈನ್ಯೋ ಗೃಹೀತ್ವಾ ಖಡ್ಗಚರ್ಮಣೀ ।
ಸೂರ್ಯಪ್ರಭೋ ನಭಃ ಕ್ರೋಧಾದುತ್ಪಪಾತ ಸ್ವವಿದ್ಯಯಾ ॥ ೧೪೨
ಅನೂತ್ಪೇತುಶ್ಚ ಸಚಿವಾಸ್ತಸ್ಯ ಸರ್ವೇ ಧೃತಾಯುಧಾಃ ।
ಪ್ರಹಸ್ತಶ್ಚ ಪ್ರಭಾಸಶ್ಚ ಭಾಸಃ ಸಿದ್ಧಾರ್ಥ ಏವ ಚ ॥ ೧೪೩
ಪ್ರಜ್ಞಾಢ್ಯಃ ಸರ್ವದಮನೋ ವೀತಭೀತಿಃ ಶುಭಂಕರಃ ।
ವಿದ್ಯಾಧರಾಣಾಂ ತೈಃ ಸಾಕಂ ಪ್ರಾವರ್ತತ ಮಹಾಹವಃ ॥ ೧೪೪

೧೪೫–೧೪೬. ಸೂರ್ಯಪ್ರಭನು ದಾಮೋದರನಿದ್ದೆಡೆಗೆ ಹಾರಿದನು. ಖಡ್ಗದಿಂದ ಶತ್ರುಗಳನ್ನು ಕತ್ತರಿಸುತ್ತಾ ಅವರ ಕತ್ತಿಯ ಬೀಸುಗಳನ್ನು ತನ್ನ ಗುರಾಣಿಯಿಂದ (ಚರ್ಮ) ತಡೆಯುತ್ತಾ ಸೂರ್ಯಪ್ರಭನ ಕಡೆಯ ಬೆರಳೆಣಿಕೆಯ ಮಂದಿ ಲಕ್ಷಸಂಖ್ಯೆಯ ವಿದ್ಯಾಧರರೊಡನೆ ಸಮಸಮವಾಗಿ ಯುದ್ಧ ಮಾಡಿದರು.

೧೪೭. ಶೂರರ ಮೇಲೆ ಬೀಳುತ್ತಿದ್ದ ರಕ್ತದಿಂದ ತೊಯ್ದ ಕತ್ತಿಯ ಅಲುಗುಗಳು ಯಮದೇವನ ಕ್ರೂರದೃಷ್ಟಿಗಳಂತೆ ಕಂಡವು.

೧೪೮. ನೆಲಕ್ಕೆ ಬೀಳುತ್ತಿದ್ದ ವಿದ್ಯಾಧರರು ಭಯದಿಂದ ಶರಣಾಗತರಾಗಿ ಚಂದ್ರಪ್ರಭನ ಮುಂದೆ ತಮ್ಮ ದೇಹಗಳನ್ನೂ, ಶಿರಗಳನ್ನೂ ಕೆಡುಹುತ್ತಿರುವಂತೆ ತೋರುತ್ತಿದ್ದರು.

೧೪೯. ಸೂರ್ಯಪ್ರಭನು ಲೋಕದೃಷ್ಟಿಯಿಂದಲೂ ಆಕಾಶಶ್ರೀಯಿಂದಲೂ ಶೋಭಿಸಿದನು. ಇಡೀ ನಭೋಮಂಡಲವೇ ರಕ್ತದಿಂದ ಕೆಂಪಾಗಿ ಸಿಂಧೂರವನ್ನು ಎರಚಿದ್ದಂತೆ ಕಂಡಿತು.

೧೫೦. ಖಡ್ಗಚರ್ಮಧಾರಿಯಾದ ದಾಮೋದರನೊಡನೆ ಎದುರುಬದುರಾಗಿ ನಿಂತು ಸೂರ್ಯಪ್ರಭನು ಕಾದಾಡಿದನು.

೧೫೧. ಹಾಗೆಯೇ ಯುದ್ಧ ಮಾಡುತ್ತ ಕರಣ ಪ್ರಯೋಗದಿಂದ ಅವನೊಳಗೆ ಹೊಕ್ಕು ಕತ್ತಿಯಿಂದ ಅವನ ಕವಚವನ್ನು ಖಂಡಿಸಿ, ಭೂಮಿಗೆ ಬೀಳಿಸಿದನು.

---

ಸೂರ್ಯಪ್ರಭಶ್ಚಾಭ್ಯಧಾವದ್ಯತೋ ದಾಮೋದರಸ್ತತಃ ।
ಖಡ್ಗೇನಾಘ್ನನ್ ರಿಪೂನ್ ಗೃಹ್ಣನ್ತಚ್ಛಸ್ತ್ರಾಣಿ ಸ್ವಚರ್ಮಣಾ ॥ ೧೪೫
ತೇ ಜನಾಃ ಕತಿ ಸಂಖ್ಯೇ ಚ ಲಕ್ಷಸಂಖ್ಯಾ ನಭಶ್ಚರಾಃ ।
ಸಮತ್ವಮೇವ ವಿವಿದುರ್ಯುಧ್ಯಮಾನಾಃ ಪರಸ್ಪರಮ್ ॥ ೧೪೬
ಬಭುಃ ಖಡ್ಗಲತಾಶ್ಚಾತ್ರ ಸಾಕುಲಾ ರುಧಿರಾರುಣಾಃ ।
ಪತಂತ್ಯಃ ಶೂರಕಾಯೇಷು ಕೃತಾಂತಸ್ಯೇವ ದೃಷ್ಟಯಃ ॥ ೧೪೭
ವಿದ್ಯಾಧರಾಶ್ಚ ಧರಣೌ ಭಿಯೇವ ಶರಣಾರ್ಥಿನಃ ।
ಶಿರೋಭಿಶ್ಚ ಶರೀರೈಶ್ಚ ಪೇತುಶ್ಚಂದ್ರಪ್ರಭಾಗ್ರತಃ ॥ ೧೪೮
ಸೂರ್ಯಪ್ರಭೋ ಬಭೌ ಲೋಕದೃಷ್ಟಯಾ ಖೇಚರಶ್ರಿಯಾ ।
ಸಿಂದೂರೇಣೇವ ಕೀರ್ಣೇನ ನಭೋಽಭೂದಸೃಜಾರುಣಮ್ ॥ ೧೪೯
ಸೂರ್ಯಪ್ರಭಶ್ಚ ಸಂಪ್ರಾಪ್ಯ ಯುಯುಧೇ ತೇನ ಸಂಮುಖಮ್ ।
ಖಡ್ಗಚರ್ಮಧರೇಣೈವ ಸಹ ದಾಮೋದರೇಣ ಸಃ ॥ ೧೫೦
ಯುಧ್ಯಮಾನಶ್ಚ ಕರಣಪ್ರಯೋಗೇಣ ಪ್ರವಿಶ್ಯ ತಮ್ ।
ಖಡ್ಗಖಂಡಿತಚರ್ಮಾಣಂ ರಿಪುಂ ಭೂಮಾವಪಾತಯತ್ ॥ ೧೫೧

೧೫೨. ಉರುಳಾಡುತ್ತಿರುವ ಅವನ ಶಿರವನ್ನು ಇನ್ನೇನು ಕತ್ತರಿಸಬೇಕು ಎಂದಿರುವಾಗ ಅಂಬರದಲ್ಲಿ ಕಾಣಿಸಿಕೊಂಡ ವಿಷ್ಣುವು ಹುಂಕಾರವನ್ನು ಮಾಡಿದನು.

೧೫೩. ಅದನ್ನು ಕೇಳಿ, ಹರಿಯನ್ನು ಕಂಡು ವಿನಮ್ರನಾದ ಸೂರ್ಯಪ್ರಭನು ಆತನ ಮೇಲಿನ ಗೌರವದಿಂದ ದಾಮೋದರನನ್ನು ಕೊಲ್ಲದೆ ಬಿಟ್ಟನು.

೧೫೪. ಸಾವಿನಿಂದ ಪಾರಾದ ತನ್ನ ಭಕ್ತನನ್ನು ಎತ್ತಿಕೊಂಡು ಹರಿಯು ಎತ್ತಲೋ ಹೊರಟನು. ಭಗವಂತನು ತನ್ನ ಭಕ್ತನನ್ನು ಎಲ್ಲೆಲ್ಲೂ ಕಾಪಾಡುತ್ತಾನಷ್ಟೆ!

೧೫೫. ಆಗ, ದಾಮೋದರನ ಹಿಂಬಾಲಕರೆಲ್ಲ ಚದುರಿದರು. ಸೂರ್ಯಪ್ರಭನೂ ಅಂಬರದಿಂದ ತಂದೆಯ ಬಳಿ ಬಂದಿಳಿದನು.

೧೫೬. ಅಮಾತ್ಯಸಹಿತನಾಗಿ ಯಾವ ಘಾತವೂ ಇಲ್ಲದೆ ಬಂದಿಳಿದ ಆತನನ್ನು ಚಂದ್ರಪ್ರಭನ ಕಡೆಯಲ್ಲಿದ್ದ ರಾಜರೆಲ್ಲ ಅಭಿನಂದಿಸಿದರು. ಅವನು ತೋರಿದ ಪರಾಕ್ರಮವನ್ನು ಶ್ಲಾಘಿಸಿದರು.

೧೫೭. ಸಂತುಷ್ಟರಾದ ಅವರೆಲ್ಲ ಅದೇ ವಿಚಾರವಾಗಿ ಮಾತಾಡಿಕೊಳ್ಳುತ್ತಿರುವಾಗ ಸುಭಟನ ಕಡೆಯಿಂದ ದೂತನೊಬ್ಬನು ಬಂದನು.

೧೫೮. ಬಂದವನೇ ಚಂದ್ರಪ್ರಭನಿಗೆ ಮೊದಲು ಒಂದು ಲೇಖವನ್ನು ಸಮರ್ಪಿಸಿದನು. ಅದನ್ನು ಬಿಡಿಸಿ ಸಿದ್ಧಾರ್ಥನೆಂಬ ಮಂತ್ರಿಯು ಸದಸ್ಸಿನಲ್ಲಿ ಓದಿದನು.

---

ಛೇತ್ತುಮಿಚ್ಛತಿ ಯಾವಚ್ಚ ಶಿರಸ್ತಸ್ಯ ವಿವೇಲ್ಲತಃ ।
ತಾವದಾಗತ್ಯ ನಭಸಾ ಹುಂಕಾರೋ ವಿಷ್ಣುನಾ ಕೃತಃ ॥ ೧೫೨
ತಚ್ಛ್ರುತ್ವಾ ವೀಕ್ಷ್ಯ ಚ ಹರಿಂ ನಮ್ರಸ್ತದ್ಗೌರವೇಣ ಸಃ ।
ದಾಮೋದರಮಮುಂಚತ್ತಂ ವಧಾತ್ಸೂರ್ಯಪ್ರಭಸ್ತತಃ ॥ ೧೫೩
ವಧಮುಕ್ತಂ ತಮಾದಾಯ ಭಕ್ತಂ ಕ್ವಾಪಿ ಯಯೌ ಹರಿಃ ।
ಭಗವಾನ್ ಸ ಹಿ ಸದ್ಭಕ್ತಮಿಹಾಮುತ್ರ ಚ ರಕ್ಷತಿ ॥ ೧೫೪
ದಾಮೋದರಾನುಗಾಸ್ತೇ ಚ ಯಯುಃ ಸರ್ವೇ ಯತಸ್ತತಃ ।
ಸೂರ್ಯಪ್ರಭೋಽಪಿ ಗಗನಾತ್ಪಿತುಃ ಪಾರ್ಶ್ವಮವಾತರತ್ । ೧೫೫
ಸಾಮಾತ್ಯಮಕ್ಷತಪ್ರಾಪ್ತಂ ಪಿತಾ ಚಂದ್ರಪ್ರಭಸ್ಯ ತಮ್ ।
ಅಭ್ಯನಂದನ್ನೃಪಾಶ್ಚಾನ್ಯೇ ತುಷ್ಟುವುರ್ದೃಷ್ಟವಿಕ್ರಮಮ್ ॥ ೧೫೬
ತತೋಽತ್ರ ಯಾವತ್ಸರ್ವೇ ತೇ ಹೃಷ್ಟಾಸ್ತತ್ಕಥಯಾ ಸ್ಥಿತಾಃ ।
ಆಗಾತ್ಸುಭಟಸಂಬಂಧೀ ತಾವದ್ದೂತೋಽಪರಸ್ತತಃ ॥ ೧೫೭
ಸ ಚ ಚಂದ್ರಪ್ರಭಸ್ಯೈವ ಲೇಖಮಗ್ರೇ ಸಮರ್ಪಯತ್ ।
ತಮುದ್ಘಾಟ್ಯ ಚ ಸಿದ್ಧಾರ್ಥಃ ಸದಸ್ಯೇವಮವಾಚಯತ್ ॥ ೧೫೮

೧೫. 'ಶ್ರೇಷ್ಠವಂಶದ ಮುಕ್ತಾಫಲದಂತಿರುವ ಚಂದ್ರಪ್ರಭ ಭೂಪತಿಗೆ ಕೊಂಕಣ ರಾಜನಾದ ಶ್ರೀ ಸುಭಟನ ಆದರಪೂರ್ವಕವಾದ ಅರಿಕೆಯಿದು. 'ನನ್ನ ಪುತ್ರಿಯನ್ನು ರಾತ್ರಿಯಲ್ಲಿ ಯಾವುದೋ ಶಕ್ತಿಯು ಕೊಂಡೊಯ್ದಿತ್ತೆಂದು ತಿಳಿದಿದ್ದೆ. ಈಗ ಆಕೆಯನ್ನು ನಿನ್ನ ಪುತ್ರನು ಒಯ್ದಿದ್ದಾನೆಂದು ತಿಳಿದು ಸಂತೋಷಪಟ್ಟಿದ್ದೇನೆ.

೧೬. ನನ್ನ ಸುತೆಯೊಡನೆ ಕೂಡಿ ನಿನ್ನ ಪುತ್ರನಾದ ಸೂರ್ಯಪ್ರಭನೂ ತಾವೂ ನಮ್ಮ ಮನೆಗೆ ಬರುವ ಪ್ರಯತ್ನವನ್ನು ಕೈಗೊಳ್ಳಿ. ಪರಲೋಕದಿಂದ ಹಿಂತಿರುಗಿದವಳಂತೆ ಮನೆಗೆ ಬರುವ ನಮ್ಮ ಮಗಳನ್ನು ಕಾಣಲು ಕಾತರರಾಗಿದ್ದೇವೆ. ಆಕೆಯ ವಿವಾಹವಿಧಿಯನ್ನೂ ನೆರವೇರಿಸಿಕೊಡುತ್ತೇವೆ.'

೧೭. ಹೀಗೆ ಸಿದ್ಧಾರ್ಥನು ಪತ್ರವನ್ನು ವಾಚಿಸಲಾಗಿ ರಾಜಾ ಚಂದ್ರಪ್ರಭನು ಸಂತೋಷಪಟ್ಟು ಹಾಗೆಯೇ ಆಗಲೆಂದು ಹೇಳಿ ದೂತನನ್ನು ಸತ್ಕರಿಸಿದನು.

೧೮. ನಂತರ ಚಂದ್ರಿಕಾವತಿಯನ್ನು ಕರೆಸಿ ತ್ವರೆಯಿಂದ ಆಕೆಯನ್ನು ಪ್ರಹಸ್ತನ ರಕ್ಷಣೆಯಲ್ಲಿ ಅಪರಾಂತಕ್ಕೆ ಕಳುಹಿಸಿಕೊಟ್ಟನು.

---

ಶ್ರೀಮಾನುನ್ನತವಂಶಮೌಕ್ತಿಕಮಣಿಶ್ಚಂದ್ರಪ್ರಭೋ ಭೂಪತೀ
ರಾಜಾ ಶ್ರೀಸುಭಟೇನ ಸಾದರಮಿದಂ ಶ್ರೀಕೋಂಕಣಾದ್ಬೋಧ್ಯತೇ ।
ನೀತಾ ಮೇ ತನಯಾಪಹೃತ್ಯ ರಜನೌ ಸತ್ತ್ವೇನ ಕೇನಾಪಿ ಯಾ
ಸಾ ಪ್ರಾಪ್ತಾ ತವ ಸೂನುನೇತ್ಯವಗತಂ ಯತ್ತೇನ ತುಷ್ಟಾ ವಯಮ್ ॥ ೧೫

ತದ್ಯುಕ್ತೇನ ಸುತೇನ ತೇನ ಸಹ ತತ್ಸೂರ್ಯಪ್ರಭೇಣೋದ್ಯಮೋ
ಯುಷ್ಮಾಭಿಃ ಕ್ರಿಯತಾಮನರ್ಗಲಮಿಹಾಪ್ಯಸ್ಮದ್ಗೃಹಾಭ್ಯಾಗಮೇ ।
ಯಾವತ್ತಾಂ ಪರಲೋಕತಃ ಪುನರಿವ ಪ್ರತ್ಯಾಗತಾಮಾತ್ಮಜಾಂ
ಪಶ್ಯಾಮಶ್ಚ ವಿವಾಹಕಾರ್ಯಮಧುನಾ ಕುರ್ಮಶ್ಚ ತಸ್ಯಾ ವಯಮ್ ॥ ೧೬

ಇತ್ಯತ್ರ ವಾಚಿತೇ ಲೇಖೇ ಸಿದ್ಧಾರ್ಥೇನ ತಥೇತಿ ಸಃ ।
ರಾಜಾ ಚಂದ್ರಪ್ರಭೋ ದೂತಂ ಸಚ್ಚಕಾರ ಜಹರ್ಷ ಚ ॥ ೧೭
ಆನಾಯಯಚ್ಚ ಸುಭಟಸ್ಯಾಂತಿಕಂ ಚಂದ್ರಿಕಾವತೀಮ್ ।
ತತ್ಸುತಾಮಪರಾಂತಂ ತಂ ಪ್ರಹಸ್ತಂ ಪ್ರೇಷ್ಯ ಸತ್ವರಮ್ ॥ ೧೮

೧೬೩. ಮರುದಿನ ಬೆಳಿಗ್ಗೆ ಸೂರ್ಯಪ್ರಭನನ್ನು ಮುಂದಿಟ್ಟುಕೊಂಡು ಜನಮೇಜಯ ಮುಂತಾದ ರಾಜರನ್ನೆಲ್ಲ ಕೂಡಿಕೊಂಡು ಎಲ್ಲರೂ ವಿಮಾನದಲ್ಲಿ ಅಪರಾಂತಕ್ಕೆ ಹೊರಟರು.

೧೬೪. ಅಲ್ಲಿ ರಾಜಾ ಸುಭಟನು ಮಗಳನ್ನು ಮತ್ತೆ ಪಡೆದದ್ದರಿಂದ, ಬಹು ಸಂತೋಷ ಪಟ್ಟು , ಆಕೆಯ ಪರಿಣಯೋತ್ಸವವನ್ನು ಉತ್ಸಾಹದಿಂದ ನೆರವೇರಿಸಿದನು.

೧೬೫. ಆತನು ತನ್ನ ಪುತ್ರಿಗೆ ಎಷ್ಟು ರತ್ನರಾಶಿಗಳ ಬಳುವಳಿ ಕೊಟ್ಟನೆಂದರೆ, ವೀರಭಟಾದಿರಾಜರೆಲ್ಲ ಅದನ್ನು ಕಂಡು ನಮ್ಮದೇನು ಮಹಾ ಎಂದು ನಾಚಿಕೊಂಡರು.

೧೬೬ ಹೀಗೆ ಸೂರ್ಯಪ್ರಭನು ಮಾವನ ಮನೆಯಲ್ಲಿ ಇರುವಾಗ ಲಾವಾಣಕದಿಂದ ಪೌರವರಾಜನ ದೂತನು ಬಂದನು.

೧೬೭–೧೬೮. ಅವನು ಚಂದ್ರಪ್ರಭರಾಜನಿಗೆ ತನ್ನ ಸ್ವಾಮಿಯ ಮಾತನ್ನು ಅರಿಕೆ ಮಾಡಿಕೊಂಡನು. 'ಶ್ರೀಮಾನ್ ಸೂರ್ಯಪ್ರಭನು ನನ್ನ ಸುತೆಯಾದ ಸುಲೋಚನೆಯನ್ನು ಕರೆದೊಯ್ದಿದ್ದಾನೆ. ಅದರಿಂದ ನನಗೇನೂ ದುಃಖವಿಲ್ಲ. ಆದರೆ ಆಕೆಯನ್ನು ನಮ್ಮ ಮನೆಗೆ ಕರೆತನ್ನಿರಿ. ಸದಾಚಾರವನ್ನು ಪಾಲಿಸಬೇಕಾಗಿದೆ.'

---

ಪ್ರಾತಶ್ಚ ಜಗ್ಮುಃ ಸರ್ವೇ ತೇ ಕೃತ್ವಾ ಸೂರ್ಯಪ್ರಭಂ ಪುರಃ ।
ಅಪರಾಂತಂ ವಿಮಾನೇನ ಜನಮೇಜಯಸಂಯುತಾಃ ॥ ೧೬೩
ತತ್ರ ತಾನ್‌ಸುಭಟೋ ರಾಜಾ ದುಹಿತೃಪ್ರಾಪ್ತಿನಂದಿತಃ ।
ಭೃಶಮಾನರ್ಚ ಚಕ್ರೇ ಚ ಸುತಾಪರಿಣಯೋತ್ಸವಮ್ ॥ ೧೬೪
ದದೌ ಚ ಚಂದ್ರಿಕಾವತ್ಯೈ ಸೋಽಸ್ಯೈ ರತ್ನಾದಿಕಂ ತಥಾ ।
ಯಥಾ ವೀರಭಟಾದ್ಯಾಸ್ತೇ ಸ್ವದತ್ತೇನ ಲಲಜ್ಜಿರೇ ॥ ೧೬೫
ತತಃ ಸೂರ್ಯಪ್ರಭೇ ತತ್ರ ಸ್ಥಿತೇ ಶ್ವಶುರವೇಶ್ಮನಿ ।
ಆಗಾತ್ ಪೌರವಸಂಬಂಧೀ ದೂತೋ ಲಾವಾಣಕಾದಪಿ ॥ ೧೬೬
ಸೋಽಪಿ ಚಂದ್ರಪ್ರಭಮಿದಂ ನಿಜಸ್ವಾಮಿವಚೋಽಭ್ಯಧಾತ್ ।
ಸುತಾ ಸುಲೋಚನಾ ನೀತಾ ಶ್ರೀಮತ್‌ಸೂರ್ಯಪ್ರಭೇಣ ಮೇ ॥ ೧೬೭
ತತೋ ಮೇ ನೈವ ಸಂತಾಪಸ್ತದ್ಯುಕ್ತೇ ಕಿಂ ತು ಮದ್ಗೃಹಮ್ ।
ಆನೀಯತಾಂ ಸ ಯುಷ್ಮಾಭಿರಾಚಾರಂ ಯದ್ವಿದಧ್ಮಹೇ ॥ ೧೬೮

೧೯. ಇದನ್ನು ಕೇಳಿದೊಡನೆಯೇ ಆನಂದದಿಂದ ಚಂದ್ರಪ್ರಭನು, ದೂತನನ್ನು ಸನ್ಮಾನಿಸಿ, ಪ್ರಹಸ್ತನ ಮೂಲಕ ಸುಲೋಚನೆಯನ್ನು ತಂದೆಯ ಬಳಿಗೆ ಕಳಿಸಿ ಕೊಟ್ಟನು.

೧೨೦. ಬಳಿಕ ಸುಭಟರಾಜನೂ ಸೇರಿದಂತೆ ಎಲ್ಲರೂ ಸೂರ್ಯಪ್ರಭನನ್ನು ಕರೆದು ಕೊಂಡು ಕೇವಲ (ಚಿಂತನ)ಧ್ಯಾನಮಾತ್ರದಿಂದಲೇ ಚಲಿಸುವ ವಿಮಾನದಿಂದ ಲಾವಾಣಕ್ಕೆ ಹೊರಟರು.

೧೨೧. ಅಲ್ಲಿ ಸೂರ್ಯಪ್ರಭ ಸುಲೋಚನೆಯರಿಗೆ ಮದುವೆಯ ಉತ್ಸವವನ್ನು ಆಚರಿಸಿದ ಪೌರವ ಮಹಾರಾಜನು ನೆರೆದಿದ್ದ ರಾಜರನ್ನೆಲ್ಲ ಸನ್ಮಾನಿಸಿ ರತ್ನಾದಿಶ್ರೇಷ್ಠವಣಿಗಳಿಂದ ವಧೂವರರನ್ನು ತುಂಬಿಸಿಬಿಟ್ಟನು.

೧೨೨. ಹೀಗೆ ಅವನಿಂದ ಸನ್ಮಾನಿತರಾಗಿ ಅವರೆಲ್ಲರೂ ಸುಖದಿಂದ ಕಾಲ ಕಳೆಯುತ್ತಿರಲಾಗಿ ಚೀನನರೇಶ್ವರನಾದ ಸುರೋಹನು ತನ್ನ ದೂತನನ್ನು ಅಲ್ಲಿಗೆ ಅಟ್ಟಿದನು.

೧೨೩. ಆ ರಾಜನೂ ಕೂಡ ಉಳಿದ ರಾಜರಂತೆ ತನ್ನ ಅಪಹೃತಕನ್ಯೆಯನ್ನು ಕಳಿಸಿ ಕೊಡಬೇಕೆಂದೂ ಮನೆಗೆ ಬರಬೇಕೆಂದೂ ಕೋರಿ ದೂತನನ್ನು ಕಳಿಸಿದ್ದನು.

೧೨೪. ಇದರಿಂದ ಸಂತುಷ್ಟನಾದ ಚಂದ್ರಪ್ರಭರಾಜನು ಆತನ ಕನ್ಯೆಯಾದ ವಿದ್ಯುನ್ಮಾಲೆಯನ್ನು ಪ್ರಹಸ್ತನ ಮೂಲಕ ಕೇತನನಗರಕ್ಕೆ ಕಳಿಸಿಕೊಟ್ಟನು.

---

ತಚ್ಛ್ರುತ್ವೈವ ಮುದಾಭ್ಯರ್ಚ್ಯ ದೂತಂ ಚಂದ್ರಪ್ರಭೋ ನೃಪಃ ।
ಆನಾಯಯತ್ಪ್ರಹಸ್ತೇನ ಪಿತುಃ ಪಾರ್ಶ್ವಂ ಸುಲೋಚನಾಮ್ ॥ ೧೯
ತತಃ ಸಸುಭಟಾಃ ಸರ್ವೇ ಸಹ ಸೂರ್ಯಪ್ರಭೇಣ ತೇ ।
ಲಾವಾಣಕಂ ವಿಮಾನೇನ ಯಯುರ್ಧ್ಯಾತೋಪಗಾಮಿನಾ ॥ ೧೨೦
ತತ್ರೋದ್ವಾಹೋತ್ಸವಂ ಕೃತ್ವಾ ಸೂರ್ಯಪ್ರಭಸುಲೋಚನೇ ।
ರತ್ನೈರಪೂರಯತ್ಸೋಽಪಿ ಪೌರವೋಽರ್ಚಿತರಾಜಕಃ ॥ ೧೨೧
ತೇನೋಪಚರ್ಯಮಾಣೇಷು ಸುಖಸ್ಥೇಷ್ವತ್ರ ತೇಷು ಚ ।
ಪ್ರಜಿಘಾಯ ಸುರೋಹೋಽಪಿ ದೂತಂ ಚೀನನರೇಶ್ವರಃ ॥ ೧೨೨
ಸೋಽಪ್ಯನ್ಯವದ್ದೂತಮುಖೇನಾರ್ಥಯಾಮಾಸ ಪಾರ್ಥಿವಃ ।
ಹೃತಕನ್ಯಸ್ತಯಾ ಸಾಕಂ ತೇಷಾಮಾಗಮನಂ ಗೃಹೇ ॥ ೧೨೩
ತತಶ್ಚಂದ್ರಪ್ರಭೋ ರಾಜಾ ಹೃಷ್ಟಸ್ತಸ್ಯಾಪಿ ತಾಂ ಸುತಾಮ್ ।
ವಿದ್ಯುನ್ಮಾಲಾಂ ಪ್ರಹಸ್ತೇನಾನಾಯಯಾಮಾಸ ಕೇತನಮ್ ॥ ೧೨೪

೧೭೫. ಮಾರನೆಯ ದಿನ ಪೌರವರಾಜಸಹಿತನಾಗಿ ಸೂರ್ಯಪ್ರಭನನ್ನು ಮುಂದಿಟ್ಟುಕೊಂಡು ಚಂದ್ರಪ್ರಭರಾಜನು ಉಳಿದವರೊಡನೆ ವಿಮಾನವೇರಿ ಚೀನ ದೇಶಕ್ಕೆ ಪಯಣ ಬೆಳೆಸಿದನು.

೧೭೬. ಮೊದಲೇ ತನ್ನ ಅರಮನೆಯಿಂದ ಹೊರಟ ಸುರೋಹರಾಜನು ಎಲ್ಲರನ್ನೂ ತನ್ನ ಕೋಟೆಗೆ ಬರಮಾಡಿಕೊಂಡು ತನ್ನ ಮಗಳ ವೈವಾಹಿಕ ಶಾಸ್ತ್ರವಿಧಿಗಳನ್ನು ಮಾಡಿದನು.

೧೭೭. ವಿದ್ಯುನ್ಮಾಲೆಗೂ ಸೂರ್ಯಪ್ರಭನಿಗೂ ಎಣಿಕೆಗೆ ನಿಲುಕದಷ್ಟು ಚಿನ್ನದ ಒಡವೆಗಳನ್ನೂ, ಆನೆಗಳನ್ನೂ, ಕುದುರೆಗಳನ್ನೂ (ಚೀನಾಂಶುಕ) ರೇಶಿಮೆ ವಸ್ತ್ರಗಳನ್ನೂ ಉಡುಗೊರೆಯಾಗಿ ನೀಡಿದನು.

೧೭೮. ಅಲ್ಲಿ ಚಂದ್ರಪ್ರಭ ಮತ್ತು ಆತನ ಮಿತ್ರರಾಜರು ಸುರೋಹರಾಜನ ಆದರಾತಿಥ್ಯಗಳನ್ನು ಸ್ವೀಕರಿಸಿ ಸಂತೋಷದಿಂದ ಕೆಲವು ದಿನಗಳ ಕಾಲ ಅಲ್ಲೇ ಇದ್ದರು.

೧೭೯. ಮಳೆಗಾಲದ ಮೇಘವು ಮಿಂಚಿನಬಳ್ಳಿಯೊಂದಿಗೆ ಶೋಭಿಸುವಂತೆ ಪುಟಿಯುವ ಯೌವನಾವಸ್ಥೆಯಲ್ಲಿದ್ದ ಸೂರ್ಯಪ್ರಭನೂ ವಿದ್ಯುನ್ಮಾಲೆಯೊಂದಿಗಿದ್ದನು.

೧೮೦. ಹೀಗೆ ಸೂರ್ಯಪ್ರಭನು ಆಯಾ ಮಾವನ ಮನೆಯಲ್ಲಿ ಆಯಾ ಕಾಂತೆಯರೊಡನೆ ಬಂಧುಸಮೇತನಾಗಿ ಆಯಾ ಭೋಗಗಳನ್ನನುಭವಿಸಿದನು.

---

ಅನ್ಯೇದ್ಯುಶ್ಚ ವಿಮಾನೇನ ಸಹಸೂರ್ಯಪ್ರಭಾ ಯಯುಃ ।
ಚಂದ್ರಪ್ರಭಾದ್ಯಾಃ ಸರ್ವೇ ತೇ ಚೀನದೇಶಂ ಸ ಪೌರವಾಃ ॥ ೧೭೫

ತತ್ರಾಗ್ರೇ ನಿರ್ಗತೋ ರಾಜಾ ನಿಜಕೋಟ್ಟಂ ಪ್ರವೇಶ್ಯ ತಾನ್ ।
ಸ ಸುರೋಹೋಽಪಿ ದುಹಿತುಶ್ಚಕ್ರೇ ವೈವಾಹಿಕಂ ವಿಧಿಮ್ ॥ ೧೭೬

ಅದಾಚ್ಚ ವಿದ್ಯುನ್ಮಾಲಾಯೈ ತಸ್ಯೈ ಸೂರ್ಯಪ್ರಭಾಯ ಚ ।
ಅಸಂಖ್ಯಹೇಮಹಸ್ತ್ಯಶ್ವರತ್ನಚೀನಾಂಶುಕಾದಿಕಮ್ ॥ ೧೭೭

ತಸ್ಥುಃಶ್ಚ ತತ್ರ ತೇ ತೈಸ್ತೈರ್ಭೋಗೈಶ್ಚಂದ್ರಪ್ರಭಾದಯಃ ।
ದಿನಾನಿ ಕತಿಚಿತ್ಸರ್ವೇ ಸುರೋಹಾಭ್ಯರ್ಚಿತಾಸ್ತದಾ ॥ ೧೭೮

ಆಸೀತ್ ಸೂರ್ಯಪ್ರಭಶ್ಚಾತ್ರ ವಿಲಸದ್ಭನಯೌವನಃ ।
ಪ್ರಾವೃಟ್ಕಾಲೋ ಯಥಾ ವಿದ್ಯುನ್ಮಾಲಯಾ ಶೋಭಿತಸ್ತಯಾ ॥ ೧೭೯

ಏವಂ ಸ ಬುಭುಜೇ ತತ್ರ ತತ್ರ ಶ್ವಶುರವೇಶ್ಮನಿ ।
ತತ್ತತ್ಕಾಂತಾಸಖಃ ಸೂರ್ಯಪ್ರಭೋ ಭೋಗಾನ್ಸಬಾಂಧವಃ ॥ ೧೮೦

೧೮೧–೧೮೩. ಬಳಿಕ ಸಿದ್ಧಾರ್ಥನೇ ಮುಂತಾದ ಸಚಿವರ ಮೂಲಕ ವೀರಭಟನೇ ಮೊದಲಾದ ರಾಜರನ್ನು ಅವರ ಅಶ್ವ ಸೈನ್ಯದೊಡನೆ ಕರೆಸಿ ಅವರನ್ನು ತಮ್ಮ ತಮ್ಮ ದೇಶಗಳಿಗೆ ಹಿಂತಿರುಗಲು ಹೇಳಿ ಸುರೋಹ ಮಹೀಪತಿಯನ್ನೂ ಬೀಳ್ಕೊಂಡು ಆತನ ಮಗಳೊಡನೆ, ತಂದೆ ತಾಯಂದಿರನ್ನೂ ತನ್ನ ಪರಿವಾರದವರನ್ನೂ ಕೂಡಿಕೊಂಡು ಕೃತಕೃತ್ಯನಾದ ಸೂರ್ಯಪ್ರಭನು ಭೂತಾಸನ ವಿಮಾನವನ್ನೇರಿ ಆಕಾಶಮಾರ್ಗವಾಗಿ ತನ್ನ ನಗರಿಯಾದ ಶಾಕಲಕ್ಕೆ ಬಂದನು.

೧೮೪. ಕೆಲವೆಡೆ ನೃತ್ತ ವಿಲಾಸವೂ, ಹಲವೆಡೆ ಸಂಗೀತರಸಪ್ರವಾಹವೂ ಮತ್ತೆ ಕೆಲವೆಡೆ ಪಾನಗೋಷ್ಠಿಗಳೂ ಇನ್ನೂ ಕೆಲವೆಡೆ ಸುಂದರಿಯರ ಅಲಂಕಾರಕಲಾಪಗಳೂ, ಕೆಲವು ಕಡೆ ಬಯಸಿದ್ದನ್ನು ಪಡೆದು ತೃಪ್ತರಾದ ವೈತಾಲಿಕರ ಸ್ತುತಿಪಾಠಗಳು, ಹೀಗೆ ಆತನ ಆಗಮನದಿಂದ ಇಡೀ ನಗರದಲ್ಲಿ ವಿಧವಿಧವಾದ ಸಂತೋಷ ಸಂಭ್ರಮಗಳು ಉಂಟಾದವು.

೧೮೫. ತಂದೆಯ ಮನೆಯಲ್ಲಿದ್ದ ತನ್ನ ಎಲ್ಲ ಕಾಂತೆಯರನ್ನೂ ಕರೆಸಿ, ಅವರು ತಮ್ಮ ತವರಿನಿಂದ ತಂದಿದ್ದ ಗಜಾಶ್ವಗಳ ಗುಂಪನ್ನೂ, ನಾನಾರತ್ನಭಾರದಿಂದ ಬಾಗಿನಿಂತ, ಎಣಿಕೆಗೆ ನಿಲುಕದ ಒಂಟೆಗಳ ಸಾಲನ್ನೂ ಪ್ರಜೆಗಳಿಗೆ ತೋರಿಸಿ, ಸೂರ್ಯಪ್ರಭನು ತಾನು ಲೀಲೆಯಿಂದಲೇ ಪಡೆದ ದಿಗ್ವಿಜಯದ ವೈಭವದಿಂದ, ಅವರು ಕೌತುಕ ಪಡುವಂತೆ ಮಾಡಿದನು.

---

ತತಃ ಸಂಮಂತ್ರ್ಯ ಸಿದ್ಧಾರ್ಥಪ್ರಮುಖೈಃ ಸಚಿವೈಃ ಸಹ ।
ಕ್ರಮಾದ್ವೀರಭಟಾದೀನ್‌ಸ್ತಾನಶ್ವೀಯಸಹಿತಾನ್ನೃಪಾನ್ ॥ ೧೮೧
ವಿಸೃಜ್ಯ ನಿಜದೇಶೇಷು ತಂ ಸುರೋಹಮಹೀಪತಿಮ್ ।
ಆಮಂತ್ರ್ಯ ತತ್ಸುತಾಯುಕ್ತಃ ಪಿತೃಭ್ಯಾಂ ಸಹ ಸಾನುಗಃ ॥ ೧೮೨
ಭೂತಾಸನವಿಮಾನಂ ತದಾರುಹ್ಯವ್ಯೋಮವರ್ತ್ಮನಾ ।
ಸ್ವಂ ಸ ಸೂರ್ಯಪ್ರಭಃ ಪ್ರಾಯಾಚ್ಛಾಕಲಂ ನಗರಂ ಕೃತೀ ॥ ೧೮೩
ಕ್ವಚಿನ್ನೃತ್ತಾಸಂಗಃ ಕ್ವಚಿದಪಿ ಚ ಸಂಗೀತಕರಸಃ
ಕ್ವಚಿತ್‌ಪಾನಕ್ರೀಡಾ ಕ್ವಚನ ಸುದೃಶಾಂ ಮಂಡನವಿಧಿಃ ।
ಕ್ವಚಿಲ್ಲಬ್ಧಾಭೀಷ್ಟಸ್ತುತಿಮುಖರವೈತಾಲಿಕರವಃ
ಪುರೇ ತಸ್ಮಿನ್ನಾಸೀತ್ಪ್ರಮದ ಇತಿ ತಸ್ಯಾಗಮನಜಃ ॥ ೧೮೪
ತತ್ರಾನ್ಯಾಃ ಪಿತೃವೇಶ್ಮಸು ಸ್ಥಿತವತೀರಾನಾಯ್ಯ ಸ ಸ್ವಪ್ರಿಯಾ
ದತ್ತೈಸ್ತತ್‌ಪಿತೃಭಿರ್ಗಜಾಶ್ವನಿವಹೈಸ್ತಾಭಿಃ ಸಹೈವಾಗತಃ ।
ನಾನಾರತ್ನಸುಪೂರ್ಣಭಾರವಿನತೈರುಷ್ಟ್ರೈಶ್ಚ ಸಂಖ್ಯಾತಿಗೈ–
ರ್ಲೀಲಾದರ್ಶಿತದಿಗ್‌ಜಯೋತ್ಥವಿಭವಶ್ಚಕ್ರೇ ಪ್ರಜಾಕೌತುಕಮ್ ॥ ೧೮೫

೧೮ ಮಹಾಭೋಗಿಯಾದ ಸೂರ್ಯಪ್ರಭನು ವಾಸವಾಗಿದ್ದ ಅಷ್ಟೈಶ್ವರ್ಯಗಳಿಂದಲೂ ಬಹುನಿಧಿಗಳಿಂದಲೂ ಕೂಡಿದ ಆ ಶಾಕಲನಗರವು ಸುರ, ಕುಬೇರ, ಭುಜಗನಗರಗಳಿಂದ ಕೂಡಿ ನಿರ್ಮಿತವಾಗಿದೆಯೋ ಎಂಬಂತೆ ಶೋಭಾಯಮಾನವಾಗಿತ್ತು.

೧೯ ಸೂರ್ಯಪ್ರಭನು ಮದನಸೇನೆಯೊಡಗೂಡಿ ಅಪೇಕ್ಷಿತ ಭೋಗಗಳನ್ನನುಭವಿಸುತ್ತಾ ಪರಿಪೂರ್ಣಸಂಪತ್ತಿನಿಂದ ಕೂಡಿ ಸುಖಿಸುತ್ತ ತಂದೆಯೊಡನೆ, ಸಚಿವರೊಡನೆ ತನ್ನ ಮಿಕ್ಕ ಪತ್ನಿಯರೊಡನೆ ಕೂಡಿ ಮತ್ತೆ ಬರುವೆನೆಂದು ಹೇಳಿದ್ದ ಮಯಾಸುರನನ್ನು ನಿರೀಕ್ಷಿಸುತ್ತಾ ಇದ್ದನು.

**ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ**

**ಸೂರ್ಯಪ್ರಭ ಲಂಬಕದಲ್ಲಿ ಮೊದಲ ತರಂಗವು ಮುಗಿಯಿತು.**

---

ಬಹುವಸು ಭೂರಿನಿಧಾನಂ ತೇನ ಮಹಾಭೋಗಿನಾ ತದಾಧ್ಯುಷಿತಮ್ ।
ಸುರಧನದಭುಜಗನಗರೈಃ ಕೃತಮಿವ ತಚ್ಛಾಕಲಂ ವಿಬಭೌ ॥ ೧೮
ತತೋ ಮದನಸೇನಯಾ ಸಹ ಸ ತತ್ರ ಸೂರ್ಯಪ್ರಭೋ
ಯಥಾಭಿಮತಭೋಗಭುಕ್ಸಕಲಪೂರ್ಣಸಂಪತ್ಸುಖೀ ।
ಉವಾಸ ಪಿತೃಸಂಯುತಃ ಸಸಚಿವೋಽನ್ಯಪತ್ನೀಯುತಃ
ಕೃತಾಗಮನಸಂವಿದಂ ಮಯಮುದೀಕ್ಷಮಾಣೋಽನ್ವಹಮ್ ॥
೧೯

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಸೂರ್ಯಪ್ರಭಲಂಬಕೇ ಪ್ರಥಮಸ್ತರಂಗಃ**

# ಎರಡನೆಯ ತರಂಗ

೧–೨. ಒಮ್ಮೆ ಚಂದ್ರಪ್ರಭನೂ, ಸೂರ್ಯಪ್ರಭನೂ ಎಲ್ಲ ಸಚಿವರೂ ಆಸ್ಥಾನದಲ್ಲಿದ್ದಾಗ, ಸಿದ್ಧಾರ್ಥನು ಹೇಳಿದ ಕಥಾ ಪ್ರಸಂಗದಲ್ಲಿ ಮಯನ ನೆನಪು ಬಂದಿರಲಾಗಿ ಒಮ್ಮೆಲೇ ಸಭಾಮಂಟಪದ ಮಧ್ಯದಲ್ಲಿ ಭೂಮಿಯು ಬಿರಿಯಿತು.

೩. ಭೂಮಿಯ ಬಿರುಕಿನಿಂದ ಮೊದಲು ಪರಿಮಳಯುಕ್ತವಾದ ಗಾಳಿ ಶಬ್ದ ಮಾಡುತ್ತಾ ಮೇಲೆದ್ದಿತು. ನಂತರ ಅಲ್ಲಿಂದ ಮಯಾಸುರನು ಮೇಲೆದ್ದು ಬಂದನು.

೪. ನೀಳವಾದ ಕಪ್ಪುತಲೆ, ಅದರ ಮೇಲೆ ಜ್ವಲಿಸುವ ಕೇಶ ಹಾಗೂ ಕೆಂಪುವಸ್ತ್ರಗಳನ್ನು ಧರಿಸಿದ್ದರಿಂದ, ರಾತ್ರಿಕಾಲದಲ್ಲಿ ಕಾಣುವ ಎತ್ತರವಾದ ಶಿಖರವುಳ್ಳ ಹೊಮ್ಮುತ್ತಿರುವ ಧಾತುರಸದಿಂದ ಕೂಡಿದ ಓಷಧಿಗಳಿಂದ ಕೂಡಿದ ಪರ್ವತದಂತೆ ಕಾಣುತ್ತಿದ್ದನು.

೫. ಚಂದ್ರಪ್ರಭನು ಮಾಡಿದ ಸತ್ಕಾರವನ್ನು ಸ್ವೀಕರಿಸಿದನಂತರ ರತ್ನಾಸನದಲ್ಲಿ ಕುಳಿತ ಆ ದಾನವೇಂದ್ರನು ಹೀಗೆಂದನು.

---

# ದ್ವಿತೀಯಸ್ತರಂಗಃ

ಅಥ ತತ್ರೈಕದಾಸ್ಥಾನಸ್ಥಿತೇ ಚಂದ್ರಪ್ರಭೇ ನೃಪೇ ।
ಸೂರ್ಯಪ್ರಭೇ ಚ ತತ್ರಸ್ಥೇ ಸಮಗ್ರಸಚಿವಾನ್ವಿತೇ ॥ ೧
ಸಿದ್ಧಾರ್ಥೋದೀರಿತಕಥಾಪ್ರಸಂಗೇಣ ಮಯೇ ಸ್ಮೃತೇ ।
ಅಕಸ್ಮಾದತ್ರ ವಸುಧಾ ಸಭಾಮಧ್ಯೇ ವ್ಯದೀರ್ಯತ ॥ ೨
ತತೋ ಭೂವಿವರಾದಾದೌ ಸಶಬ್ದಃ ಸುರಭಿರ್ಮರುತ್ ।
ಆವಿರಾಸೀತ್ತತಃ ಪಶ್ಚಾದುಜ್ಜಗಾಮ ಮಯಾಸುರಃ ॥ ೩
ಕೃಷ್ಣೋನ್ನತಶಿರಃಶೃಂಗಜ್ವಲತ್ಕೇಶಮಹೌಷಧಿಃ ।
ರಕ್ತಾಂಬರೋಜ್ಜ್ವಲದ್ಧಾತುರ್ನಿಶಾಯಾಮಿವ ಪರ್ವತಃ ॥ ೪
ಯಥಾರ್ಹಕೃತಪೂಜಶ್ಚ ರಾಜ್ಞಾ ಚಂದ್ರಪ್ರಭೇಣ ಸಃ ।
ರತ್ನಾಸನೋಪವಿಷ್ಟಃ ಸನ್ದಾನವೇಂದ್ರೋಽಭ್ಯಭಾಷತ ॥ ೫

೬ 'ಈ ಭೂಮಿಯ ಮೇಲಿನ ಭೋಗಗಳನ್ನೆಲ್ಲ ಅನುಭವಿಸಿದ್ದಾಯಿತು. ಇದನ್ನೂ ಮೀರಿದ ಭೋಗಗಳ ಅನುಭವಕ್ಕೆ ಈಗ ಕಾಲ ಒದಗಿ ಬಂದಿದೆ. ಅದರತ್ತ ಮನಸ್ಸು ಕೊಡಿ.

೭ ದೂತರನ್ನಟ್ಟಿ ನಿಮ್ಮ ಸಂಬಂಧಿರಾಜರನ್ನೂ, ಬಾಂಧವರನ್ನೂ ಕರೆಸಿ. ವಿದ್ಯಾಧರರಾಜನಾದ ಸುಮೇರುವಿನೊಡನೆ ಸೇರೋಣ.

೮ ಶ್ರುತಶರ್ಮನನ್ನು ಜಯಿಸೋಣ, ವಿದ್ಯಾಧರರಾಜಲಕ್ಷ್ಮಿಯನ್ನು ಪಡೆಯೋಣ. ಸುಮೇರುವು ನಮ್ಮ ಬಂಧುವಿನಂತೆ. ಅವನು ನಮ್ಮ ನೆರವಿಗಿದ್ದಾನೆ.

೯. ಈ ಮೊದಲೇ ದೇವನಾದ ಪಿನಾಕಿಯು ಅವನಿಗೆ 'ಸೂರ್ಯಪ್ರಭನನ್ನು ರಕ್ಷಿಸು. ನಿನ್ನ ಮಗಳನ್ನು ಅವನಿಗೆ ಕೊಡು' ಎಂದು ಆದೇಶಿಸಿದ್ದಾನೆ.'

೧೦. ಹೀಗೆಂದು ಮಯಾಸುರನು ಹೇಳಲಾಗಿ ಚಂದ್ರಪ್ರಭರಾಜನು ಪ್ರಹಸ್ತನೇ ಮೊದಲಾದ ಎಲ್ಲ ರಾಜರ ದೂತರನ್ನೂ ಸೇರಿಸಿ ಖೇಚರರ ಬಳಿ ಅಟ್ಟಿದನು.

೧೧. ಸೂರ್ಯಪ್ರಭನೂ ತನ್ನ ವಿದ್ಯಾಬಲದಿಂದ ತನ್ನ ಭಾರ್ಯೆಯರನ್ನೂ, ಎಲ್ಲ ಮಂತ್ರಿಗಳನ್ನೂ ಮಯನ ಆದೇಶದಮೇರೆಗೆ ಕರೆಕಳಿಸಿದನು. ಹಿಂದೆ ಎಂದೂ ಹೀಗೆ ಕರೆದಿರಲಿಲ್ಲ.

೧೨. ಅಷ್ಟರಲ್ಲಿ, ತನ್ನ ಪ್ರಭೆಯಿಂದ ದಿಙ್ಮುಖಗಳನ್ನೇ ಬೆಳಗುತ್ತಾ ಅಂಬರ ತಲದಿಂದ ನಾರದ ಮಹರ್ಷಿಯು ಇಳಿದು ಬಂದನು.

---

ಭುಕ್ತಾ ಭೋಗಾ ಇಮೇ ಭೌಮಾ ಭವದ್ಭಿರಧುನಾ ಚ ವಃ ।
ಕಾಲೋऽನ್ಯೇಷಾಂ ತದುದ್ಯೋಗೇ ಮತಿಂ ಕುರುತ ಸಾಂಪ್ರತಮ್॥ ೬
ದೂತಾನ್‌ಪ್ರೇಷ್ಯಾನಯಧ್ವಂ ಸ್ವಾನ್ನೃಪಾನ್‌ಸಂಬಂಧಿಬಾಂಧವಾನ್ ।
ತತೋ ವಿದ್ಯಾಧರೇಂದ್ರೇಣ ಮಿಲಿಷ್ಯಾಮಃ ಸುಮೇರುಣಾ ॥ ೭
ಜೇಷ್ಯಾಮಃ ಶ್ರುತಶರ್ಮಾಣಂ ಪ್ರಾಪ್ಸ್ಯಾಮಃ ಖೇಚರಶ್ರಿಯಮ್ ।
ಸುಮೇರುಶ್ಚ ಸಹಾಯತ್ವೇ ಬಂಧುಬುಧ್ಯಾ ಸ್ಥಿತೋऽತ್ರ ನಃ ॥ ೮
ರಕ್ಷೇಃ ಸೂರ್ಯಪ್ರಭಂ ದದ್ಯಾಸ್ತ್ವಂ ಚೈತಸ್ಮೈ ನಿಜಾಂ ಸುತಾಮ್ ।
ಇತ್ಯಾದಾವೇವ ದೇವೇನ ಸ ಹ್ಯಾದಿಷ್ಟಃ ಪಿನಾಕಿನಾ ॥ ೯
ಏವಂ ಮಯಾಸುರೇಣೋಕ್ತೇ ಪ್ರಹಸ್ತಾದೀನ್‌ಸಖೇಚರಾನ್ ।
ಚಂದ್ರಪ್ರಭಃ ಪ್ರಹಿತವಾನ್‌ದೂತಾನ್‌ಸರ್ವಮಹೀಭೃತಾಮ್ ॥ ೧೦
ಸೂರ್ಯಪ್ರಭಶ್ಚ ವಿದ್ಯಾಭಿಃ ಸ್ವಭಾರ್ಯಾಮಂತ್ರಿಣೋऽಖಿಲಾನ್ ।
ಸಂವಿಭೇಜೇ ಮಯಾದೇಶಾತ್ ಸಂವಿಭಕ್ತಾ ನ ಯೇ ಪುರಾ ॥ ೧೧
ತಾವಚ್ಚಾತ್ರ ಸ್ಥಿತೇಷ್ವೇವ ಪ್ರಭಾಭಾಸಿತದಿಙ್‌ಮುಖಃ ।
ಅವತೀರ್ಯಾಂಬರತಲಾನ್ನಾರದೋ ಮುನಿರಾಯಯೌ ॥ ೧೨

೧೩. ಅರ್ಘ್ಯವನ್ನು ಸ್ವೀಕರಿಸಿ ಕುಳಿತ ಬಳಿಕ ಚಂದ್ರಪ್ರಭನನ್ನು ಉದ್ದೇಶಿಸಿ, ನಾರದನು ಹೇಳಿದನು, 'ಇಂದ್ರನು ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ಆತನು ನಿನಗೆ ಈ ಮಾತನ್ನು ಹೇಳಿದ್ದಾನೆ'

೧೪–೧೫. 'ನೀವು ಮಹೇಶ್ವರನ ಆದೇಶದಂತೆ ಮಯಾಸುರನ ಗೆಳೆಯರಾಗಿ ಸೂರ್ಯಪ್ರಭನ ಅಜ್ಞಾನದಿಂದ ಮೋಹಿತರಾಗಿ, ಸರ್ವವಿದ್ಯಾಧರಾಧೀಶ ಪದವಿಯನ್ನು ಮಾನವಶರೀರಿಗಳಾಗಿಯೇ ಪಡೆಯಲು ಪ್ರಯತ್ನ ಪಡುತ್ತಿದ್ದೀರಂತೆ. ಆದರೆ,

೧೬. ಅದು ಸರಿಯಿಲ್ಲ. ಏಕೆಂದರೆ ಈಗಾಗಲೇ ಈ ಪದವಿಯನ್ನು ನಾನು ಶ್ರುತಶರ್ಮನಿಗೆ ಕೊಟ್ಟಾಗಿದೆ. ವಿದ್ಯಾಧರಕುಲಜಲಧಿಯಲ್ಲಿ ಚಂದ್ರನಂತೆ ಹುಟ್ಟಿರುವ ಆತನಿಗೆ ಅದು ಕುಲಕ್ರಮಾಗತವಾದದ್ದು.

೧೭. ಧರ್ಮಕ್ಕೆ ವಿರೋಧವಾಗಿ ನಮ್ಮ ಪ್ರತಿಪಕ್ಷಿಗಳಂತೆ ವರ್ತಿಸಿ ನೀವು ಏನು ಮಾಡಿದರೂ ಅದನ್ನು ನಾಶಪಡಿಸುತ್ತೇವೆ. ಇದು ನಿಶ್ಚಯ.

೧೮. ಹಿಂದೆ ರುದ್ರಯಜ್ಞದ ಯಜಮಾನನಾಗಿದ್ದಾಗ, ಮೊದಲು ಅಶ್ವಮೇಧಯಾಗವನ್ನು ಮಾಡು ಎಂದು ಹೇಳಿದ್ದೆ. ನೀನು ಅದನ್ನು ಮಾಡಿಲ್ಲ.

೧೯. ದರ್ಪದಿಂದ ನೀವು ದೇವತೆಗಳನ್ನು ಮೀರಿ ಕೇವಲ ರುದ್ರನನ್ನು ಪ್ರೀತಿಗೊಳಿಸಲು ಏನೇ ಮಾಡಿದರೂ ನಿಮಗದು ಒಳ್ಳೆಯದಲ್ಲ.'

---

ಗೃಹೀತಾರ್ಘೋಪವಿಷ್ಟಶ್ಚ ಸ ಚಂದ್ರಪ್ರಭಮಬ್ರವೀತ್ ।
ಪ್ರೇಷಿತೋಽಹಮಿಹೇಂದ್ರೇಣ ತೇನ ಚೋಕ್ತಮಿದಂ ತವ ॥ ೧೩
ಜ್ಞಾತಂ ಮಯಾ ಯದ್ಯುಷ್ಮಾಭಿರ್ಮಹೇಶ್ವರಪ್ರಸಾದತಃ ।
ಮಯಾಸುರಸಖೈಃ ಸೂರ್ಯಪ್ರಭಸ್ಯಾಜ್ಞಾನಮೋಹಿತೈಃ ॥ ೧೪
ಅಸ್ಯ ಮರ್ತ್ಯಶರೀರಸ್ಯ ಸಂಸಾಧಯಿತುಮಿಷ್ಯತೇ ।
ಸರ್ವವಿದ್ಯಾಧರಾಧೀಶಚಕ್ರವರ್ತಿಪದಂ ಮಹತ್ ॥ ೧೫
ತದಯುಕ್ತಂ ಯದಸ್ಮಾಭಿರ್ದತ್ತಂ ಹಿ ಶ್ರುತಶರ್ಮಣೇ ।
ವಿದ್ಯಾಧರಕುಲಾಂಬ್ಧೀಂದೋಸ್ತಚ್ಚ ತಸ್ಯ ಕ್ರಮಾಗತಮ್ ॥ ೧೬
ಅಸ್ಮಾಕಂ ಪ್ರಾತಿಪಕ್ಷ್ಯೇಣ ಧರ್ಮಬಾಧೇನ ಚೈವ ಯತ್ ।
ಕುರುಧ್ವೇ ತದ್ವಿನಾಶಾಯ ನಿಶ್ಚಿತಂ ವಃ ಪ್ರಕಲ್ಪತೇ ॥ ೧೭
ಪೂರ್ವಂ ಚ ರುದ್ರಯಜ್ಞೇನ ಯಜಮಾನೋ ಭವಾನ್ ಮಯಾ ।
ಪ್ರಾಗ್ಯಜಸ್ವಾಶ್ವಮೇಧೇನೇತ್ಯುಕ್ತೋ ಚ ಕೃತವಾನ್ನ ತಮ್ ॥ ೧೮
ತದ್ದೇವಾನನಪೇಕ್ಷ್ಯೈವ ರುದ್ರಪ್ರತ್ಯಾಶಯೈಕಯಾ ।
ಯದಾಚರಥ ದರ್ಪೇಣ ಭವತಾಂ ನ ಶಿವಾಯ ತತ್ ॥ ೧೯

೨೦. ಈ ಸಂದೇಶವನ್ನು ನಾರದನು ಹೇಳಿದಾಗ ಮಯಾಸುರನು ನಕ್ಕು, 'ಮಹಾಮುನಿ, ಸುರೇಂದ್ರನ ಈ ಮಾತು ಸರಿಯಿಲ್ಲ.

೨೧. ಸೂರ್ಯಪ್ರಭನು ಮರ್ತ್ಯನೆಂದು ಇಂದ್ರನು ಹೇಳಿರುವುದು ಸುಳ್ಳು. ದಾಮೋದರನೊಡನೆ ಮಾಡಿದ ಯುದ್ಧದಿಂದ ಈ ವಿಚಾರ ಅವನಿಗೆ ತಿಳಿಯಲಿಲ್ಲವೆ ?

೨೨. ಅಲ್ಲದೆ, ಮರ್ತ್ಯರೇ ಸತ್ತ್ವಶಾಲಿಗಳು. ಎಲ್ಲ ಸಿದ್ಧಿಗಳನ್ನೂ ಪಡೆಯಲು ಅರ್ಹರು. ಇಂದ್ರಪದವಿಯನ್ನೇ ನಹುಷಾದಿ ಮಾನವರು ಸಾಧಿಸಲಿಲ್ಲವೆ ?

೨೩. ಶ್ರುತಶರ್ಮನಿಗೆ ಕ್ರಮಾಗತವಾದ ಸಾಮ್ರಾಜ್ಯವನ್ನು ಕೊಟ್ಟಿದ್ದೇನೆಂದು ಇಂದ್ರನು ಹೇಳಿದನಲ್ಲ. ಅದು ಒಪ್ಪತಕ್ಕ ಮಾತಲ್ಲ !

೨೪. ಮಹೇಶ್ವರನೇ ದಾತನು ಎಂಬುದೇ ಪ್ರಮಾಣವಾಗಿರುವಾಗ ಯಾರು ಯಾರಿಗೆ ಕೊಡುವುದು ? ನಿನಗೆ ಹಿಂದಿನಿಂದ ಬಂದಿದ್ದ ಐಂದ್ರಪದವನ್ನು ಹಿರಣ್ಯಾಕ್ಷನು ಹಾರಿಸಿಕೊಂಡು ಹೋದದ್ದು ಹೇಗೆ ?

೨೫. ಮತ್ತೊಂದು ಮಾತು. "ನನಗೆ ಪ್ರತಿಪಕ್ಷಿಗಳಾಗುವುದು ಅಧರ್ಮ", ಎಂದನಲ್ಲ ಅದು ವ್ಯರ್ಥ. ಅವನೇ ಇದ್ದಕ್ಕಿದ್ದಂತೆ ಸ್ವಾರ್ಥದಿಂದ ನಮಗೆ ಶತ್ರುತ್ವವನ್ನು ಉಂಟುಮಾಡುತ್ತಿದ್ದಾನೆ.

---

ಇತ್ಯುಕ್ತೇ ಶಕ್ರಸಂದೇಶೇ ನಾರದೇನ ವಿಹಸ್ಯ ತಮ್ ।
ಮಯೋಽವಾದೀನ್ನ ಸಾಧೂಕ್ತಂ ಸುರೇಂದ್ರೇಣ ಮಹಾಮುನೇ ॥ ೨೦
ಸೂರ್ಯಪ್ರಭಸ್ಯ ಮರ್ತ್ಯತ್ವಂ ಯದ್ವಕ್ತಿ ತದಪಾರ್ಥಕಮ್ ।
ತದ್ದಾಮೋದರಸಂಗ್ರಾಮೇ ನ ಜ್ಞಾತಂ ತೇನ ತಸ್ಯ ಕಿಮ್ ॥ ೨೧
ಮರ್ತ್ಯಾ ಏವ ಹಿ ಸತ್ತ್ವಾಢ್ಯಾಃ ಸರ್ವಸಿದ್ಧ್ಯಧಿಕಾರಿಣಃ ।
ಐಂದ್ರಂ ನ ಸಾಧಿತಂ ಪೂರ್ವಂ ಪದಂ ಕಿಂ ನಹುಷಾದಿಭಿಃ ॥ ೨೨
ಯಚ್ಚಾಹ ದತ್ತಮಸ್ಮಾಭಿಃ ಸಾಮ್ರಾಜ್ಯಂ ಶ್ರುತಶರ್ಮಣೇ ।
ಕ್ರಮಾಗತಂ ಚ ತತ್ತಸ್ಯೇತ್ಯೇತದಪ್ಯಸಮಂಜಸಮ್ ॥ ೨೩
ದಾತಾ ಮಹೇಶ್ವರೋ ಯತ್ರ ಪ್ರಾಮಾಣ್ಯಂ ತತ್ರ ಕಸ್ಯ ಕಿಮ್ ।
ಜ್ಯೇಷ್ಠಾಗತಂ ಹಿರಣ್ಯಾಕ್ಷಸ್ಯೇಂದ್ರತ್ವಂ ಚ ಕಥಂ ಹೃತಮ್ ॥ ೨೪
ಯಚ್ಚಾಪರಂ ಪ್ರಾತಿಪಕ್ಷ್ಯಮಧರ್ಮಂ ಚಾಹ ತನ್ಮೃಷಾ ।
ಸ ಏವ ಹಿ ಹಠಾತ್ಸ್ವಾರ್ಥೇ ಪ್ರಾತಿಪಕ್ಷ್ಯಂ ಕರೋತಿ ನಃ ॥ ೨೫

೨೬. ಅಧರ್ಮ ಎಂದರೆ ಯಾವುದು ? ನಾವು ನಮ್ಮ ದಾರಿಯನ್ನು ಅಡ್ಡಗಟ್ಟಿದವರನ್ನು ಜಯಿಸುತ್ತೇವೆ. ಋಷಿ ಪತ್ನಿಯನ್ನು ನಾವು ಹೊತ್ತೊಯ್ಯುವುದಿಲ್ಲ ! ಬ್ರಹ್ಮಹತ್ಯೆಯನ್ನೂ ಮಾಡುವುದಿಲ್ಲ !

೨೭. ಅಶ್ವಮೇಧ ಮಾಡಲಿಲ್ಲ, ದೇವತೆಗಳಿಗೆ ಅಗೌರವ ತೋರಿದರು ಎಂದೆಲ್ಲ ಗಳಹುವುದು ಬೇಕಿಲ್ಲ. ರುದ್ರಯಜ್ಞವನ್ನೇ ಮಾಡಿದ ಮೇಲೆ ಅನ್ಯಯಜ್ಞಗಳಿಂದೇನು ?

೨೮. ದೇವದೇವನಾದ ಶಂಭುವನ್ನೇ ಅರ್ಚಿಸಿದ ಮೇಲೆ ಯಾರನ್ನು ತಾನೆ ಅರ್ಚಿಸಿದಂತಾಗಲಿಲ್ಲ ! ಅವರಲ್ಲಿರುವ ರುದ್ರಭಕ್ತಿ ಒಳ್ಳೆಯದಲ್ಲ ಎಂದನಲ್ಲ, ಆ ಮಾತೂ ಸರಿಯಿಲ್ಲ.

೨೯. ಎಲ್ಲಿ ಹರನು ಪ್ರಯತ್ನಶೀಲನಾಗಿರುತ್ತಾನೋ ಅಲ್ಲಿ ಎಷ್ಟು ದೇವತೆಗಳಿದ್ದರೆ ತಾನೆ ಏನು ? ಸೂರ್ಯನ ಉದಯವಾದ ನಂತರ ಉಳಿದ ತೇಜಃಕಾಯಗಳು ಪ್ರಕಾಶಿಸುತ್ತವೆಯೆ ?

೩೦. ಮುನಿಯೆ, ನೀನು ಇದೆಲ್ಲವನ್ನೂ ದೇವರಾಜನಿಗೆ ಹೇಳು. ನಾವಂತೂ ನಮ್ಮ ಕಾರ್ಯವನ್ನು ಮುಂದುವರೆಸುತ್ತೇವೆ. ಆತನಿಗೆ ತೋಚಿದಂತೆ ಆತನು ಮಾಡಲಿ.'

೩೧. ಹೀಗೆ ಮಯಾಸುರನು ಹೇಳಿದ್ದನ್ನು ಕೇಳಿ 'ಆಗಲಿ' ಎಂದು ಆ ಸಂದೇಶವನ್ನು ಗ್ರಹಿಸಿ ನಾರದ ಋಷಿಯು ಸುರಪತಿಯ ಬಳಿಗೆ ಹೊರಟನು.

---

ಕೋಽತ್ರಾಧರ್ಮೋ ಜಿಗೀಷಾಮೋ ವಯಂ ಹಿ ಪರಿಪಂಥಿನಮ್ ।
ನ ಹರಾಮೋ ಮುನೇರ್ಭಾರ್ಯಾಂ ಬ್ರಹ್ಮಹತ್ಯಾಂ ನ ಕುರ್ಮಹೇ ॥ ೨೬
ಯಶ್ಚಾಶ್ವಮೇಧಾಕರಣಂ ದೇವಾವಜ್ಞಾಂ ಚ ಜಲ್ಪತಿ ।
ತದಸದ್ರುದ್ರಯಜ್ಞೇ ಹಿ ವಿಹಿತೇಽನ್ಯೈಃ ಕಿಮಧ್ವರೈಃ ॥ ೨೭
ಅರ್ಚಿತೇ ದೇವದೇವೇ ಚ ಶಂಭೌ ದೇವೋ ನ ಕೋಽರ್ಚಿತಃ ।
ಯಚ್ಚಾಹೈಕೈವ ರುದ್ರಾಸ್ಥಾ ನ ಶಿವೇತಿ ನ ತದಪ್ಯಸತ್ ॥ ೨೮
ಕಿಂ ತತ್ರ ದೇವನಿವಹೈರನ್ಯೈರ್ಯತ್ರೋದ್ಯತೋ ಹರಃ ।
ರವಾವಭ್ಯುದಿತೇಽನ್ಯಾನಿ ಕಿಂ ತೇಜಾಂಸಿ ಚಕಾಸತಿ ॥ ೨೯
ತದೇತದ್ದೇವರಾಜಾಯ ಸರ್ವಂ ವಾಚ್ಯಂ ತ್ವಯಾ ಮುನೇ ।
ವಯಂ ಚ ಪ್ರಸ್ತುತಂ ಕುರ್ಮಃ ಸ ಯದ್ವೇತ್ತಿ ಕರೋತು ತತ್ ॥ ೩೦
ಏವಂ ಮಯಾಸುರೇಣೋಕ್ತೋ ನಾರದರ್ಷಿಸ್ತಥೇತಿ ತಮ್ ।
ಪ್ರತಿಸಂದೇಶಮಾದಾಯ ಯಯೌ ಸುರಪತಿಂ ಪ್ರತಿ ॥ ೩೧

೩೨. ನಾರದನು ತೆರಳಿದ ಬಳಿಕ ದೇವೇಂದ್ರನ ಸಂದೇಶದಿಂದ ದುಗುಡಗೊಂಡಿದ್ದ ಚಂದ್ರಪ್ರಭರಾಜನನ್ನು ಕುರಿತು ಮಯಾಸುರನು ಹೇಳಿದನು.

೩೩. 'ಶಕ್ರನಿಗೆ ನೀನು ಹೆದರಬಾರದು. ನಮ್ಮ ಮೇಲಿನ ದ್ವೇಷದಿಂದ ಇಡೀ ದೇವಗಣವೇ ಯುದ್ಧದಲ್ಲಿ ಶ್ರುತವರ್ಮನ ಪಕ್ಷದಲ್ಲಿ ಸೇರಿಕೊಂಡರೂ ಏನೂ ಆಗುವುದಿಲ್ಲ.

೩೪. ಪ್ರಹ್ಲಾದಾಸುರನ ಸಹಾಯವಿರುವ ನಾವು ದೈತ್ಯದಾನವರೊಡಗೂಡಿದ ಅಸಂಖ್ಯಸೇನೆಯನ್ನೂ ಹೊಂದಿ ನಿನ್ನ ಪಕ್ಷದಲ್ಲಿದ್ದೇವೆ.

೩೫. ನಮ್ಮ ಸಹಾಯ ಮತ್ತು ತ್ರಿಪುರಾಂತಕನ ಅನುಗ್ರಹ ಇರುವಾಗ ಮೂರುಲೋಕದಲ್ಲಿ ಮತ್ತೆ ಇನ್ನು ಯಾವ ಬಡಪಾಯಿಗೆ ತಾನೆ ನಿನ್ನನ್ನು ಎದುರಿಸಲು ಸಾಮರ್ಥ್ಯ ಇದ್ದೀತು?

೩೬. ಆದ್ದರಿಂದ ಹೆದರದೆ ನಿನ್ನ ವೀರರೆಲ್ಲ ಯುದ್ಧಕ್ಕೆ ಅಣಿಯಾಗಲಿ' ಎಂದು ಹೇಳಲು ಸಂತುಷ್ಟರಾದ ಅವರೆಲ್ಲ ಹಾಗೆಯೇ ಆಗಲೆಂದು ಅವನ ಮಾತನ್ನು ಒಪ್ಪಿದರು.

೩೭. ಬಳಿಕ, ದೂತನ ಸಂದೇಶಪಡೆದ ವೀರಭಟನೇ ಮೊದಲಾದ ಮಿತ್ರ ಬಾಂಧವರೆಲ್ಲ, ಒಬ್ಬೊಬ್ಬರಾಗಿ ಬರತೊಡಗಿದರು.

೩೮. ಸೈನ್ಯಸಹಿತರಾಗಿ ಬಂದ ರಾಜರಿಗೆ ಎಲ್ಲ ಮಾನಸನ್ಮಾನಗಳನ್ನೂ ಮಾಡಿದ ನಂತರ, ಮಯಾಸುರನು ಚಂದ್ರಪ್ರಭನಿಗೆ ಹೇಳಿದನು.

---

ಗತೇ ತಸ್ಮಿನ್ಮುನೌ ಸೋಽತ್ರ ತಂ ಚಂದ್ರಪ್ರಭಭೂಪತಿಮ್ ।
ಶಕ್ರಸಂದೇಶಸಾಶಂಕಮುವಾಚೈವಂ ಮಯಾಸುರಃ ॥ ೩೨
ನ ಶಕ್ರಾದ್ಭೋ ಭಯಂ ಕಾರ್ಯಂ ಸ ಚ ಸ್ಯಾತ್ ಶ್ರುತಶರ್ಮಣಃ ।
ಪಕ್ಷೇ ದೇವಗಣೈಃ ಸಾರ್ಧಮಸ್ಮದ್ದ್ವೇಷೇಣ ಸಂಯುಗೇ ॥ ೩೩
ತದಸಂಖ್ಯಾ ಮಹಾರಾಜ ಪ್ರಹ್ಲಾದಾಧಿಷ್ಠಿತಾ ವಯಮ್ ।
ಯುಷ್ಮತ್ ಪಕ್ಷೇ ಸ್ಥಿತಾ ಏವ ಸಹಿತಾ ದೈತ್ಯದಾನವೈಃ ॥ ೩೪
ಕೃತಪ್ರಸಾದೇ ಚಾಸ್ಮಾಕಮುದ್ಯುಕ್ತೇ ತ್ರಿಪುರಾಂತಕೇ ।
ವರಾಕಸ್ಯಾಪರಸ್ಯಾಸ್ತಿ ಕಸ್ಯ ಶಕ್ತಿರ್ಜಗತ್ತ್ರಯೇ ॥ ೩೫
ತದ್ವೀರಾಃ ಕುರುತೋದ್ಯೋಗಂ ಕಾರ್ಯೇಽಸ್ಮಿನ್ನಿತ್ಯುದೀರಿತೇ ।
ಮಯೇನ ಹೃಷ್ಟಾಃ ಸರ್ವೇ ತೇ ತತ್ತಥೈವೇತಿ ಮೇನಿರೇ ॥ ೩೬
ಅಥ ದೂತೋಕ್ತಸಂದೇಶಾತ್ಸರ್ವೇ ತತ್ರಾಯಯುಃ ಕ್ರಮಾತ್ ।
ನೃಪಾ ವೀರಭಟಾದ್ಯಾಸ್ತೇ ಯೇ ಚಾನ್ಯೇ ಮಿತ್ರಬಾಂಧವಾಃ ॥ ೩೭
ಕೃತೋಚಿತಸಪರ್ಯೇಷು ಸಸೈನ್ಯೇಷ್ವೇಷು ರಾಜಸು ।
ಪುನಶ್ಚಂದ್ರಪ್ರಭಂ ಭೂಪಮುವಾಚೈವಂ ಮಯಾಸುರಃ ॥ ೩೮

೩೯. 'ರಾಜನೆ, ಇಂದು ರಾತ್ರಿ ರುದ್ರದೇವನಿಗೆ ಮಹಾಬಲಿಯನ್ನು ಅರ್ಪಿಸು. ನಂತರ, ನಾನು ಹೇಳಿದಂತೆ ಎಲ್ಲವನ್ನೂ ನೆರವೇರಿಸು.'

೪೦. ಮಯನ ಈ ಮಾತನ್ನು ಕೇಳಿ ರಾಜನು ಒಡನೆಯೇ ರುದ್ರದೇವನಿಗೆ ಬಲಿ ನೀಡಲು ಸಕಲಸಿದ್ಧತೆಗಳನ್ನೂ ನಡೆಸಿದನು.

೪೧. ಬಳಿಕ ಮಯಾಸುರನ ಉಪದೇಶದಂತೆ ರಾತ್ರಿ ಕಾಡಿಗೆ ಹೋಗಿ ಭಕ್ತಿಯಿಂದ ಸ್ವಯಂ ಚಂದ್ರಪ್ರಭನೇ ರುದ್ರನಿಗೆ ಬಲಿಯಿತ್ತನು.

೪೨. ರಾಜನು ಶ್ರದ್ಧೆಯಿಂದ ಹೋಮಕಾರ್ಯದಲ್ಲಿ ತೊಡಗಿರಲಾಗಿ ಭೂತಗಣಾಧಿಪನಾದ ಸಾಕ್ಷಾತ್ ನಂದಿಕೇಶ್ವರನೇ ಆವಿರ್ಭವಿಸಿದನು.

೪೩–೪೫. ರಾಜನು ವಿಧಿವತ್ತಾಗಿ ಅವನಿಗೆ ಪೂಜೆಯನ್ನು ಸಮರ್ಪಿಸಿದನಂತರ ತುಷ್ಟನಾದ ನಂದಿಯು ಹೇಳಿದನು, 'ಸ್ವಯಂ ಶಂಭುವು ನನ್ನ ಮೂಲಕ ಹೇಳಿಕಳಿಸಿರುವುದೇನೆಂದರೆ, ನೂರು ಇಂದ್ರರಿದ್ದರೂ ನಿಮಗಾವ ಭಯವೂ ಇಲ್ಲ. ನನ್ನ ಅನುಗ್ರಹದಿಂದ ಸೂರ್ಯಪ್ರಭನು ವಿದ್ಯಾಧರಾಧೀಶನಾಗಿಯೇ ಆಗುತ್ತಾನೆ' ಎಂದು. ನಂತರ ನಂದಿಯು ಶಂಕರನ ಆದೇಶವನ್ನು ತಿಳಿಸಿ ಬಲಿಭಾಗವನ್ನು ಪಡೆದು ಭೂತಗಣಗಳೊಡನೆ ಅದೃಶ್ಯನಾದನು.

---

ಕುರುಧ್ವಮದ್ಯ ರುದ್ರಸ್ಯ ರಾತ್ರೌ ರಾಜನ್ ಮಹಾಬಲಿಮ್ ।
ತತೋ ಯಥಾಹಂ ವಕ್ಷ್ಯಾಮಿ ತಥಾ ಸರ್ವಂ ವಿಧಾಸ್ಯಥ ॥ ೩೯
ಏತನ್ಮಯವಚಃ ಶ್ರುತ್ವಾ ರಾಜಾ ಚಂದ್ರಪ್ರಭೋऽಥ ಸಃ ।
ರುದ್ರಸ್ಯ ಬಲಿಸಂಭಾರಂ ಕಾರಯಾಮಾಸ ತತ್ಕ್ಷಣಾಮ್ ॥ ೪೦
ತತೋ ಗತ್ವಾಟವೀಂ ರಾತ್ರೌ ಮಯೇ ಕರ್ಮೋಪದೇಷ್ಟರಿ ।
ಚಂದ್ರಪ್ರಭಃ ಸ್ವಯಂ ಚಕ್ರೇ ಬಲಿಂ ರುದ್ರಸ್ಯ ಭಕ್ತಿತಃ ॥ ೪೧
ಹೋಮಕರ್ಮಪ್ರವೃತ್ತೇ ಚ ರಾಜ್ಞಿ ತಸ್ಮಿನ್ನಶಂಕಿತಮ್ ।
ಸಾಕ್ಷಾದಾವಿರಭೂತ್ತತ್ರ ನಂದೀ ಭೂತಗಣಾಧಿಪಃ ॥ ೪೨
ಸೋऽರ್ಚಿತೋ ವಿಧಿವದ್ರಾಜ್ಞಾ ಪ್ರಹೃಷ್ಟೋನೇದಮಬ್ರವೀತ್ ।
ಮನ್ಮುಖೇನೇದಮಾದಿಷ್ಟಂ ಸ್ವಯಂ ದೇವೇನ ಶಂಭುನಾ ॥ ೪೩
ಅಪಿ ಶಕ್ರಶತಾನ್ನಾಭೂದ್ಭಯಂ ವೋ ಮತ್ಪ್ರಸಾದತಃ ।
ಸೂರ್ಯಪ್ರಭಶ್ಚಕ್ರವರ್ತೀ ಭವಿತೈವ ದ್ಯುಚಾರಿಣಾಮ್ ॥ ೪೪
ಇತ್ಯುಕ್ತ್ವಾಶಂಕರಾದೇಶೇ ಗೃಹೀತಬಲಿಭಾಗಕಃ ।
ನಂದೀಶ್ವರೋ ಭೂತಗಣೈಃ ಸಹ ತತ್ರ ತಿರೋದಧೇ ॥ ೪೫

೪೬. ಇದರಿಂದ ಚಂದ್ರಪ್ರಭರಾಜನಿಗೆ ತನ್ನ ಪುತ್ರನ ಅಭ್ಯುದಯದಲ್ಲಿ ಪೂರ್ಣ ಶ್ರದ್ಧೆ ಮೂಡಿತು. ಯಜ್ಞಕಾರ್ಯವನ್ನು ಮುಗಿಸಿ ಮಯನೊಡನೆ ಪುರಪ್ರವೇಶ ಮಾಡಿದನು.

೪೭–೪೮. ಬೆಳಗಾದೊಡನೆ ದೇವಿ, ಸೂರ್ಯಪ್ರಭ, ಮಿತ್ರರಾಜರು ಮತ್ತು ಸಚಿವರೊಡನೆ ಇದ್ದ ಚಂದ್ರಪ್ರಭನನ್ನು ಏಕಾಂತದಲ್ಲಿ ಕಂಡು ಮಯಾಸುರನು ಹೇಳಿದನು: 'ರಾಜನೇ, ಬಹುಕಾಲದಿಂದ ಕಾಪಾಡಿಕೊಂಡಿದ್ದ ರಹಸ್ಯವನ್ನು ಹೇಳುವೆ ಕೇಳು. ನೀನು ಹಿಂದೆ ನನ್ನ ಪುತ್ರನಾಗಿದ್ದೆ. ಆಗ ನಿನ್ನ ಹೆಸರು ಸುನೀಥ ಎಂದು. ನೀನು ಮಹಾಬಲಶಾಲಿಯಾಗಿದ್ದೆ

೪೯. ಸೂರ್ಯಪ್ರಭನೂ ಕೂಡ ಸುಮುಂಡೀಕನೆಂಬ ದಾನವ, ನಿನ್ನ ತಮ್ಮನಾಗಿದ್ದವನು. ದೇವಾಸುರಯುದ್ಧದಲ್ಲಿ ಮಡಿದ ನೀವು ಇದೀಗ ತಂದೆ ಮಕ್ಕಳಾಗಿ ಹುಟ್ಟಿದ್ದೀರಿ.

೫೦. ನಿನ್ನ ದಾನವಶರೀರವನ್ನು ನಾನು ಸುರಕ್ಷಿತವಾಗಿ ಇಟ್ಟಿದ್ದೇನೆ. ಅದು ಕೆಡದಂತೆ ದಿವ್ಯವಾದ ಓಷಧಿರಸಗಳಿಂದಲೂ ತುಪ್ಪದಿಂದಲೂ ಲೇಪಿಸಲಾಗಿದೆ.

೫೧. ನಾನು ಉಪದೇಶಿಸುವ ಯುಕ್ತಿಯನ್ನು ಗ್ರಹಿಸಿ ಬಿಲದಲ್ಲಿ ಪ್ರವೇಶಿಸಿ ಪಾತಾಳಕ್ಕೆ ಹೋಗಿ, ಅಲ್ಲಿ ನಿನ್ನ ಶರೀರವನ್ನು ಸೇರಿಕೋ.

೫೨. ಆ ಶರೀರವನ್ನು ಪ್ರವೇಶಿಸುವುದರಿಂದ ನಿನ್ನ ತೇಜಸ್ಸು ಬಲ ವೀರ್ಯಗಳು ಎಷ್ಟು ಹೆಚ್ಚುತ್ತವೆಯೆಂದರೆ, ಅದರಿಂದ ಆಕಾಶಗಾಮಿಗಳನ್ನು ರಣಾಂಗಣದಲ್ಲಿ ಜಯಿಸುತ್ತೀಯೆ.

---

ತತಶ್ಚಂದ್ರಪ್ರಭೋ ಜಾತಪ್ರತ್ಯಯಸ್ತನಯೋದಯೇ ।
ಬಲಿಂ ಸಮಾಪ್ಯ ಹೋಮಾಂತೇ ವಿವೇಶ ಸಮಯಃ ಪುರಮ್ ॥ ೪೬
ಪ್ರಾತಶ್ಚ ದೇವ್ಯಾ ಪುತ್ರೇಣ ರಾಜಭಿಃ ಸಚಿವೈರ್ಯುತಮ್ ।
ಏಕಾಂತಸ್ಥಂ ಚ ತಂ ಚಂದ್ರಪ್ರಭಭೂಪಂ ಮಯೋಽಭ್ಯಧಾತ್ ॥ ೪೭
ಶೃಣು ರಾಜನ್ ರಹಸ್ಯಂ ತೇ ವಚ್ಮ್ಯದ್ಯ ಚಿರರಕ್ಷಿತಮ್ ।
ತ್ವಂ ದಾನವಃ ಸುನೀಥಾಖ್ಯೋ ಮಮ ಪುತ್ರೋ ಮಹಾಬಲಃ ॥ ೪೮
ಸೂರ್ಯಪ್ರಭಃ ಸುಮುಂಡೀಕಸಂಜ್ಞಕಶ್ಚ ತವಾನುಜಃ ।
ದೇವಾಹವೇ ಹತೌ ಜಾತೌ ಪಿತಾಪುತ್ರೌ ಯುವಾಮಿಹ ॥ ೪೯
ತದ್ದಾನವಶರೀರಂ ತೇ ಸಂರಕ್ಷ್ಯ ಸ್ಥಾಪಿತಂ ಮಯಾ ।
ಆಲಿಪ್ಯ ಯುಕ್ತ್ಯಾ ದಿವ್ಯಾಭಿರೋಷಧೀಭಿರ್ಘೃತೇನ ಚ ॥ ೫೦
ತಸ್ಮಾತ್ಪ್ರವಿಶ್ಯ ವಿವರಂ ಪಾತಾಲಮುಪಗಮ್ಯ ಚ ।
ಪ್ರವಿಶ ಸ್ವಂ ಶರೀರಂ ತದ್ಯುಕ್ತ್ಯಾ ಮದುಪದಿಷ್ಟಯಾ ॥ ೫೧
ತಚ್ಛರೀರಪ್ರವಿಷ್ಟಶ್ಚ ತೇಜೋವೀರ್ಯಬಲಾಧಿಕಃ ।
ತಥಾ ಭವಿಷ್ಯಸಿ ಯಥಾ ಜೇಷ್ಯಸಿ ದ್ಯುಚರಾನ್ರಣೇ ॥ ೫೨

೩೩. ಸುಮುಂಡೀಕನ ಅವತಾರವಾದ ಸೂರ್ಯಪ್ರಭನಾದರೋ ಇದೇ ಸುಂದರ ಶರೀರದಿಂದ ಖೇಚರೇಶ್ವರನಾಗುತ್ತಾನೆ.

೩೪. ಮಯಾಸುರನಿಂದ ಈ ಮಾತನ್ನು ಕೇಳಿದ ಚಂದ್ರಪ್ರಭನು ಹಾಗೆಯೇ ಆಗಲೆಂದು ಒಪ್ಪಿದನು. ಆತನಿಗೆ ಸಂತೋಷವೇ ಆಗಿತ್ತು. ಆಗ ಸಿದ್ಧಾರ್ಥನು ಕೇಳಿದನು.

೩೫. 'ದಾನವೋತ್ತಮನೆ, ಅನ್ಯದೇಹಪ್ರವೇಶ ಮಾಡಿದ ಮೇಲೆ ರಾಜನು ಸಾಯುವನೇ ಎಂಬ ಭ್ರಾಂತಿಯಾಗುತ್ತಿದೆ ನಮಗೆ. ನಾವು ಧೈರ್ಯದಿಂದಿರುವುದು ಹೇಗೆ ?

೩೬. ದೇಹಾಂತರದಲ್ಲಿ ಬದುಕುವ ಇವನು ಆಗ ನಮ್ಮನ್ನು ಮರೆಯುವನೇನು? ಪರಲೋಕಕ್ಕೆ ಹೋದವರಂತೆ ಈತನಾರೋ ನಾವ್ಯಾರೋ ಎಂದಾಗಿ ಬಿಟ್ಟರೆ ?

೩೭–೩೮. ಮಯಾಸುರನು ಸಿದ್ಧಾರ್ಥಕನ ಈ ಮಾತನ್ನು ಕೇಳಿ ಹೇಳಿದನು, 'ಈತನು ಯೋಗಯುಕ್ತಿಯಿಂದ ಆ ದೇಹದಲ್ಲಿ ಹೊಗುತ್ತಾನೆ. ನೀವು ಅಲ್ಲಿ ಬಂದು ಈತನನ್ನು ಕಾಣಲು ಸ್ವತಂತ್ರರು. ಈತನು ನಮ್ಮನ್ನು ಮರೆಯುವುದಿಲ್ಲ. ಅದಕ್ಕೆ ಕಾರಣವಿದೆ.

೩೯. ತನ್ನ ಸ್ವಾಧೀನವಿಲ್ಲದೆ ಎಲ್ಲೋ ಸತ್ತು ಮತ್ತೆ ಯಾವುದೋ ಗರ್ಭದಲ್ಲಿ ಹುಟ್ಟುವವನಿಗೆ ಮರಣಾದಿ ಕ್ಲೇಶಗಳಿಂದ ಸ್ಮರಣೆ ಮರೆಯಾಗುತ್ತದೆ.

---

ಸೂರ್ಯಪ್ರಭಸ್ತ್ವನೇನೈವ ಕಾಂತೇನ ವಪುಷಾ ಚಿರಮ್ ।
ಸುಮುಂಡೀಕಾವತಾರೋಽಯಂ ಭವಿತಾ ಖೇಚರೇಶ್ವರಃ ॥ ೩೩
ಏತನ್‌ಮಯಾಸುರಾಚ್ಛ್ರುತ್ವಾ ತಥೇತ್ಯಂಗೀಚಕಾರ ಸಃ ।
ರಾಜಾ ಚಂದ್ರಪ್ರಭೋ ಹೃಷ್ಟಃ ಸಿದ್ಧಾರ್ಥಸ್ತ್ವಿದಮುಕ್ತವಾನ್ ॥ ೩೪
ಅನ್ಯದೇಹಪ್ರವಿಷ್ಟಃ ಕಿಮ್ ಕಿಮಯಂ ಪಂಚತಾಂ ಗತಃ ।
ಇತಿ ಭ್ರಾಂತೌ ತದಸ್ಮಾಕಂ ಕಾ ಧೃತಿರ್ದಾನವೋತ್ತಮ ॥ ೩೫
ಕಿಂ ಚೈಷ ವಿಸ್ಮರತ್ಯಸ್ಮಾನ್‌ಸ್ತದಾ ದೇಹಾಂತರಾಶ್ರಿತಃ ।
ಪರಲೋಕಗತೋ ಯದ್ವತ್ತತಃ ಕೋಽಯಂ ವಯಂ ಚ ಕೇ ॥ ೩೬
ಏತತ್‌ಸಿದ್ಧಾರ್ಥತಃ ಶ್ರುತ್ವಾ ಸ ಜಗಾದ ಮಯಾಸುರಃ ।
ಪ್ರವಿಶಂತಮಿಮಂ ತಸ್ಮಿನ್‌ಶರೀರೇ ಯೋಗಯುಕ್ತಿತಃ ॥ ೩೭
ಸ್ವತಂತ್ರಂ ಯೂಯಮಾಗತ್ಯ ಸಾಕ್ಷಾತ್ತತ್ರೈವ ಪಶ್ಯತ ।
ನ ಚೈವಂ ವಿಸ್ಮರತ್ಯೇಷ ಯುಷ್ಮಾನ್ ಶೃಣುತ ಕಾರಣಮ್ ॥ ೩೮
ಅಸ್ವತಂತ್ರೋ ಮೃತೋಽನ್ಯತ್ರ ಗರ್ಭೇ ಯೋ ಜಾಯತೇ ನ ಸಃ ।
ಕಿಂಚಿತ್ ಸ್ಮರತ್ಯಂತರಿತಃ ಕ್ಲೇಶೈಸ್ತೈರ್ಮರಣಾದಿಭಿಃ ॥ ೩೯

೬೦. ಸ್ವತಂತ್ರನಾಗಿ ಯಾರು ಯೋಗಯುಕ್ತಿಯಿಂದ ಅನ್ಯಶರೀರ ಪ್ರವೇಶ ಮಾಡುತ್ತಾನೋ ಅವನು ಅಂತಃಕರಣಗಳನ್ನೂ ಇಂದ್ರಿಯಗಳನ್ನೂ ಆವರಿಸಿಕೊಳ್ಳುತ್ತಾನೆ.

೬೧. ಅವನ ಮನೋಬುದ್ಧಿಗಳು ನಾಶವಾಗಿರುವುದಿಲ್ಲ. ಒಂದು ಮನೆಯಿಂದ ಮತ್ತೊಂದು ಮನೆಗೆ ಹೋದಂತೆ ಆಗುತ್ತದೆಯಷ್ಟೆ. ಯೋಗಿಯೂ ಜ್ಞಾನಿಯೂ ಆಗಿರುವ ಅವನಿಗೆ ಎಲ್ಲವೂ ನೆನಪಿನಲ್ಲಿರುತ್ತದೆ.

೬೨. ನಿಮಗೆ ಸಂದೇಹ ಬೇಡ. ವಸ್ತುತಃ ಈ ರಾಜನು ಇದಕ್ಕಿಂತ ಶ್ರೇಷ್ಠವಾದ ರೋಗ, ಮುಪ್ಪುಗಳಿಲ್ಲದ ದಿವ್ಯಶರೀರವನ್ನು ಪಡೆಯುತ್ತಾನೆ.

೬೩. ನೀವೂ ಕೂಡ ಹಿಂದೆ ರಾಕ್ಷಸರಾಗಿದ್ದವರೇ. ಎಲ್ಲರೂ ರಸಾತಲವನ್ನು ಹೊಕ್ಕು, ಅಮೃತಪಾನ ಮಾಡಿರಿ. ರೋಗರುಜಿನಗಳಿಲ್ಲದ ದಿವ್ಯದೇಹಗಳನ್ನು ಪಡೆಯುವಿರಿ.

೬೪. ಎಲ್ಲರೂ ಆತನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿಕೊಂಡರು. ಮಯಾಸುರನ ಮಾತಿನಲ್ಲಿ ಅವರಿಗೆ ವಿಶ್ವಾಸಮೂಡಿ ಅನುಮಾನಗಳಿಲ್ಲದಂತೆ ನೆಮ್ಮದಿಯುಂಟಾಯಿತು.

೬೫. ಚಂದ್ರಪ್ರಭನಾದರೋ ಮರುದಿನ, ಮಯನ ಮಾತಿನಂತೆ ಎಲ್ಲ ರಾಜರನ್ನೂ ಸೇರಿಸಿಕೊಂಡು ಚಂದ್ರಭಾಗಾ ಐರಾವತೀ ನದಿಗಳ ಸಂಗಮಕ್ಕೆ ಹೋದನು.

---

ಸ್ವಾತಂತ್ರ್ಯೇಣ ತು ಯೋಽನ್ಯಸ್ಮಿನ್‌ಶರೀರೇ ಯೋಗಯುಕ್ತಿತಃ ।
ಅಂತಃಕರಣಮಾವಿಶ್ಯ ಪ್ರವಿಶೇದಿಂದ್ರಿಯಾಣಿ ಚ ॥ ೬೦
ಅವಿಪ್ಲುತಮನೋಬುದ್ಧಿರ್ಗೃಹಾದಿವ ಗೃಹಾಂತರಮ್ ।
ಸಹಸಾ ಚ ಸ್ಮರತ್ಯೇವ ಜ್ಞಾನೀ ಯೋಗೇಶ್ವರೋಽಖಿಲಮ್ ॥ ೬೧
ತಸ್ಮಾದ್ವಿಕಲ್ಪೋ ಮಾ ಭೂದ್ವಃ ಪ್ರತ್ಯುತೈಷ ನೃಪೋ ಮಹತ್ ।
ದಿವ್ಯಂ ಶರೀರಮಾಪ್ನೋತಿ ಜರಾರೋಗವಿವರ್ಜಿತಮ್ ॥ ೬೨
ಯೂಯಂ ಚದಾನವಾಃ ಸರ್ವೇ ಪ್ರವಿಶ್ಯೈವ ರಸಾತಲಮ್ ।
ಸುಧಾಪಾನೇನ ನೀರೋಗದಿವ್ಯದೇಹಾ ಭವಿಷ್ಯಥ ॥ ೬೩
ಏತನ್ಮಯಾಸುರವಚಃ ಶ್ರುತ್ವಾ ಸರ್ವೇ ತಥೇತಿ ತೇ ।
ತತ್ಪ್ರತ್ಯಯಪರಿತ್ಯಕ್ತಶಂಕಾಸ್ತತ್‌ಪ್ರತಿಪೇದಿರೇ ॥ ೬೪
ತದ್ವಾಕ್ಯೇನ ಚ ಸೋಽನ್ಯೇದ್ಯುರ್ಮಿಲಿತಾಖಿಲರಾಜಕಃ ।
ಚಂದ್ರಪ್ರಭಶ್ಚಂದ್ರಭಾಗೈರಾವತ್ಯೋಃ ಸಂಗಮಂ ಯಯೌ ॥ ೬೫

೬೬–೬೭. ಅಲ್ಲಿ ಸೂರ್ಯಪ್ರಭನ ಹೆಂಡತಿಯರನ್ನೆಲ್ಲ ಬಿಡಾರ ಹೂಡಿಸಿ, ರಾಜರೆಲ್ಲ ಹೊರಗೆ ಇರುವಂತೆ ಮಾಡಿ, ನಂತರ ಮಯಾಸುರನು ನೀರಿನಲ್ಲಿ ಬಿಲವನ್ನು, ಚಂದ್ರಪ್ರಭನು, ಸೂರ್ಯಪ್ರಭನೊಡನೆ ಸಿದ್ಧಾರ್ಥಾದಿ ಮಂತ್ರಿಗಳೊಡನೆ ಹಾಗೂ ತನ್ನ ರಾಣಿಯೊಡನೆ ಹೊಕ್ಕನು.

೬೮. ಬಿಲದಲ್ಲಿ ಸಾಕಷ್ಟು ದೂರ ಹೋದನಂತರ ಅಲ್ಲಿ ಒಂದು ದಿವ್ಯವಾದ ದೇವಮಂದಿರವನ್ನು ಕಂಡು ಎಲ್ಲರೊಡನೆ ಅದರ ಒಳಗೆ ಹೋದನು.

೬೯. ಅಷ್ಟರಲ್ಲಿ ಬಿಲದ ಹೊರಗೆ ನಿಂತಿದ್ದ ರಾಜರನ್ನು ವಿದ್ಯಾಧರರು ತಮ್ಮ ಸೈನ್ಯ ಸಮೇತರಾಗಿ ಆಕ್ರಮಿಸಿದರು.

೭೦. ಅವರು ರಾಜರನ್ನೂ, ಸೂರ್ಯಪ್ರಭನ ಭಾರ್ಯೆಯರನ್ನೂ ಮಾಯೆಯಿಂದ ಸ್ತಂಭನಗೊಳಿಸಿ ಅಪಹರಿಸಿಕೊಂಡು ಹೋದಾಗ ಆಕಾಶವಾಣಿಯೊಂದು ಉಂಟಾಯಿತು.

೭೧. 'ಎಲೈ ಪಾಪಿ ಶ್ರುತಶರ್ಮ, ಚಕ್ರವರ್ತಿಯ ಪತ್ನಿಯರನ್ನು ನೀನು ಮುಟ್ಟಿದರೆ ಒಡನೆಯೆ ಸೈನ್ಯಸಹಿತನಾಗಿ ಮೃತ್ಯುವಶನಾಗುತ್ತೀಯೆ.

---

ತತ್ರಾವಸ್ಥಾಪ್ಯ ನೃಪತೀನ್ ಬಹಿರ್ನಿಕ್ಷಿಪ್ಯ ತೇಷು ಚ ।
ಸೂರ್ಯಪ್ರಭಾವರೋಧಾನ್ಸ್ತಾನುಪೇತ್ಯ ಮಯದರ್ಶಿತಮ್ ॥ ೬೬
ವಿವೇಶ ವಿವರಂ ತೋಯೇ ಸಹ ಸೂರ್ಯಪ್ರಭೇಣ ಸಃ ।
ಚಂದ್ರಪ್ರಭಃ ಸಮಂ ದೇವ್ಯಾ ಸಿದ್ಧಾರ್ಥಾದ್ಯೈಶ್ಚ ಮಂತ್ರಿಭಿಃ ॥ ೬೭
ಪ್ರವಿಶ್ಯ ಗತ್ವಾ ದೀರ್ಘಂ ಚ ತೇನಾಧ್ವಾನಂ ದದರ್ಶ ಸಃ ।
ದಿವ್ಯಂ ದೇವಕುಲಂ ತಚ್ಚ ಸರ್ವೈಃ ಸಹ ವಿವೇಶ ತೈಃ ॥ ೬೮
ತಾವಚ್ಚ ಯೇ ಸ್ಥಿತಾಸ್ತತ್ರ ರಾಜಾನೋ ವಿವರಾದ್ಬಹಿಃ ।
ತೇಷಾಂ ವಿದ್ಯಾಧರಾ ವ್ಯೋಮ್ನಾ ಸೈನ್ಯೈಃ ಸಹ ಸಮಾಪತನ್ ॥ ೬೯
ತೇ ತಾನ್ ಸಂಸ್ತಭ್ಯ ಮಾಯಾಭಿರ್ಭಾರ್ಯಾಃ ಸೂರ್ಯಪ್ರಭಸ್ಯ ತಾಃ ।
ಅಹರಂಸ್ತತ್ಕ್ಷಣಂ ಚೈವಮುದಗಾದ್ಭಾರತೀ ದಿವಃ ॥ ೭೦
ಶ್ರುತಶರ್ಮನ್ನರೇ ಪಾಪ ಯದ್ಯೇತಾಶ್ಚಕ್ರವರ್ತಿನಃ ।
ಭಾರ್ಯಾಃ ಸ್ಪ್ರಕ್ಷ್ಯಸಿ ತತ್ಸದ್ಯಃ ಸಸೈನ್ಯೋ ಮೃತ್ಯುಮಾಪ್ಸ್ಯಸಿ ॥ ೭೧

೭೨–೭೩. ಇವರೆಲ್ಲರನ್ನೂ ತಾಯಿಯಂತೆ ಗೌರವಿಸಿ ರಕ್ಷಿಸು. ಈಗಲೇ ನಿನ್ನನ್ನು ಕೊಲ್ಲದೆ ಇವರನ್ನೆಲ್ಲ ಬಿಡಿಸಿರುವುದಕ್ಕೆ ಒಂದು ಕಾರಣವಿದೆ. ಇಲ್ಲೇ ನಿಲ್ಲಿ.' ಎಂದು ದಿವ್ಯವಾಣಿ ಮೊಳಗಿದಾಗ ಖೇಚರರೆಲ್ಲ ಅದೃಶ್ಯರಾಗಿಬಿಟ್ಟರು.

೭೪. ಸೂರ್ಯಪ್ರಭನ ಪತ್ನಿಯರನ್ನು ಕರೆದೊಯ್ದಾಗ ವೀರಭಟಾದಿಗಳು ಯುದ್ಧ ಮಾಡಿ ಮಡಿಯಲು ಸನ್ನದ್ಧರಾದರು.

೭೫. 'ನಿಮ್ಮ ಪುತ್ರಿಯರನ್ನು ಯಾರೂ ಹಾಳು ಮಾಡಿಲ್ಲ. ಅವರನ್ನು ಮತ್ತೆ ಪಡೆಯುವಿರಿ. ಯಾರೂ ಸಾಹಸ ಮಾಡಬಾರದು. ನಿಮಗೆಲ್ಲ ಶುಭವಾಗಲಿ.'

೭೬. ಎಂದು ಮತ್ತೆ ಕೇಳಿಸಿದ ನಭೋವಾಣಿ ಅವರ ಆ ಪ್ರಯತ್ನವನ್ನು ತಡೆಯಿತು. ನಂತರ ಆ ರಾಜರೆಲ್ಲ ಚಂದ್ರಪ್ರಭರಾಜನು ಮತ್ತೆ ಬರುವುದನ್ನೇ ಎದುರು ನೋಡುತ್ತ ಅಲ್ಲೇ ನಿಂತರು.

೭೭. ಈ ನಡುವೆ ಪಾತಾಲಲೋಕದ ಆ ದೇವಾಲಯದಲ್ಲಿ ಎಲ್ಲರೊಡನೆ ಇದ್ದ ಚಂದ್ರಪ್ರಭನನ್ನು ಕುರಿತು ಮಯನು ಇಂತೆಂದನು.

೭೮. 'ರಾಜನ್, ಧ್ಯಾನವಿಟ್ಟು ನಾನು ಹೇಳುವುದನ್ನು ಕೇಳು. ಅನ್ಯದೇಹ ಪ್ರವೇಶ ಮಾಡುವ ಉತ್ತಮ ಉಪಾಯವನ್ನು (ಯೋಗ) ನಿನಗೆ ಉಪದೇಶ ಮಾಡುತ್ತೇನೆ.'

---

ತಸ್ಮಾನ್ಮಾತೃವದೇತಾಸ್ತ್ವಂ ಪಶ್ಯನ್ರಕ್ಷೇಃ ಸಗೌರವಮ್ ।
ಅಧುನೈವ ನ ಹತ್ವಾ ತ್ವಾಂ ಯದೇತಾ ಮೋಚಿತಾ ಮಯಾ ॥ ೭೨
ತತ್ರಾಸ್ತಿ ಕಾರಣಂ ಕಿಂಚಿತ್ತಿಷ್ಠತ್ವತ್ರ ಸಂಪ್ರತಿ ।
ಇತ್ಯುಕ್ತೇ ದಿವ್ಯಯಾ ವಾಚಾ ಖೇಚರಾಸ್ತೇ ತಿರೋದಧುಃ ॥ ೭೩
ರಾಜಾನಸ್ತೇ ಚ ನೀತಾಸ್ತಾ ದೃಷ್ಟ್ವಾ ವೀರಭಟಾದಯಃ ।
ಆಸನ್ನನ್ಯೋನ್ಯಯುದ್ಧೇನ ದೇಹತ್ಯಾಗೇ ಕೃತೋದ್ಯಮಾಃ ॥ ೭೪
ನೈತಾಸಾಮಸ್ತಿ ವಿಧ್ವಂಸಃ ಪ್ರಾಪ್ಸ್ಯಥೈತಾಃ ಸುತಾಃ ಪುನಃ ।
ತತ್ಸಾಹಸಂ ನ ಯುಷ್ಮಾಭಿಃ ಕಾರ್ಯಂ ಕಲ್ಯಾಣಮಸ್ತು ವಃ ॥ ೭೫
ಇತಿ ವಾಂಙ್ನಾಭಸೀ ತೇಷಾಂ ತಮುದ್ಯೋಗಂ ನ್ಯವಾರಯತ್ ।
ತತಃ ಪ್ರತೀಕ್ಷಮಾಣಾಸ್ತೇ ತಸ್ಥುಸ್ತತ್ರೈವ ಭೂಭುಜಃ ॥ ೭೬
ಅತ್ರಾಂತರೇ ಚ ಪಾತಾಲೇ ತಸ್ಮಿನ್ದೇವಕುಲೇ ಸ್ಥಿತಮ್ ।
ಸರ್ವೈರ್ವೃತಮವೋಚತ್ತಮೇವಂ ಚಂದ್ರಪ್ರಭಂ ಮಯಃ ॥ ೭೭
ರಾಜನ್ನೇಕಮನಾ ಭೂತ್ವಾ ಶೃಣ್ವಿದಾನೀಮನುತ್ತಮಮ್ ।
ಉಪದೇಕ್ಷ್ಯಾಮಿ ತೇ ಯೋಗಮನ್ಯದೇಹಪ್ರವೇಶದಮ್ ॥ ೭೮

೭೯. ಬಳಿಕ, ಸಾಂಖ್ಯವನ್ನೂ, ಯೋಗವನ್ನೂ ಅದರ ಒಳಮರ್ಮಗಳನ್ನೂ ವಿವರಿಸಿ, ಅದರಿಂದ ದೇಹಾಂತರ ಪ್ರವೇಶ ಮಾಡುವ ಯುಕ್ತಿಯನ್ನು ಉಪದೇಶಿಸಿದನು.

೮೦–೮೧. (ಎಲ್ಲವನ್ನೂ ಹೇಳಿದ) ಯೋಗೀಂದ್ರನಾದ ಮಯಾಸುರನು, 'ಇದೇ ಸಿದ್ಧಿ, ಇದೇ ಜ್ಞಾನ, ಇದೇ ಸ್ವಾತಂತ್ರ್ಯ, ಐಶ್ವರ್ಯ, ಅಣಿಮಾದಿ ಅಷ್ಟಸಿದ್ಧಿಗಳ ನಿಕೇತನ. ಈ ಐಶ್ವರ್ಯದಲ್ಲಿ ನೆಲೆನಿಂತ ಸುರೇಶ್ವರರು ಕೂಡ ಮೋಕ್ಷವನ್ನು ಬಯಸುವುದಿಲ್ಲ. ಇದನ್ನು ಪಡೆಯಲೆಂದೇ ಜಪತಪಾದಿ ಕ್ಲೇಶಗಳನ್ನು ಅನುಭವಿಸುತ್ತಾರೆ.

೮೨. ಬಲ್ಲವರು ಈ ಯೋಗವಿದ್ದರೆ ಸಾಕು, ಸ್ವರ್ಗಭೋಗ ಬಂದರೂ ಬೇಡವೆನ್ನುತ್ತಾರೆ. ಪ್ರಾಸಂಗಿಕವಾಗಿ ಇಲ್ಲೊಂದು ಕಥೆಯನ್ನು ಹೇಳುತ್ತೇನೆ ಕೇಳಿ.

೮೩. ಹಿಂದಿನ ಕಲ್ಪದಲ್ಲಿ ಕಾಲನೆಂಬ ಮಹಾದ್ವಿಜನಿದ್ದನು. ಅವನು ಪುಷ್ಕರ ತೀರ್ಥಕ್ಕೆ ಹೋಗಿ ಹಗಲು ರಾತ್ರಿ ತಪಸ್ಸನ್ನು ಮಾಡಿದನು.

೮೪. ಜಪ ಮಾಡುತ್ತಾ ಮಾಡುತ್ತಾ ದಿವ್ಯವಾದ ಎರಡುನೂರು ವರ್ಷಗಳೇ ಕಳೆದುಹೋದವು. ಆಗ ಅವನ ತಲೆಯಿಂದ ನಿರಂತರವಾದ ಜ್ಯೋತಿಯೊಂದು ಪ್ರಕಾಶಿಸತೊಡಗಿತು.

೮೫. ಸಹಸ್ರ ಸೂರ್ಯಪ್ರಕಾಶಮಾನವಾದ ಆ ಜ್ಯೋತಿಯು ಆಕಾಶವನ್ನೆಲ್ಲ ವ್ಯಾಪಿಸಿ, ಅಂಬರದಲ್ಲಿ ಸಿದ್ಧರ ಗತಿಯನ್ನೂ ತಡೆದು ಮೂರು ಲೋಕಗಳನ್ನೂ ಸುಡತೊಡಗಿತು.

---

ಇತ್ಯುಕ್ತ್ವಾಖ್ಯಾಯ ಸಾಂಖ್ಯಂ ಚ ಯೋಗಂ ಚ ಸರಹಸ್ಯಕಮ್ ।
ಯುಕ್ತಿಂ ದೇಹಾಂತರಾವೇಶೇ ತಸ್ಮಾದುಪದಿದೇಶ ಸಃ ॥ ೭೯
ಜಗಾದ ಚ ಸ ಯೋಗೀಂದ್ರಃ ಸೈಷಾ ಸಿದ್ಧಿರಿದಂ ಚ ತತ್ ।
ಜ್ಞಾನಂ ಸ್ವಾತಂತ್ರ್ಯಮೈಶ್ವರ್ಯಮಣಿಮಾದಿನಿಕೇತನಮ್ ॥ ೮೦
ಅತ್ರೈಶ್ವರ್ಯೇ ಸ್ಥಿತಾ ಮೋಕ್ಷಂ ನ ವಾಂಛಂತಿ ಸುರೇಶ್ವರಾಃ ।
ಏತದರ್ಥಂ ಜಪತಪಃಕ್ಲೇಶಮನ್ಯೇಽಪಿ ಕುರ್ವತೇ ॥ ೮೧
ಸಂಪ್ರಾಪ್ತಮಪಿ ನೇಚ್ಛಂತಿ ಸ್ವರ್ಗಭೋಗಂ ಮಹಾಶಯಾಃ ।
ತಥಾ ಚ ಶ್ರೂಯತಾಮತ್ರ ಕಥಾಂ ವಃ ಕಥಯಾಮ್ಯಹಮ್ ॥ ೮೨
ಆಸೀತ್ಕೋಽಪಿ ಪುರಾಕಲ್ಪೇ ಕಾಲೋ ನಾಮ ಮಹಾದ್ವಿಜಃ ।
ಸ ಗತ್ವಾ ಪುಷ್ಕರೇ ತೀರ್ಥೇ ಜಪಂ ಚಕ್ರೇ ದಿವಾನಿಶಮ್ ॥ ೮೩
ಜಪತಸ್ತಸ್ಯ ತತ್ರಾಗಾದ್ದಿವ್ಯಂ ವರ್ಷಶತದ್ವಯಮ್ ।
ತತೋಽಸ್ಯ ಶಿರಸೋಽಚ್ಛಿನ್ನಮರ್ಚಿರಾವಿರಭೂನ್ಮಹತ್ ॥ ೮೪
ಯೇನ ಸೂರ್ಯಾಯುತೇನೇವ ಪ್ರೋದ್ಗತೇನಾಂಬರೇ ಗತಿಃ ।
ಸಿದ್ಧಾದೀನಾಂ ನಿರುದ್ಧಾಭೂತ್ ಜಜ್ವಾಲ ಚ ಜಗತ್ರಯಮ್ ॥ ೮೫

೭೬. ಆಗ, 'ಬ್ರಾಹ್ಮಣನೇ, ನಿನಗೆ ಬೇಕಾದ ವರವನ್ನು ಪಡೆದುಕೋ. ಲೋಕಗಳನ್ನೆಲ್ಲ ನಿನ್ನ ಜ್ವಾಲೆಯು ದಹಿಸುತ್ತಿದೆ' ಎಂದು ಬ್ರಹ್ಮೇಂದ್ರಾದಿಗಳು ಬಂದು ಹೇಳಿದರು.

೭೭. 'ಜಪವನ್ನು ಬಿಟ್ಟು ಬೇರೆಯದರಲ್ಲಿ ನನಗೆ ಆಸಕ್ತಿಯಿಲ್ಲ. ಮತ್ತಾವ ವರವನ್ನೂ ಬಯಸುವುದಿಲ್ಲ', ಎಂದು ಅವನು ಅವರಿಗೆ ಹೇಳಿದನು.

೭೮. ಅವರು ನಿರ್ಬಂಧಮಾಡಲಾಗಿ ಆ ಜಾಪಕನು ದೂರ ಹೋಗಿ ಹಿಮವತ್ ಪರ್ವತದ ಬಳಿ ಜಪಮಾಡುತ್ತ ನಿಂತನು.

೭೯. ಅಲ್ಲೂ ಕೂಡ ಅವನ ತೇಜಸ್ಸು ವಿಶೇಷವಾಗಿ ಹೊಮ್ಮಿ ಅನ್ಯರಿಗೆ ಸಹಿಸಲು ಕಷ್ಟವಾದಾಗ, ಅವನ ಜಪಕ್ಕೆ ವಿಘ್ನವುಂಟುಮಾಡಲು ಇಂದ್ರನು ಸುರಾಂಗನೆಯರನ್ನು ಕಳಿಸಿದನು.

೮೦. ಪ್ರಲೋಭನೆಗೊಳಿಸುತ್ತಿದ್ದ ಆ ವರಾಂಗನೆಯರನ್ನು ಆತ ಕಣ್ಣೆತ್ತಿಯೂ ನೋಡಲಿಲ್ಲ. ಆಗ ಅವನನ್ನು ಮಗಿಸಲು ಸುರರು ಮೃತ್ಯುವನ್ನೇ ಕಳಿಸಿದರು.

೮೧. ಮೃತ್ಯುವು ಬಂದು ಅವನಿಗೆ ಹೇಳಿದ, 'ಮನುಷ್ಯರು ಇಷ್ಟು ದೀರ್ಘಕಾಲ ಬದುಕುವುದಿಲ್ಲ. ನಿನ್ನ ದೇಹವನ್ನು ಬಿಡು. ವಿಧಿನಿಯಮವನ್ನು ಮೀರಬೇಡ.'

೮೨. ಅದನ್ನು ಕೇಳಿ ದ್ವಿಜನು ಹೇಳಿದನು: 'ನನ್ನ ಆಯುಸ್ಸಿನ ಅವಧಿ ಪೂರ್ಣವಾಗಿದ್ದ ಪಕ್ಷದಲ್ಲಿ ನೀನೇಕೆ ನನ್ನನ್ನು ಕರೆದೊಯ್ಯುತ್ತಿಲ್ಲ ! ಏತಕ್ಕಾಗಿ ಕಾಯುತ್ತಿರುವೆ ?

---

ಬ್ರಹ್ಮನ್ಸ್ತೇ ವರೋಽಭೀಷ್ಟಸ್ತಂ ಗೃಹಾಣ ಜ್ವಲಂತ್ಯಮೀ ।
ಲೋಕಾಸ್ತ್ವದರ್ಚಿಷೇತ್ಯೂಚುರ್ಬ್ರಹ್ಮೇಂದ್ರಾದ್ಯಾ ಉಪೇತ್ಯ ತಮ್ ॥ ೭೬
ಜಪಾದನ್ಯತ್ರ ಮಾ ಭೂನ್ಮೇ ರತಿರಿತ್ಯೇಷ ಏವ ಮೇ ।
ವರೋ ನಾನ್ಯದ್ವೃಣೇ ಕಿಂಚಿದಿತಿ ತಾನ್ಪ್ರತ್ಯುವಾಚ ಸಃ ॥ ೭೭
ನಿರ್ಬಂಧಂ ತೇಷು ಕುರ್ವತ್ಸು ತತೋ ಗತ್ವಾಪಿ ದೂರತಃ ।
ಉತ್ತರೇ ಹಿಮವತ್ಪಾರ್ಶ್ವೇ ಜಪನ್ನಾಸೀತ್ಸ ಜಾಪಕಃ ॥ ೭೮
ತತ್ರಾಪ್ಯಸಹ್ಯಂ ತತ್ತೇಜಃ ಸವಿಶೇಷಂ ಕ್ರಮಾದ್ಯದಾ ।
ತದಾ ವಿಘ್ನಾಯ ತಸ್ಯೇಂದ್ರಃ ಪ್ರಜಿಘಾಯ ಸುರಾಂಗನಾಃ ॥ ೭೯
ಸ ಧೀರೋ ಲೋಭಯಂತೀಸ್ತಾ ನ ತೃಣಾಯಾಪ್ಯಮನ್ಯತ ।
ನಿಸ್ಪೃಷ್ಟಾರ್ಥಂ ತತಸ್ತಸ್ಮೈ ಮೃತ್ಯುಂ ವಿಸಸೃಜುಃ ಸುರಾಃ ॥ ೮೦
ಉಪೇತ್ಯ ಸ ತಮಾಹ ಸ್ಮ ಬ್ರಹ್ಮನ್ ಮರ್ತ್ಯೈರಿಯಚ್ಚಿರಮ್ ।
ನ ಜೀವ್ಯತೇ ತದಾತ್ಮಾನಂ ತ್ಯಜ ಮಾ ಲಂಘಯ ಸ್ಥಿತಿಮ್ ॥ ೮೧
ತಚ್ಛ್ರುತ್ವಾ ಸ ದ್ವಿಜೋಽವಾದೀದ್ಯದಿ ಪೂರ್ಣೋ ಮಮಾವಧಿಃ ।
ಆಯುಷಸ್ತನ್ನ ಕಸ್ಮಾನ್ಮಾಂ ನಯಸೇ ಕಿಂ ಪ್ರತೀಕ್ಷಸೇ ॥ ೮೨

೧೩. ನಾನಾಗಿ ನಾನು ಪ್ರಾಣಬಿಡುವುದಿಲ್ಲ. ಎಲೈ, ಪಾಶಹಸ್ತನೇ, ನನ್ನಿಷ್ಟದಂತೆ ಶರೀರವನ್ನು ಬಿಟ್ಟರೆ ನಾನು ಆತ್ಮಘಾತಿಯಾಗುತ್ತೇನೆ.'

೧೪. ಹೀಗೆ ಹೇಳಿದ ಆತನನ್ನು ಕರೆದೊಯ್ಯಲು ಮೃತ್ಯುವಿಗೆ ಆಗಲಿಲ್ಲ. ಆತನ ಪ್ರಭಾವ ಹಾಗಿದ್ದಿತು. ಸೋತ ಯಮನು ಸುಮ್ಮನೆ ಹಿಂತಿರುಗಿದನು.

೧೫. ಹೀಗೆ ಕಾಲನನ್ನು ಜಯಿಸಿದ್ದ ಕಾಲನೆಂಬ ಆ ದ್ವಿಜನನ್ನು ಇಂದ್ರನು ಬಲಾತ್ಕಾರದಿಂದ ತನ್ನ ಬಾಹುಗಳಿಂದಲೇ ಎತ್ತಿಕೊಂಡು ಸುರಾಲಯಕ್ಕೆ ಹೋದನು.

೧೬. ಅಲ್ಲೂ ಕೂಡ ಭೋಗವಿಮುಖನಾಗಿ ಜಪದಲ್ಲೇ ನಿರತನಾಗಿದ್ದಾಗ ದೇವತೆಗಳು ಅಲ್ಲಿಂದ ಅವನನ್ನು ಕಳಿಸಿಬಿಟ್ಟರು. ಮತ್ತೆ ಕಾಲನು ಹಿಮಾಲಯಕ್ಕೇ ಬಂದನು.

೧೭. ಮತ್ತೆ ಇಂದ್ರಾದಿಗಳು ಅವನನ್ನು ವರ ಪಡೆಯುವಂತೆ ಎಚ್ಚರಿಸುತ್ತಲೇ ಇದ್ದರು. ಒಮ್ಮೆ ಆ ಮಾರ್ಗವಾಗಿ ಇಕ್ಷ್ವಾಕು ರಾಜನು ಬಂದನು.

೧೮. ಅಲ್ಲಿನ ವಿದ್ಯಮಾನಗಳನ್ನೆಲ್ಲ ತಿಳಿದ ರಾಜನು ಜಾಪಕನಿಗೆ ಹೇಳಿದನು. 'ದೇವತೆಗಳಿಂದ ನಿನಗೆ ವರ ಬೇಕಿಲ್ಲದಿದ್ದರೆ ನನ್ನಿಂದ ಪಡೆ.'

೧೯. ಅದನ್ನು ಕೇಳಿ ಜಾಪಕನು ನಕ್ಕನು. ರಾಜನಿಗೆ ಇಂತೆಂದನು. 'ದೇವತೆಗಳಿಂದಲೇ ವರ ಬೇಡವೆಂದ ನನಗೆ ನೀನು ವರಕೊಡಲು ಶಕ್ತನೇ' ?

---

ಸ್ವಯಂ ಚ ನಾಹಮಾತ್ಮಾನಂ ತ್ಯಜೇಯಂ ಪಾಶಹಸ್ತ ರೇ ।
ಆತ್ಮಘಾತೀ ಭವೇಯಂ ಚ ಶರೀರಂ ಕಾಮತಸ್ತ್ಯಜನ್ ॥ ೧೩
ಇತ್ಯುಕ್ತವಂತಂ ತಂ ನೇತುಂ ಪ್ರಭಾವಾನ್ನಾಶಕದ್ಯದಾ ।
ತದಾ ಪರಾಙ್ಮುಖೋ ಮೃತ್ಯುರ್ಜಗಾಮ ಸ ಯಥಾಗತಮ್ ॥ ೧೪
ತತೋ ವಿಜಿತಕಾಲಂ ತಂ ಕಾಲಂ ಸಾನುಶಯೋ ದ್ವಿಜಮ್ ।
ಬಲಾದುತ್‌ಕ್ಷಿಪ್ಯ ಬಾಹುಭ್ಯಾಂ ನಿನಾಯೇಂದ್ರಃ ಸುರಾಲಯಮ್ ॥ ೧೫
ತತ್ರ ತದ್ಭೋಗವಿಮುಖೋ ಜಪಾದವಿರಮಂಶ್ಚ ಸಃ ।
ದೇವಾವತಾರಿತೋ ಭೂಯಸ್ತಮೇವಾಗಾದ್ಧಿಮಾಲಯಮ್ ॥ ೧೬
ತತ್ರಾಪೀಂದ್ರಾದಯೋ ಭೂಯೋ ವರಾರ್ಥಂ ಬೋಧಯಂತಿ ತಮ್ ।
ಯಾವತ್ತಾವನ್ನೃಪಸ್ತೇನ ಮಾರ್ಗೇಣೇಕ್ಷ್ವಾಕುರಾಯಯೌ ॥ ೧೭
ಸ ತದ್ಬುದ್ಧ್ವಾ ಯಥಾವಸ್ತು ಜಾಪಕಂ ತಮಭಾಷತ ।
ದೇವೇಭ್ಯಶ್ಚೇನ್ನ ಗೃಹ್ಣಾಸಿ ವರಂ ಮತ್ತೋ ಗೃಹಾಣ ಭೋಃ ॥ ೧೮
ತಚ್ಛ್ರುತ್ವಾ ಸ ವಿಹಸ್ಯೈನಂ ಜಾಪಕೋಽಭ್ಯವದನ್‌ನೃಪಮ್ ।
ತ್ವಂ ಶಕ್ತೋ ವರದಾನೇ ಮೇ ತ್ರಿದಶೇಭ್ಯೋಽಪ್ಯಗೃಹ್ಣತಃ ॥ ೧೯

೧೦೦. ಆಗ ರಾಜನು ಹೇಳಿದನು, ಸರಿ ನಿನಗೆ ವರಕೊಡಲು ನನಗಾಗದು. ನೀನೇ ಶಕ್ತ (ಎಂದು ಒಪ್ಪಿಕೊಳ್ಳುತ್ತೇನೆ). ನೀನೇ ನನಗೆ ವರ ನೀಡು.'

೧೦೧. 'ಆಗಲಿ ನಿನಗೆ ಬೇಕಾದ್ದನ್ನು ಬೇಡು. ನೀಡುತ್ತೇನೆ' ಎಂದು ಹೇಳಿದ ಜಾಪಕನ ಮಾತನ್ನು ಕೇಳಿ ರಾಜನು ತನ್ನೊಳಗೇ ವಿಮರ್ಶೆ ಮಾಡಿದನು.

೧೦೨. 'ರಾಜನಾದ ನಾನು ಕೊಡಬೇಕು, ವಿಪ್ರನಾದವನು ಪಡೆಯಬೇಕು ಎಂಬುದು ಸಾಮಾನ್ಯ ನಿಯಮ. ಆದರೆ ಇಲ್ಲಿ ಎಲ್ಲ ತಿರುಗುಮುರುಗಾದಂತೆ ಇದೆಯಲ್ಲ.'

೧೦೩. ಎಂದು ತನ್ನಲ್ಲೇ ಚಿಂತನೆ ಮಾಡುತ್ತಾ ರಾಜನು ನಿಧಾನಿಸುತ್ತಿರುವಾಗ, ಅಲ್ಲಿಗೆ ಜಗಳವಾಡುತ್ತಾ ಇಬ್ಬರು ವಿಪ್ರರು ಬಂದರು.

---

ಇತ್ಯೂಚಿವಾಂಸಂ ತಂ ವಿಪ್ರಮಿಕ್ಷ್ವಾಕುಃ ಪ್ರತ್ಯುವಾಚ ಸಃ ।
ಶಕ್ತೋ ನ ತೇಽಹಂ ಶಕ್ತಸ್ತ್ವಂ ಮಮ ತದ್ದೇಹಿ ಮೇ ವರಮ್ ॥ ೧೦೦
ತತಃ ಸ ಜಾಪಕೋಽವಾದೀದ್ಯತ್ತೇಽಭೀಷ್ಟಂ ವೃಣೀಷ್ವ ತತ್ ।
ದಾಸ್ಯಾಮ್ಯೇವೇತಿ ತಚ್ಛ್ರುತ್ವಾ ರಾಜಾಂತರ್ವಿಮಮರ್ಶ ಸಃ ॥ ೧೦೧
ಅಹಂ ದದಾಮಿ ವಿಪ್ರೋಽಯಂ ಗೃಹ್ಣಾತೀತ್ಯುಚಿತೋ ವಿಧಿಃ ।
ವಿಪರೀತಮಿದಂ ಗೃಹ್ಣಾಮ್ಯಹಮೇಷ ದದಾತಿ ಯತ್ ॥ ೧೦೨
ಇತಿ ಯಾವತ್ಸ ನೃಪತಿರ್ವಿಚಿಕಿತ್ಸನ್ ವಿಲಂಬತೇ ।
ತಾವದ್ವಿವದಮಾನೌ ದ್ವೌ ತತ್ರ ವಿಪ್ರಾವುಪೇಯತುಃ ॥ ೧೦೩

೧೦೪–೧೦೭. ರಾಜನನ್ನು ಕಂಡು ನ್ಯಾಯ ಒದಗಿಸಬೇಕೆಂದು ಕೇಳಿಕೊಂಡರು. ಅವರಲ್ಲಿ ಒಬ್ಬನು ಹೇಳಿದ, 'ಈತ ನನಗೆ ದಕ್ಷಿಣೆಯೊಡನೆ ಹಸುವನ್ನು ದಾನ ಮಾಡಿದ್ದಾನೆ. ಅದನ್ನೇ ನಾನು ಮತ್ತೆ ಅವನಿಗೆ ಕೊಡಲು ಬಯಸಿದರೆ ಇವನು ಏಕೆ ತೆಗೆದುಕೊಳ್ಳುತ್ತಿಲ್ಲ ?' ಅದಕ್ಕೆ ಮತ್ತೊಬ್ಬನು, 'ದಾನ ಮಾಡಿದ್ದನ್ನು ನಾನು ಮತ್ತೆ ಮುಟ್ಟಲಾರೆ. ನಾನೇನೂ ಇವನನ್ನು ಕೊಡು ಎಂದು ಕೇಳಿಲ್ಲ. ಇವನೇಕೆ ನನಗೆ ತೆಗೆದುಕೊಳ್ಳಲು ಬಲವಂತ ಮಾಡುತ್ತಿದ್ದಾನೆ' ಎಂದನು. ಇದನ್ನು ಕೇಳಿದ ರಾಜನು 'ಈ ಆಕ್ಷೇಪ ಸರಿಯಿಲ್ಲ. ದಾನ ಪಡೆದು ಅದನ್ನೇ ಕೊಟ್ಟವನಿಗೆ ಬಲವಂತವಾಗಿ ಹಿಂತಿರುಗಿಸುವುದು ಹೇಗೆ ಸಾಧ್ಯ ?' ಎಂದಾಗ ಸಂದರ್ಭದ ಪ್ರಯೋಜನ ಪಡೆದು ಶಕ್ರನು ಇಂತೆಂದನು.

೧೦೮. 'ರಾಜನೆ, ಇದು ನ್ಯಾಯ ಎಂದು ನೀನು ತಿಳಿಯುವೆಯಾದರೆ ನೀನೇಕೆ ಈ ದ್ವಿಜನಿಂದ ವರವನ್ನು ಕೇಳಿ, ನಂತರ ಪಡೆಯಲು ಹಿಂಜರಿಯುತ್ತಿರುವೆ ?'

೧೦೯. ನಿರುತ್ತರನಾದ ರಾಜನು ಜಾಪಕನಿಗೆ ಹೇಳಿದ. 'ಪೂಜ್ಯನೆ, ನಿನ್ನ ಜಪಾರ್ಧದ ಫಲವನ್ನು ವರವಾಗಿ ನನಗೆ ನೀಡು.'

೧೧೦. 'ಆಗಲಿ, ನನ್ನ ಜಪಾರ್ಧದ ಫಲ ನಿನಗೆ ನೀಡುತ್ತಿದ್ದೇನೆ' ಎಂದು ಜಾಪಕನು ರಾಜನಿಗೆ ವರವನ್ನಿತ್ತನು.

---

ತೌ ತಂ ದೃಷ್ಟ್ವಾ ನೃಪಂ ತಸ್ಯ ಪುರೋ ನ್ಯಾಯಾರ್ಥಮೂಚತುಃ ।
ಏಕೋಽಬ್ರವೀತ್ ಪ್ರದತ್ತಾ ಮೇ ಗೌರನೇನ ಸದಕ್ಷಿಣಾ ॥ ೧೦೪

ತಾಂ ಮೇ ಪ್ರತಿದದಾನಸ್ಯ ಹಸ್ತಾದ್ಗೃಹ್ಣಾತ್ಯಸೌ ನ ಕಿಮ್ ।
ಅಥಾಪರೋಽಭ್ಯಧಾನ್ನಾಹಂ ಕೃತಪೂರ್ವಪರಿಗ್ರಹಃ ॥ ೧೦೫

ನ ಚಾರ್ಥಿತಾ ಮೇ ತತ್ಕಸ್ಮಾದ್ಗ್ರಾಹಯತ್ಯೇಷ ಮಾಂ ಬಲಾತ್ ।
ಏತಚ್ಛ್ರುತ್ವಾ ನೃಪೋಽವಾದೀದಾಕ್ಷೇಪ್ತಾಯಂ ನ ಶುಧ್ಯತಿ ॥ ೧೦೬

ಪ್ರತಿಗೃಹ್ಯ ಕಥಂ ದಾತ್ರೇ ಬಲಾತ್ ಪ್ರತಿದದಾತಿ ಗಾಮ್ ।
ಇತ್ಯುಕ್ತವಂತಂ ತಂ ಭೂಪಂ ಶಕ್ರೋ ಲಬ್ಧಾಂತರೋಽಬ್ರವೀತ್ ॥ ೧೦೭

ರಾಜನ್ ಜಾನಾಸಿ ಚೇದೇವಂ ನ್ಯಾಯಂ ತಜ್ಜಾಪಕಾದ್ದ್ವಿಜಾತ್ ।
ವರಮಭ್ಯರ್ಥ್ಯ ಸಂಪ್ರಾಪ್ತುಂ ಕಸ್ಮಾದ್ಗೃಹ್ಣಾಸಿ ನಾಮುತಃ ॥ ೧೦೮

ತತೋ ನಿರುತ್ತರೋ ರಾಜಾ ಜಾಪಕಂ ತಂ ಜಗಾದ ಸಃ ।
ಭಗವನ್ಸ್ವಜಪಸ್ಯಾರ್ಧಾತ್ ಫಲಂ ವಿತರ ಮೇ ವರಮ್ ॥ ೧೦೯

ಬಾಢಮೇವಂ ಜಪಸ್ಯಾರ್ಧಾನ್ಮದೀಯಸ್ಯಾಸ್ತು ತೇ ಫಲಮ್ ।
ಇತಿ ತಸ್ಮೈ ತತೋ ರಾಜ್ಞೇ ಜಾಪಕಃ ಸ ವರಂ ದದೌ ॥ ೧೧೦

೧೧. ಅದರಿಂದ ರಾಜನಿಗೆ ಎಲ್ಲ ಲೋಕಗಳಲ್ಲೂ ಸದ್ಗತಿಯುಂಟಾಯಿತು. ಜಾಪಕನಿಗೂ ಕೂಡ 'ಸಶಿವ' ಎಂಬ ದೇವಲೋಕ ಪ್ರಾಪ್ತಿಯಾಯಿತು.

೧೨. ಅಲ್ಲಿ ಬಹುಕಲ್ಪಗಳ ಕಾಲ ಇದ್ದು ಮತ್ತೆ ಭೂಮಿಗೆ ಬಂದು ಸ್ವತಂತ್ರನಾಗಿ ಶಾಶ್ವತವಾದ ಯೋಗಸಿದ್ಧಿಯನ್ನು ಹೊಂದಿದನು.

೧೩. ಹೀಗೆ ಸ್ವರ್ಗವಿಮುಖರಾದ ವಿವೇಕಿಗಳು ಸಿದ್ಧಿಯನ್ನೇ ಅರಸುತ್ತಾರೆ. ಅಂಥಹ ಸಿದ್ಧಿಯು ನಿನಗೆ ದೊರಕಿದೆ. ಸ್ವತಂತ್ರನಾಗಿದ್ದೀಯೆ. ನಿನ್ನ ದೇಹವನ್ನು ಮತ್ತೆ ಹೊಗು"

೧೪. ಈ ರೀತಿಯಾಗಿ ಮಯಾಸುರನಿಂದ ಯೋಗವಿದ್ಯೆಯನ್ನು ಪಡೆದು ಪತ್ನೀ, ಪುತ್ರ ಅಮಾತ್ಯ ಸಹಿತನಾದ ರಾಜಾ ಚಂದ್ರಪ್ರಭನು ಸಂತುಷ್ಟನಾದನು.

೧೫. ನಂತರ ಮಯನು ಸಪರಿವಾರನಾದ ಆತನನ್ನು ಪುತ್ರ ಮೊದಲಾದವರೊಡನೆ ಎರಡನೆಯ ಪಾತಾಲಕ್ಕೆ ಕರೆದೊಯ್ದು ಒಂದು ದಿವ್ಯವಾದ ಮನೆಯಲ್ಲಿ ಬಿಡಾರ ಮಾಡಿಸಿದನು.

೧೬. ಅಲ್ಲಿ ಅವರೆಲ್ಲರೂ ಒಬ್ಬ ಮಹಾಪುರುಷನನ್ನು ಕಂಡರು. ಅವನು ಉತ್ತಮವಾದ ಹಾಸಿಗೆಯಲ್ಲಿ ನಿದ್ರಿಸುತ್ತಿದ್ದವನಂತೆ ಮಲಗಿದ್ದನು.

---

ಸರ್ವಲೋಕಗತಿಂ ಲೇಭೇ ತೇನ ರಾಜಾ ಸ ಸೋऽಪಿ ಚ ।
ಜಾಪಕಃ ಸಶಿವಾಖ್ಯಾನಾಂ ದೇವಾನಾಂ ಲೋಕಮಾಪ್ತವಾನ್ ॥ ೧೧
ತತ್ರ ಸ್ಥಿತ್ವಾ ಬಹೂನ್ ಕಲ್ಪಾನ್ ಪುನರಾವೃತ್ಯ ಭೂತಲೇ ।
ಪ್ರಾಪ್ಯ ಸ್ವತಂತ್ರತಾಂ ಯೋಗಾತ್‌ಸಿದ್ಧಿಂ ಲೇಭೇ ಚ ಶಾಶ್ವತೀಮ್ ॥ ೧೨
ಏವಂ ಸ್ವರ್ಗಾದಿವಿಮುಖೈಃ ಸಿದ್ಧಿರೇವಾರ್ಥ್ಯತೇ ಬುಧೈಃ ।
ಸಾ ತ್ವಯಾಪ್ತಾ ಸ್ವತಂತ್ರಸ್ತದ್ರಾಜನ್ ಸ್ವಂ ದೇಹಮಾವಿಶ ॥ ೧೩
ಇತ್ಯುಕ್ತೇ ಪ್ರತ್ತಯೋಗೇನ ಮಯೇನ ಮುಮುದೇ ಪರಮ್ ।
ಸದಾರತನಯಾಮಾತ್ಯೋ ರಾಜಾ ಚಂದ್ರಪ್ರಭೋऽಥ ಸಃ ॥ ೧೪
ತತೋ ದ್ವಿತೀಯಂ ಪಾತಾಲಂ ನೀತ್ವಾ ತೇನ ಮಯೇನ ಸಃ ।
ಪ್ರಾವೇಶ್ಯತ ಗೃಹಂ ದಿವ್ಯಂ ಪುತ್ರಾದಿಸಹಿತೋ ನೃಪಃ ॥ ೧೫
ತತ್ರಾಂತರ್ದದೃಶುಸ್ತೇ ಚ ಸರ್ವೇ ಸುಪ್ತಮಿವ ಸ್ಥಿತಮ್ ।
ಮಹಾಂತಮೇಕಂ ಪುರುಷಂ ಪತಿತಂ ಶಯನೋತ್ತಮೇ ॥ ೧೬

೧೧೭. ಆ ಪುರುಷದೇಹವು ಮಹೌಷಧಿಗಳ ರಸದಿಂದಲೂ, ತುಪ್ಪದಿಂದಲೂ ಲೇಪಿತವಾಗಿತ್ತು. ವಿಕೃತಾಕೃತಿಯಿಂದ ಭಯಂಕರವಾಗಿ ಕಾಣುತ್ತಿತ್ತು. ಅದರ ಸುತ್ತಲೂ ಅನೇಕ ದೈತ್ಯರಾಜಸುತರು ನಿಂತಿದ್ದರು. ಅವರ ಮುಖಗಳೆಲ್ಲ ಕಳೆಗುಂದಿದ್ದುವು.

೧೧೮. ಮಯಾಸುರನು, 'ಇಗೊ, ನಿನ್ನ ಹಿಂದಿನ ದೇಹ ಇದು. ಆ ಜನ್ಮದಲ್ಲಿ ಭಾರ್ಯೆಯಾಗಿದ್ದವಳೂ ನಿಂತಿದ್ದಾಳೆ. ಇದನ್ನು ಪ್ರವೇಶಿಸು', ಎಂದು ಚಂದ್ರಪ್ರಭನಿಗೆ ಹೇಳಿದನು.

೧೧೯. ಮಯಾಸುರನು ಉಪದೇಶಮಾಡಿದ್ದ ಯೋಗವಿದ್ಯೆಯ ಪ್ರಭಾವದಿಂದ ಚಂದ್ರಪ್ರಭನು ತನ್ನ ತನುವನ್ನು ತ್ಯಜಿಸಿ ಆ ದೇಹದೊಳಗೆ ಹೊಕ್ಕನು.

೧೨೦. ಆಗ ಮಲಗಿದ್ದ ಪುರುಷನು ಆಕಳಿಸುತ್ತ ಮೆಲ್ಲಗೆ ಕಣ್ಣುಬಿಟ್ಟು ನೋಡಿ ನಿದ್ರೆ ತಿಳಿದವನಂತೆ ಹಾಸಿಗೆಯ ಮೇಲೆ ಎದ್ದು ಕುಳಿತನು.

೧೨೧. ಆಗ 'ಭಾಗ್ಯವಶಾತ್ ನಮ್ಮ ರಾಜನಾದ ಸುನೀಥನು ಬದುಕಿ ಬಂದಿದ್ದಾನೆ' ಎಂಬ ಸಂತೋಷದಿಂದ ಕೂಡಿದ ಅಸುರಸ್ತ್ರೀಯರ ದನಿಗಳು ಹೊಮ್ಮಿದುವು.

೧೨೨. ಆದರೆ ನಿರ್ಜೀವವಾಗಿ ಬಿದ್ದಿದ್ದ ಚಂದ್ರಪ್ರಭರಾಜನ ದೇಹವನ್ನು ಕಂಡು ಸೂರ್ಯಪ್ರಭನೇ ಮುಂತಾದ ಅವನ ಪರಿವಾರದವರು ಒಮ್ಮೆಲೆ ವಿಷಣ್ಣರಾದರು.

---

ಮಹೌಷಧಿಘೃತಾಭ್ಯಕ್ತಂ ವಿಕೃತಾಕೃತಿಭೀಷಣಂ ।
ವಿಷಣ್ಣವದನಾಂಭೋಜದೈತ್ಯರಾಜಸುತಾವೃತಮ್ ॥ ೧೧೭
ಸೋಽಯಮತ್ರ ಸ್ವದೇಹಸ್ತೇ ಪೂರ್ವಭಾರ್ಯಾವೃತಃ ಸ್ಥಿತಃ ।
ಪ್ರವಿಶೈತಮಿತಿ ಸ್ಮಾಹ ತತಶ್ಚಂದ್ರಪ್ರಭಂ ಮಯಃ ॥ ೧೧೮
ಸೋಽಥ ತೇನೋಪದಿಷ್ಟಂ ತಂ ಯೋಗಮಾಸ್ಥಾಯ ಭೂಪತಿಃ ।
ತಸ್ಮಿನ್ ಪುರುಷದೇಹೇಽಂತಸ್ತ್ಯಕ್ತ್ವಾತನುರಾವಿಶತ್ ॥ ೧೧೯
ತತಃ ಸ ಜೃಂಭಿಕಾಂ ಕೃತ್ವಾ ಶನೈರುನ್ಮೀಲ್ಯ ಲೋಚನೇ ।
ಗತನಿದ್ರ ಇವೋತ್ತಸ್ಥೌ ಪುರುಷಃ ಶಯನೀಯತಃ ॥ ೧೨೦
ದಿಷ್ಟ್ಯಾ ದೇವಃ ಸುನೀಥೋಽದ್ಯ ಪ್ರತ್ಯುಜ್ಜೀವಿತ ಏಷ ನಃ ।
ಇತಿ ತತ್ರೋದಭೂನ್ನಾದೋ ಹೃಷ್ಟಾಸುರವಧೂಕೃತಃ ॥ ೧೨೧
ಸೂರ್ಯಪ್ರಭಾದ್ಯಾಃ ಸರ್ವೇ ತು ವಿಷಣ್ಣಾಃ ಸಹಸಾಭವನ್ ।
ದೃಷ್ಟ್ವಾ ನಿಪತಿತಂ ಚಂದ್ರಪ್ರಭದೇಹಮಜೀವಿತಮ್ ॥ ೧೨೨

೧೨೩. ಚಂದ್ರಪ್ರಭಸುನೀಥನು ಸುಖವಾಗಿ ನಿದ್ರಿಸಿ ಎದ್ದವನಂತೆ (ನಿರಾಳನಾಗಿದ್ದು) ತಂದೆಯಾದ ಮಯಾಸುರನನ್ನು ಕಂಡು ಅವನ ಪಾದಗಳ ಮೇಲೆ ಬಿದ್ದು ನಮಸ್ಕರಿಸಿದನು.

೧೨೪. ಆ ತಂದೆಯೂ ಅವನನ್ನು ಆಲಿಂಗಿಸಿ ಪ್ರೀತಿಯಿಂದ ಎಲ್ಲರೆದುರು ಹೀಗೆ ಕೇಳಿದನು. 'ಮಗನೆ, ಈಗ ಎರಡೂ ಜನ್ಮಗಳ ನೆನಪು ಇದೆಯೆ ?' ಎಂದು.

೧೨೫. 'ಇದೆ', ಎಂದು ಹೇಳಿದ ಆತನು ಚಂದ್ರಪ್ರಭ ಹಾಗೂ ಸುನೀಥ ಎಂಬ ಎರಡು ಜನ್ಮಗಳ ವೃತ್ತಾಂತವನ್ನೂ ಹೇಳಿದನು.

೧೨೬. ಸೂರ್ಯಪ್ರಭನನ್ನೂ ತನ್ನ ಪತ್ನಿಯರನ್ನೂ ಹೆಸರಿನಿಂದ ಕರೆದು ಸುನೀಥಜನ್ಮದ ತನ್ನ ದಾನವ ಪತ್ನಿಯರ ಹೆಸರನ್ನು ಹೇಳಿ ಒಬ್ಬೊಬ್ಬರನ್ನೂ ಸಮಾಧಾನ ಗೊಳಿಸಿದನು.

೧೨೭. ಚಂದ್ರಪ್ರಭನಾಗಿ ಹುಟ್ಟಿದ್ದ ದೇಹವನ್ನು ಕೂಡ ಯಾವಾಗಲಾದರೂ ಉಪಯೋಗಕ್ಕೆ ಬರಬಹುದೆಂದು (ಓಷಧಿ) ದ್ರವ್ಯ, ಆಜ್ಯಗಳ ಸಂಯೋಗದಿಂದ ಸುರಕ್ಷಿತವಾಗಿ ಇಡಲಾಯಿತು.

೧೨೮. ಆಗ ಆತನಲ್ಲಿ ಸೂರ್ಯಪ್ರಭಾದಿಗಳಿಗೆ ವಿಶ್ವಾಸ ಮೂಡಿತು. ಎಲ್ಲರೂ ಚಂದ್ರಪ್ರಭ-ಸುನೀಥನನ್ನು ನಮಸ್ಕರಿಸಿ ಅಭಿನಂದಿಸಿದರು.

೧೨೯. ನಂತರ ಮಯಾಸುರನು ಹರ್ಷಗೊಂಡು ಅವರೆಲ್ಲರನ್ನೂ ಆ ನಗರದಿಂದ ಕರೆದು ಕೊಂಡು ಹೋಗಿ ಸ್ವರ್ಣದಿಂದಲೂ ರತ್ನಗಳಿಂದಲೂ ಕೂಡಿದ ಮತ್ತೊಂದು ಪುರಕ್ಕೆ ಪ್ರವೇಶ ಮಾಡಿಸಿದನು.

---

ಚಂದ್ರಪ್ರಭಸುನೀಥಶ್ಚ ಸುಖಸ್ವಾಪಾದಿವೋತ್ಥಿತಃ ।
ದೃಷ್ಟ್ವಾ ಮಯಂ ವವಂದೇ ಸ ಪಿತರಂ ಪಾದಯೋಃ ಪತನ್ ॥ ೧೨೩
ಸ ಪಿತಾಪಿ ತಮಾಲಿಂಗ್ಯ ಪೃಷ್ಟವಾನ್ ಸರ್ವಸನ್ನಿಧೌ ।
ಕಚ್ಚಿತ್ಸ್ಮರಸಿ ಪುತ್ರ ದ್ವೇ ಜನ್ಮನೀ ತ್ವಂ ಹಿ ಸಂಪ್ರತಿ ॥ ೧೨೪
ಸೋಽಪಿ ಸ್ಮರಾಮೀತ್ಯುಕ್ತ್ವೈವ ಯಚ್ಚಂದ್ರಪ್ರಭಜನ್ಮನಿ ।
ಸುನೀಥಜನ್ಮನಿ ಚ ಯತ್ತಸ್ಯ ವೃತ್ತಂ ತದುಕ್ತವಾನ್ ॥ ೧೨೫
ನಾಮಗ್ರಾಹಂ ಸದೇವೀಕಾನ್ ಸ ಚ ಸೂರ್ಯಪ್ರಭಾದಿಕಾನ್ ।
ಏಕೈಕಮಾಶ್ವಾಸಿತವಾನ್ ಪೂರ್ವಭಾರ್ಯಾಶ್ಚ ದಾನವೀಃ ॥ ೧೨೬
ಚಂದ್ರಪ್ರಭತ್ವೇ ಜಾತಂ ಚ ದೇಹಂ ದ್ರವ್ಯಾಜ್ಯಯುಕ್ತಿತಃ ।
ಭವೇಜ್ಜಾತೂಪಯೋಗೀತಿ ಸ್ಥಾಪಯಾಮಾಸ ರಕ್ಷಿತಮ್ ॥ ೧೨೭
ತತೋಽಭ್ಯನಂದನ್ ಪ್ರಣತಾ ಜಾತಪ್ರತ್ಯಯನಿರ್ವೃತಾಃ ।
ಚಂದ್ರಪ್ರಭಸುನೀಥಂ ತಂ ಹೃಷ್ಟಾಃ ಸೂರ್ಯಪ್ರಭಾದಯಃ ॥ ೧೨೮
ಮಯಾಸುರೋಽಥ ಸರ್ವಾನ್ಸ್ತಾನ್ ಹರ್ಷಾನ್ನೀತ್ವಾ ಪುರಾತ್ತತಃ ।
ಅನ್ಯತ್ ಪ್ರವೇಶಯಾಮಾಸ ಹೇಮರತ್ನಚಿತಂ ಪುರಮ್ ॥ ೧೨೯

೧೩೦. ಅಲ್ಲಿ ಅವರು ಸುಧಾರಸದಿಂದ ತುಂಬಿದ ವೈಡೂರ್ಯದ ಬಾವಿಯೊಂದನ್ನು ನೋಡಿದರು. ನಂತರ ಅದರ ತೀರದಲ್ಲಿ ಎಲ್ಲರೂ ಕುಳಿತುಕೊಂಡರು.

೧೩೧. ಸುನೀಥನ ಪತ್ನಿಯರು ತಂದಿತ್ತ ಚಿತ್ರವಿಚಿತ್ರವಾದ ರತ್ನಖಚಿತವಾದ ಪಾತ್ರೆಗಳಿಂದ ಅವರೆಲ್ಲರೂ ಅದರಲ್ಲಿನ ಅಮೃತರಸವನ್ನು ಪಾನಮಾಡಿದರು.

೧೩೨. ಆ ಪಾನದಿಂದ ಎಲ್ಲರೂ ಮತ್ತರಾಗಿ ನಿದ್ರೆಹೋದರು. ನಂತರ ದಿವ್ಯದೇಹಗಳನ್ನೂ ಮಹಾಬಲ ಪರಾಕ್ರಮಗಳನ್ನೂ ಪಡೆದು ಮೇಲೆದ್ದರು.

೧೩೩. ಆಗ ಮಯಾಸುರನು ಚಂದ್ರ ಸುನೀಥನನ್ನು ಕುರಿತು, "ಬಾ ಮಗು, ಬಹುಕಾಲದ ನಂತರ ನಿನ್ನ ತಾಯಿಯನ್ನು ನೋಡು' ಎಂದನು.

೧೩೪. "ಆಗಲಿ' ಎಂದು ಹೇಳಿದ ಸುನೀಥನು ಮಯಾಸುರನ್ನು ಹಿಂಬಾಲಿಸಿ ಸೂರ್ಯ ಪ್ರಭಾದಿಗಳೊಡನೆ ನಾಲ್ಕನೇ ಪಾತಾಳಲೋಕಕ್ಕೆ ಬಂದನು.

೧೩೫. ಅಲ್ಲಿ ನಾನಾಧಾತುಮಯವಾದ ಆಶ್ಚರ್ಯಕರವಾದ ಪುರಗಳನ್ನು ನೋಡುತ್ತಾ ಪೂರ್ಣಸ್ವರ್ಣಮಯವಾದ ಒಂದು ಪುರವನ್ನು ಪ್ರವೇಶಿಸಿದರು.

೧೩೬. ಅಲ್ಲಿ ರತ್ನಖಚಿತವಾದ ಸ್ತಂಭಗಳಿಂದ ಕೂಡಿ ಸಕಲ ಸಂಪನ್ನವಾಗಿದ್ದ ಮನೆಯೊಂದರಲ್ಲಿ ಸುನೀಥನ ತಾಯಿಯಾದ ಮಯಾಸುರನ ಪತ್ನಿಯನ್ನು ಕಂಡರು.

---

ಪ್ರವಿಷ್ಟಾಸ್ತತ್ರ ವೈಡೂರ್ಯವಾಪೀಂ ತೇ ದದೃಶುರ್ಭೃತಾಮ್ ।
ಸುಧಾರಸೇನ ತಸ್ಯಾಶ್ಚ ತೀರೇ ಸರ್ವೇಪ್ಯುಪಾವಿಶನ್ ॥ ೧೩೦
ಪಪುಶ್ಚ ತತ್ಸುಧಾಪಾನಮಮೃತಾಧಿಕಮತ್ರ ತೇ ।
ಸುನೀಥಭಾರ್ಯೋಪಹೃತೈರ್ವಿಚಿತ್ರೈರ್ಮಣಿಭಾಜನೈಃ ॥ ೧೩೧
ತೇನ ಪಾನೇನ ತೇ ಸರ್ವೇ ಮತ್ತಸುಪ್ತೋತ್ಥಿತಾಸ್ತತಃ ।
ಸಂಪೇದಿರೇ ದಿವ್ಯದೇಹಾ ಮಹಾಬಲಪರಾಕ್ರಮಾಃ ॥ ೧೩೨
ಚಂದ್ರಪ್ರಭಸುನೀಥಂ ಚ ತತೋಽವಾದೀನ್ಮಯಾಸುರಃ ।
ಪುತ್ರೈಹಿ ಯಾಮಃ ಪಶ್ಯ ಸ್ವಾಂ ಮಾತರಂ ಸುಚಿರಾದಿತಿ ॥ ೧೩೩
ತತಃ ತಥೇತಿ ಚೋದ್ಯುಕ್ತಃ ಸುನೀಥೋಽಗ್ರೇಸರೇ ಮಯೇ ।
ಯಯೌ ಚತುರ್ಥಂ ಪಾತಾಲಂ ಸಹ ಸೂರ್ಯಪ್ರಭಾದಿಭಿಃ ॥ ೧೩೪
ತತ್ರ ಚಿತ್ರಾಣಿ ಪಶ್ಯಂತೋ ನಾನಾಧಾತುಮಯಾನಿ ತೇ ।
ಪುರಾಣ್ಯೇಕಂ ಪುರಂ ಪ್ರಾಪುಃ ಸರ್ವೇ ಸರ್ವಹಿರಣ್ಮಯಮ್ ॥ ೧೩೫
ತತ್ರ ರತ್ನಮಯಸ್ತಂಭೇ ಸರ್ವಸಂಪನ್ನಿಕೇತನೇ ।
ದದೃಶುರ್ಮಯಭಾರ್ಯಾಂ ತಾಂ ತೇ ಸುನೀಥಸ್ಯ ಮಾತರಂ ॥ ೧೩೬

೧೩೭ ಸರ್ವಾಭರಣಭೂಷಿತೆಯಾಗಿದ್ದ ಆಕೆಯ ಹೆಸರು ಲೀಲಾವತಿ ಎಂದು. ಆಕೆಯ ರೂಪವೋ ಅಪ್ಸರೆಯರನ್ನೂ ಮೀರಿಸಿತ್ತು. ಆಕೆಯನ್ನು ಅನೇಕ ಅಸುರ ಕನ್ಯೆಯರು ಸುತ್ತುವರಿದಿದ್ದರು.

೧೩೮. ಸುನೀಥನನ್ನು ಕಂಡೊಡನೆಯೇ ಆಕೆ ಸಂಭ್ರಮದಿಂದ ಎದ್ದು ಬಂದಳು. ಇವನು ಕೂಡ ಅಭಿವಂದಿಸಿ ಆಕೆಯ ಕಾಲಿಗೆ ಬಿದ್ದನು.

೧೩೯. ಆಕೆ ಮಗನನ್ನು ನಿಟ್ಟಿಸಿನೋಡಿ, ಮೈದಡವಿ, ಆಲಂಗಿಸಿ ಕಣ್ಣೀರ್ಗರೆಯುತ್ತಾ ಅವನನ್ನು ಮತ್ತೆ ಪಡೆದ ಪತಿ ಮಯಾಸುರನನ್ನು ಪ್ರಶಂಸೆ ಮಾಡಿದಳು.

೧೪೦. ಆಗ ಮಯನು, "ಇಗೋ ನಿನ್ನ ಮತ್ತೊರ್ವ ಪುತ್ರ ಸುಮುಂಡೀಕ ! ಇವನು ನಿನ್ನ ಮಗನ ಮಗನಾಗಿ ಹುಟ್ಟಿದ್ದಾನೆ. ಹೆಸರು ಸೂರ್ಯಪ್ರಭನೆಂದು.

೧೪೧. ದೇವಿ, ತ್ರಿಪುರಾರಿಯು ಇದೇ ಶರೀರದಲ್ಲಿರುವ ಇವನನ್ನು ಭಾವೀ ವಿದ್ಯಾಧರ ಚಕ್ರವರ್ತಿಯೆಂದು ನಿಶ್ಚಯಿಸಿದ್ದಾನೆ.'

೧೪೨. ಎಂದು ಮಯನು ಹೇಳಲು, ಆ ಮಾತು ಕಿವಿಗೆ ಬಿದ್ದೊಡನೆ ಆಕೆ ಉತ್ಸುಕತೆಯಿಂದ ಸೂರ್ಯಪ್ರಭನನ್ನು ನೋಡಿದಳು. ಸೂರ್ಯಪ್ರಭನು ತನ್ನ ಸಚಿವರೊಡನೆ ಆಕೆಯ ಕಾಲು ಮುಟ್ಟಿ ನಮಸ್ಕರಿಸಿದನು.

೧೪೩. 'ವತ್ಸ ಸುಮುಂಡೀಕದೇಹದಿಂದೇನು ? ಇದರಿಂದಲೇ ಸುಂದರನಾಗಿ ಕಾಣುತ್ತಿರುವೆ' ಎಂದು ಆಶೀರ್ವದಿಸಿ ಲೀಲಾವತಿಯು ಅವನನ್ನು ಮಾತನಾಡಿಸಿದಳು.

---

ನಾಮ್ನಾ ಲೀಲಾವತೀಂ ರೂಪೇಣಾಧಃಕೃತಸುರಾಂಗನಾಂ ।
ವೃತಾಮಸುರಕನ್ಯಾಭಿಃ ಸರ್ವಾಭರಣಭೂಷಿತಾಂ ॥ ೧೩೭
ಸಾ ದೃಷ್ಟ್ವೈವ ಸುನೀಥಂ ತಮುದತಿಷ್ಠತ್ಸಸಂಭ್ರಮಮ್ ।
ಸುನೀಥೋಽಪ್ಯಪತತ್ತಸ್ಯಾ ಅಭಿವಾದ್ಯೈವ ಪಾದಯೋಃ ॥ ೧೩೮
ತತಃ ಸಾ ತಂ ಚಿರಸ್ಪೃಷ್ಟಮಾಶ್ಲಿಷ್ಯೋದಶ್ರುರಾತ್ಮಜಮ್ ।
ಪುನಸ್ತತ್ಪ್ರಾಪ್ತಿಹೇತುಂ ತಂ ಪ್ರಶಶಂಸ ಮಯಂ ಪತಿಮ್ ॥ ೧೩೯
ಅಥಾಬ್ರವೀನ್ಮಯೋ ದೇವಿ ಸುಮುಂಡೀಕೋಽಪರಃ ಸ ತೇ ।
ಪುತ್ರಃ ಪುತ್ರೋಽಸ್ಯ ಪುತ್ರಸ್ಯ ಜಾತಃ ಸೂರ್ಯಪ್ರಭೋಽಪ್ಯಯಮ್ ॥ ೧೪೦
ಏಷ ವಿದ್ಯಾಧರೇಂದ್ರಾಣಾಂ ಚಕ್ರವರ್ತೀ ಪುರಾರಿಣಾ ।
ಏತೇನೈವ ಶರೀರೇಣ ಭಾವೀ ದೇವಿ ವಿನಿರ್ಮಿತಃ ॥ ೧೪೧
ತಚ್ಛ್ರುತ್ವೈವಾಭಿಪಶ್ಯಂತ್ಯಾಸ್ತಸ್ಯಾಃ ಸೋತ್ಸುಕಯಾ ದೃಶಾ ।
ಸೂರ್ಯಪ್ರಭಃ ಪಪಾತೈತ್ಯ ಪಾದಯೋಃ ಸಚಿವೈಃ ಸಹ ॥ ೧೪೨
ಕಿಂ ಸುಮುಂಡೀಕದೇಹೇನ ವತ್ಸೈತೇನೈವ ಶೋಭಸೇ ।
ಇತಿ ಲೀಲಾವತೀ ದತ್ವಾ ಚಾಶಿಷಂ ತಮಭಾಷತ ॥ ೧೪೩

೧೪೪. ಆಗ ಮಯಾಸುರನು ಪುತ್ರನನ್ನು ಮತ್ತೆ ಪಡೆದ ಸಂಭ್ರಮೋತ್ಸವ ಸಂದರ್ಭದಲ್ಲಿ ಮಗಳಾದ ಮಂಡೋದರಿಯನ್ನೂ ವಿಭೀಷಣನನ್ನೂ ಸ್ಮರಿಸಿಕೊಂಡನು. ನೆನೆದ ತಕ್ಷಣವೇ ಅವರಿಬ್ಬರೂ ಬಂದರು.

೧೪೫. ಸಂಭ್ರಮದ ಸತ್ಕಾರವನ್ನು ಸ್ವೀಕರಿಸಿದ ವಿಭೀಷಣನು ಮಯನಿಗೆ ಹೇಳಿದನು, "ದಾನವೇಂದ್ರ, ನನ್ನ ಮಾತಿನಂತೆ ನಡೆಯುವುದಾದರೆ ಒಂದು ವಿಚಾರವನ್ನು ಹೇಳುವೆ.

೧೪೬–೧೪೭. ದಾನವರಲ್ಲೆಲ್ಲ ನೀನೊಬ್ಬನೆ ಧನ್ಯನು. ಶುಭಜೀವನ ನಿನ್ನದು. ದೇವತೆಗಳೊಡನೆ ಅಕಾರಣವಾಗಿ ವೈರ ಕಟ್ಟಿಕೊಳ್ಳಬೇಡ. ಅವರೊಡನೆ ವಿರೋಧ ಮಾಡಿಕೊಳ್ಳುವುದರಿಂದ ಅಪಾಯ ಇದ್ದದ್ದೇ. ಒಳ್ಳೆಯದಂತೂ ಆಗುವುದಿಲ್ಲ. ಯುದ್ಧಗಳಲ್ಲಿ ಸುರರಿಂದ ಅಸುರರು ಹತರಾಗಿದ್ದಾರೆಯೇ ವಿನಾ ಇವರಿಂದ ಅವರಲ್ಲ.'

೧೪೮. ಅದನ್ನು ಕೇಳಿ ಮಯಾಸುರನು ಹೀಗೆಂದನು. "ನಾನೆಂದೂ ಬಲಾತ್ಕಾರದಿಂದ ಏನೂ ಮಾಡಿಲ್ಲ. ಇಂದ್ರನು ಹಟ ತೊಟ್ಟು ಯುದ್ಧಕ್ಕೆ ಬಂದರೆ ಹೇಗೆ ತಾನೆ ಸಹಿಸಲಿ ಹೇಳು ?

೧೪೯. ದೇವತೆಗಳಿಂದ ಹತರಾದ ಅಸುರರೆಲ್ಲ ತಪ್ಪಿತಸ್ಥರೇನೋ ನಿಜ. ಆದರೆ ಅಪರಾಧಿಗಳಲ್ಲದ ಬಲಿ ಮುಂತಾದ ದಾನವರನ್ನೂ ಅವರು ಮುಗಿಸಿಲ್ಲವೆ ?"

---

ತತ್ರೋಽತ್ರ ಪುತ್ರಾಭ್ಯುದಯೇ ಮಯೋ ಮಂದೋದರೀಂ ಸುತಾಮ್ ।
ವಿಭೀಷಣಂ ಚ ಸಸ್ಮಾರ ಸ್ಮೃತಾವಾಜಗ್ಮತುಶ್ಚ ತೌ ॥ ೧೪೪
ಗೃಹೀತೋತ್ಸವಸತ್ಕಾರಃ ಸ ತಂ ಪ್ರಾಹ ವಿಭೀಷಣಃ ।
ಕರೋಷಿ ಯದಿ ಮೇ ವಾಕ್ಯಂ ದಾನವೇಂದ್ರ ವದಾಮಿ ತತ್ ॥ ೧೪೫
ದಾನವೇಷು ತ್ವಮೇವೈಕಃ ಸುಕೃತೀ ಶುಭಜೀವತಃ ।
ದೇವೈಃ ಸಹ ನ ತೇ ಕಾರ್ಯಾ ತದಕಾರಣವೈರಿತಾ ॥ ೧೪೬
ತದ್ವಿರೋಧೇ ಹಿ ನಾಪಾಯಾದೃತೇ ಕಶ್ಚಿದ್ಗುಣೋಽಸ್ತಿ ವಃ ।
ನಿಹತಾ ಹಿ ಸುರೈಃ ಸಂಖ್ಯೇಷ್ವಸುರಾ ನಾಸುರೈಃ ಸುರಾಃ ॥ ೧೪೭
ತಚ್ಛ್ರುತ್ವಾ ತಂ ಮಯೋಽವೋಚನ್ನ ಬಲಾತ್ಕುರ್ಮಹೇ ವಯಮ್ ।
ಹಠಾತ್ಕುರ್ವತಿ ಶಕ್ರೇ ತು ಕಥಂ ಬ್ರೂಹಿ ಸಹಾಮಹೇ ॥ ೧೪೮
ಯೇ ಚಾಸುರಾ ಹತಾ ದೇವೈಸ್ತೇ ಬಭೂವುಃ ಪ್ರಮಾದಿನಃ ।
ಅಪ್ರಮತ್ತಾಸ್ತು ಕಿಂ ನೈವ ಬಲಿಪ್ರಭೃತಿಯೋ ಹತಾಃ ॥ ೧೪೯

೧೫೦. ಹೀಗೆಂದ ಮಯನಿಗೆ (ಉತ್ತರಿಸಲಾರದೆ) ಬರುವೆನೆಂದು ಹೇಳಿ ಮಂದೋದರಿಯನ್ನೂ ಆಮಂತ್ರಿಸಿ ವಿಭೀಷಣನು ತನ್ನ ವಸತಿಗೆ ಹೋದನು.

೧೫೧. ಬಳಿಕ ಸೂರ್ಯಪ್ರಭಾದಿಗಳೊಡನೆ ಸುನೀಥನನ್ನು ಕರೆದುಕೊಂಡು ಮಯಾಸುರನು ಮಹಾರಾಜನಾದ ಬಲಿಯನ್ನು ನೋಡಲು ಮೂರನೆಯ ಪಾತಾಲಲೋಕಕ್ಕೆ ಹೋದನು.

೧೫೨. ಸ್ವರ್ಗಕ್ಕಿಂತಲೂ ಮಿಗಿಲಾದ ಆ ಲೋಕದಲ್ಲಿ ಮುಕ್ತಾಹಾರಗಳಿಂದಲೂ ಕಿರೀಟದಿಂದಲೂ ಅಲಂಕೃತನಾದ, ದೈತ್ಯರಿಂದಲೂ ದಾನವರಿಂದಲೂ ಪರಿವೃತನಾದ ಬಲಿಯನ್ನು ನೋಡಿದರು.

೧೫೩. ಸುನೀಥಾದಿಗಳು ಕ್ರಮವಾಗಿ ದಾನವೇಂದ್ರನಿಗೆ ಪಾದಪ್ರಣಾಮ ಮಾಡಿದರು. ಆತನೂ ಅವರೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿದನು.

೧೫೪. ಮಯನು ಹೇಳಿದ ವೃತ್ತಾಂತದಿಂದ ಸಂತುಷ್ಟನಾದ ಬಲಿಯು ಪ್ರಹ್ಲಾದನನ್ನೂ ಇತರ ದಾನವರನ್ನೂ ಕರೆಕಳಿಸಿದನು.

೧೫೫. ಅವರನ್ನೂ ಸುನೀಥಾದಿಗಳು ನಮಸ್ಕರಿಸಿದರು. ಅವರೂ ಕೂಡ ಇವರನ್ನು ಕಂಡು ಆನಂದದಿಂದ ಅಭಿನಂದಿಸಿದರು.

೧೫೬. ಆಗ ರಾಜಾ ಬಲಿಯು, "ಭೂಮಿಯಲ್ಲಿ ಚಂದ್ರಪ್ರಭನಾಗಿ ಹುಟ್ಟಿದ್ದ ನಮ್ಮ ಸುನೀಥನು ತನ್ನ ದೇಹದಿಂದಲೇ ಮತ್ತೆ ಹುಟ್ಟಿಬಂದಿದ್ದಾನೆ.

---

ಇತ್ಯಾದ್ಯುಕ್ತೋ ಮಯೇನಾಥ ಮಂದೋದರ್ಯಾ ಸಹೈವ ಸಃ ।
ರಾಕ್ಷಸೇಂದ್ರಸ್ತಮಾಮಂತ್ರ್ಯ ಜಗಾಮ ವಸತಿಂ ನಿಜಾಮ್ ॥ ೧೫೦
ಸೂರ್ಯಪ್ರಭಾದಿಭಿರ್ಯುಕ್ತಂ ಸುನೀಥೋಽಥ ಮಯೇನ ಸಃ ।
ನಿನ್ಯೇ ತೃತೀಯಂ ಪಾತಾಲಂ ಬಲಿಂ ರಾಜಾನಮೀಕ್ಷಿತುಮ್ ॥ ೧೫೧
ಸ್ವರ್ಗಾದಪ್ಯಧಿಕೇ ತತ್ರ ಸರ್ವೇ ತೇ ದದೃಶುರ್ಬಲಿಮ್ ।
ಆಮುಕ್ತಹಾರಮುಕುಟಂ ವೃತಂ ದಿತಿಜದಾನವೈಃ ॥ ೧೫೨
ನಿಪೇತುಃ ಪಾದಯೋಸ್ತಸ್ಯ ಸುನೀಥಾದ್ಯಾಃ ಕ್ರಮೇಣ ತೇ ।
ಸೋಽಪಿ ತಾನ್ ಮಾನಯಾಮಾಸ ಸತ್ಕಾರೇಣ ಯಥೋಚಿತಮ್ ॥ ೧೫೩
ಮಯಾವೇದಿತವೃತ್ತಾಂತಹೃಷ್ಟಃ ಸೋಽತ್ರ ಬಲಿಸ್ತತಃ ।
ಪ್ರಹ್ಲಾದಮಾನಾಯಿತವಾನ್ ಶೀಘ್ರಮನ್ಯಾಂಶ್ಚ ದಾನವಾನ್ ॥ ೧೫೪
ತಾನಪ್ಯತ್ರ ಸುನೀಥಾದ್ಯಾಃ ಪಾದಯೋಸ್ತೇ ವವಂದಿರೇ ।
ತೇ ಚಾಪ್ಯಭಿನನಂದುಸ್ತಾನ್ ಪ್ರಾಪ್ತಾನಾನಂದನಿರ್ಭರಾಃ ॥ ೧೫೫
ಅಥಾತ್ರ ಬಲಿರಾಹ ಸ್ಮ ಭೂತ್ವಾ ಚಂದ್ರಪ್ರಭೋ ಭುವಿ ।
ಸುನೀಥಃ ಸ್ವತನುಪ್ರಾಪ್ತ್ಯಾ ಪ್ರತ್ಯುಜ್ಜೀವಿತ ಏಷ ನಃ ॥ ೧೫೬

೧೫೭. ಸುಮುಂಡೀಕಾವತಾರಿಯಾದ ಈ ಸೂರ್ಯಪ್ರಭನು ಈಶ್ವರನಿಂದ ಭಾವೀ ವಿದ್ಯಾಧರೇಶ್ವರನೆಂದು ನಿಯಮಿತನಾಗಿದ್ದಾನೆ.

೧೫೮. ಯಜ್ಞದ ಪ್ರಭಾವದಿಂದ ನಾನು ಬಲಹೀನನಾಗಿದ್ದೇನೆ. ಈಗ ಇವರಿಬ್ಬರನ್ನು ಪಡೆದಿರುವುದರಿಂದ ನಮ್ಮ ಏಳ್ಗೆಯಾಗುವುದು ನಿಶ್ಚಿತವಾಗಿದೆ.'

೧೫೯. ಬಲಿಯ ಮಾತನ್ನು ಕೇಳಿ ಅವನ ಗುರು ಶುಕ್ರಾಚಾರ್ಯನು ಇಂತೆಂದನು, "ಧರ್ಮಮಾರ್ಗದಿಂದ ಸತ್ಯದಲ್ಲಿ ಬದುಕುವವರಿಗೆ ಬೀಳೆಂಬುದಿಲ್ಲ.

೧೬೦. ಆದ್ದರಿಂದ ಧರ್ಮಾವಲಂಬಿಗಳಾಗಿರಿ, ಈಗಲೂ ನನ್ನ ಮಾತನ್ನು ಕೇಳಿರಿ.' ಆಗ ದಾನವರೆಲ್ಲ ಹಾಗೆಯೇ ಆಗಲೆಂದು ಮಾತು ಕೊಟ್ಟರು.

೧೬೧. ಅಲ್ಲಿ ಏಳು ಪಾತಾಳಲೋಕಗಳ ರಾಜರೂ ಸೇರಿದ್ದರಿಂದ, ಸುನೀಥನನ್ನು ಮತ್ತೆ ಪಡೆದ ಸಂತೋಷದಿಂದ ರಾಜಾ ಬಲಿಯು ಹಬ್ಬವನ್ನೇ ಆಚರಿಸಿದನು.

೧೬೨. ಆಗ ಅಲ್ಲಿಗೆ ಪುನಃ ನಾರದ ಮಹರ್ಷಿಯು ಬಂದನು. ಸತ್ಕಾರ ಸ್ವೀಕರಿಸಿ ಕುಳಿತ ಬಳಿಕ ದಾನವರನ್ನು ಉದ್ದೇಶಿಸಿ ಹೀಗೆಂದನು.

೧೬೩. "ಮಹೇಂದ್ರನು ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ಅವನು ನಿಮಗೆ ಈ ಮಾತನ್ನೂ ಹೇಳಿದ್ದಾನೆ. ಸುನೀಥನು ಬದುಕಿ ಬಂದಿರುವುದು ನನಗೆ ಬಹು ಸಂತೋಷವನ್ನುಂಟುಮಾಡಿದೆ.

---

ಸುಮುಂಡೀಕಾವತಾರಶ್ಚ ಪ್ರಾಪ್ತೋ ಸೂರ್ಯಪ್ರಭೋಽಪ್ಯಯಮ್ ।
ಶರ್ವೇಣ ಚಾಯಮಾದಿಷ್ಟೋ ಭಾವೀ ವಿದ್ಯಾಧರೇಶ್ವರಃ ॥ ೧೫೭

ಏತದ್ಯಜ್ಞಪ್ರಭಾವಾಚ್ಚ ಜಾತೋಽಹಂ ಶ್ಲಥಬಂಧನಃ ।
ತದೇತಾಭ್ಯಾಮವಾಪ್ತಾಭ್ಯಾಂ ಧ್ರುವಮಭ್ಯುದಯೋಽಸ್ತಿ ನಃ ॥ ೧೫೮

ಏತದ್ಬಲಿವಚಃ ಶ್ರುತ್ವಾ ಶುಕ್ರಃ ಪ್ರೋವಾಚ ತದ್ಗುರುಃ ।
ಧರ್ಮೇಣ ಚರತಾಂ ಸತ್ಯೇ ನಾಸ್ತ್ಯನಭ್ಯುದಯಃ ಕ್ವಚಿತ್ ॥ ೧೫೯

ತಸ್ಮಾದ್ಧರ್ಮೇಣ ವರ್ತಧ್ವಂ ಕುರುತಾದ್ಯಾಪಿ ಮದ್ವಚಃ ।
ತಚ್ಛ್ರುತ್ವಾ ದಾನವಾಸ್ತತ್ರ ತಥೇತಿ ನಿಯಮಂ ವ್ಯಧುಃ ॥ ೧೬೦

ಸಪ್ತಪಾತಾಲಪತಯೋ ಯೇ ತತ್ರ ಮಿಲಿತಾಸ್ತದಾ ।
ಬಲಿಶ್ಚಾತ್ರೋತ್ಸವಂ ಚಕ್ರೇ ಸುನೀಥಪ್ರಾಪ್ತಿಹರ್ಷತಃ ॥ ೧೬೧

ಅತ್ರಾಂತರೇ ಚ ತತ್ರಾಗಾತ್ಸ ಪುನರ್ನಾರದೋ ಮುನಿಃ ।
ಗೃಹೀತಾರ್ಘೋಪವಿಷ್ಟಶ್ಚ ದಾನವಾನ್ಸ್ತಾನುವಾಚ ಸಃ ॥ ೧೬೨

ಪ್ರೇಷಿತೋಽಹಮಿಹೇಂದ್ರೇಣ ಸ ಚೈವಂ ವಕ್ತಿ ವಃ ಕಿಲ ।
ಸುನೀಥಜೀವಿತಪ್ರಾಪ್ತ್ಯಾ ಸಂತೋಷಃ ಪರಮೋ ಮಮ ॥ ೧೬೩

೧೬೪. ನೀವು ಅಕಾರಣವಾಗಿ ಮತ್ತೆ ನನ್ನೊಡನೆ ವೈರ ಬೆಳೆಸಕೂಡದು. ನನ್ನ ಕಡೆಯ ಶ್ರುತಶರ್ಮನನ್ನೂ ವಿರೋಧಿಸಕೂಡದು.

೧೬೫. ಇಂದ್ರನ ಮಾತನ್ನು ನಿವೇದಿಸಿಕೊಂಡ ಮುನಿಯನ್ನು ಕುರಿತು ಪ್ರಹ್ಲಾದನು ಇಂತೆಂದನು, "ಸುನೀಥನು ಬದುಕಿದ್ದರಿಂದ ಇಂದ್ರನಿಗೆ ಏನು ಸಂತೋಷ ?

೧೬೬ ನಾವಂತೂ ಕಾರಣವಿಲ್ಲದೆ ವಿರೋಧಿಸುವವರಲ್ಲ. ಇಂದೇ ನಾವೆಲ್ಲರೂ ನಮ್ಮ ಗುರುವಿನ ಮುಂದೆ ಪ್ರಮಾಣ ಮಾಡಿದ್ದೇವೆ.

೧೬೭ ಶ್ರುತಶರ್ಮನು ಶತ್ರುಪಕ್ಷವನ್ನು ಸೇರಿ ಬಲಾಢ್ಯನಾಗಿ ನಮಗೆ ವಿರುದ್ಧವಾದುದನ್ನು ಮಾಡಿದರೆ ಇದರಲ್ಲಿ ನಮ್ಮ ತಪ್ಪೇನಿದೆ ?

೧೬೮–೧೬೯. ಈ ಮೊದಲೇ ನಮ್ಮ ಆರಾಧನೆಯಿಂದ ಸಂತುಷ್ಟನಾದ ಶಂಭುವು ಸೂರ್ಯಪ್ರಭನ ಪಕ್ಷವಹಿಸಿ ಅವನೇ (ವಿದ್ಯಾಧರ ಚಕ್ರವರ್ತಿಯೆಂದು) ಘೋಷಿಸಿದನು. ನಾವೇನು ಮಾಡೋಣ ? ಇದನ್ನು ಮತ್ತೆ ಮತ್ತೆ ಕೆದಕುವ ಶಕ್ರನೇ ಕಾರಣವಿಲ್ಲದೆ ವೈರ ಬೆಳೆಸುತ್ತಿದ್ದಾನೆ. ಅವನ ಮಾತೇ ಸರಿಯಾಗಿಲ್ಲ.'

೧೭೦. ದಾನವೇಂದ್ರನಾದ ಪ್ರಹ್ಲಾದನು ಹೀಗೆ ಹೇಳಲಾಗಿ ನಾರದ ಮಹರ್ಷಿಯು 'ಹೌದು' ಎನ್ನುತ್ತಾ ಇಂದ್ರನ್ನೇ ನಿಂದಿಸಿ ಅದೃಶ್ಯನಾದನು.

---

ತದಿದಾನೀಂ ನ ಕಾರ್ಯೋ ನಃ ಪುನರ್ವೈರಮಕಾರಣಮ್ ।
ವಿರೋದ್ಧವ್ಯಂ ನ ಚೈವಾಸ್ಮತ್ಪಕ್ಷೇಣ ಶ್ರುತಶರ್ಮಣಾ ॥ ೧೬೪
ಏವಮುಕ್ತೇಂದ್ರವಾಕ್ಯಂ ತಂ ಪ್ರಹ್ಲಾದೋ ಮುನಿಮಬ್ರವೀತ್ ।
ಸುನೀಥಜೀವಿತಾತ್ತುಷ್ಟಿರಿಂದ್ರಸ್ಯೇತಿ ಕಿಮನ್ಯಥಾ ॥ ೧೬೫
ಅಕಾರಣವಿರೋಧೀ ಚ ವಯಂ ತಾವನ್ನ ಕುರ್ಮಹೇ ।
ಅದ್ಯೈವ ನಿಯಮೋಽಸ್ಮಾಭಿಃ ಕೃತಃ ಸರ್ವೈರ್ಗುರೋಃ ಪುರಃ ॥ ೧೬೬
ಶ್ರುತಶರ್ಮಾ ಸಪಕ್ಷತ್ವಮಾಶ್ರಿತ್ಯ ಸ ಬಲಾದ್ಯದಿ ।
ಅಸ್ಮದ್ವಿರುದ್ಧಂ ಕುರುತೇ ಕಾಸ್ಮಾಕಂ ತತ್ರ ವಾಚ್ಯತಾ ॥ ೧೬೭
ಸೂರ್ಯಪ್ರಭಸ್ಯ ಪಕ್ಷೇಣ ದೇವದೇವೇನ ಶಂಭುನಾ ।
ಪ್ರಾಗೇವ ಹ್ಯಯಮಾದಿಷ್ಟಃ ಸ ಪೂರ್ವಾರಾಧಿತೋಽಸ್ಯ ಯತ್ ॥ ೧೬೮
ತದಸ್ಮಿನ್ನೀಶ್ವರಾದಿಷ್ಟೇ ಕಾರ್ಯೇ ಕಿಂ ಕುರ್ಮಹೇ ವಯಮ್ ।
ತನ್ನಿಷ್ಕಾರಣಮೇವೈತಚ್ಛಕ್ರೋ ವಕ್ತ್ಯಸಮಂಜಸಮ್ ॥ ೧೬೯
ಇತ್ಯುಕ್ತೋ ದಾನವೇಂದ್ರೇಣ ಪ್ರಹ್ಲಾದೇನ ಸ ನಾರದಃ ।
ತಥೇತಿ ವಾಸವಂ ನಿಂದನ್ನದರ್ಶನಮಗಾತ್ ಮುನಿಃ ॥ ೧೭೦

೧೭೧. ಆತನು ಹೋದನಂತರ ಶುಕ್ರನು ದಾನವರನ್ನು ಕುರಿತು ಇಂತೆಂದನು, "ಈ ಕಾರ್ಯದಲ್ಲಿ ಇಂದ್ರನಿಗೆ ವೈರವಿದ್ದಂತೆ ತೋರುತ್ತದೆ.

೧೭೨. ನಮಗೆ ಮಹೇಶ್ವರನ ಪ್ರಸಾದವು ಏಕ ಪ್ರಕಾರವಾಗಿರುವಾಗ, ಇಂದ್ರನ ಶಕ್ತಿಯಿಂದಾಗಲಿ, ಇವನಿಗಿರುವ ವಿಷ್ಣುವಿನ ಮೇಲಿನ ಆಸ್ಥೆಯಿಂದಾಗಲಿ ಏನೂ ಆಗದು.'

೧೭೩. ಶುಕ್ರಾಚಾರ್ಯನ ಈ ಮಾತನ್ನು ಕೇಳಿದ ದಾನವರೆಲ್ಲರೂ ಒಪ್ಪಿದರು. ಬಲಿಯನ್ನೂ ಪ್ರಹ್ಲಾದನನ್ನೂ ಬೀಳ್ಕೊಂಡು ತಮ್ಮ ತಮ್ಮ ಮನಗಳಿಗೆ ತೆರಳಿದರು.

೧೭೪. ನಂತರ ಪ್ರಹ್ಲಾದನು ತನ್ನ ಮನೆಯಾದ ಚತುರ್ಥಪಾತಾಲಕ್ಕೆ ಹೋದನು. ಆಗ ರಾಜಾ ಬಲಿಯು ಸಭೆಯಿಂದೆದ್ದು ಒಳನಡೆದನು.

೧೭೫. ಮಯಾಸುರನೂ, ಸುನೀಥನೂ, ಸೂರ್ಯಪ್ರಭಾದಿ ಸಕಲರೂ ಎದ್ದು ಬಲಿಗೆ ನಮಸ್ಕರಿಸಿ ತಮ್ಮ ಗೃಹಗಳ ಕಡೆಗೆ ನಡೆದರು.

೧೭೬. ತತ್ಕಾಲೋಚಿತವಾದ ಆಹಾರ ಪಾನೀಯಗಳಾದ ನಂತರ ತಾಯಿ ಲೀಲಾವತಿಯು ಸುನೀಥನ ಬಳಿಗೆ ಬಂದು ಹೀಗೆ ಹೇಳಿದಳು.

೧೭೭. "ಮಗನೇ, ಮಹಾತ್ಮರ ಮಕ್ಕಳಾದ ಇವರು ನಿನ್ನ ಹೆಂಡತಿಯರೆಂದು ತಿಳಿದಿದೆ ಯಲ್ಲವೆ ? ಈಕೆ ಧನೇಶನ ಮಗಳು ತೇಜಸ್ವತೀ, ತುಂಬುರುವಿನ ಮಗಳು ಮಂಗಳಾವತೀ,

---

ತಸ್ಮಿನ್ಗತೇ ದಾನವೇಂದ್ರಾನುಶನಾಸ್ತಾನಭಾಷತ ।
ವೈರಾನುಬಂಧಃ ಕಾರ್ಯೇಽಸ್ಮಿಂಸ್ತಾವದಿಂದ್ರಸ್ಯ ದೃಶ್ಯತೇ ॥ ೧೭೧
ಕಿಂತ್ವಸ್ಮಾಸು ಪ್ರಸಾದೈಕಬದ್ಧಕಕ್ಷ್ಯೇ ಮಹೇಶ್ವರೇ ।
ಕಾ ತಸ್ಯ ಶಕ್ತಿಃ ಕಿಂ ಕುರ್ಯಾದಾಸ್ಥಾ ವಾ ತಸ್ಯ ವೈಷ್ಣವೀ ॥ ೧೭೨
ಇತಿ ಶುಕ್ರವಚಃ ಶ್ರುತ್ವಾ ದಾನವಾಸ್ತೇಽನುಮನ್ಯ ಚ ।
ಸಹಪ್ರಹ್ಲಾದಮಾಮಂತ್ರ್ಯ ಬಲಿಂ ಜಗ್ಮುರ್ನಿಜಾಲಯಾನ್ ॥ ೧೭೩
ತತಃ ಚತುರ್ಥಂ ಪಾತಾಲಂ ಪ್ರಹ್ಲಾದೇ ಸ್ವಾಲಯಂ ಗತೇ ।
ಉತ್ಥಾಯ ಸದಸೋ ರಾಜಾ ವಿವೇಶಾಭ್ಯಂತರಂ ಬಲಿಃ ॥ ೧೭೪
ಮಯಃ ಸುನೀಥಶ್ಚಾನ್ಯೇ ಚ ಸರ್ವೇ ಸೂರ್ಯಪ್ರಭಾದಯಃ ।
ಪ್ರಣಮ್ಯ ಬಲಿಮಾಜಗ್ಮುಸ್ತದೇವ ಸ್ವಂ ನಿಕೇತನಮ್ ॥ ೧೭೫
ತತ್ರೋಚಿತಕೃತಾಹಾರಪಾನೇಷ್ವೇಷು ಸಮೇತ್ಯ ಸಾ ।
ಲೀಲಾವತೀ ಸುನೀಥಂ ತಂ ಜಗಾದ ಜನನೀ ನಿಜಾ ॥ ೧೭೬
ಪುತ್ರ ಜಾನಾಸಿ ಯದಿಮಂ ಭಾರ್ಯಾಸ್ತೇ ಮಹತಾಂ ಸುತಾಃ ।
ತೇಜಸ್ವತೀ ಧನೇಶಸ್ಯ ತುಂಬುರೋರ್ಮಂಗಲಾವತೀ ॥ ೧೭೭

೧೭೮–೧೭೯. ಚಂದ್ರಪ್ರಭ ಶರೀರದಲ್ಲಿದ್ದಾಗ ಮದುವೆಯಾದ ಪ್ರಭಾಸದ ವಸುರಾಜನ ಮಗಳು ಕೀರ್ತಿಮತಿ. ಈ ಮೂವರನ್ನೂ ನೀನು ಸಮನಾಗಿ ಕಾಣಬೇಕು' ಎಂದು ಹೇಳಿ ಆ ಮೂರು ಮುಖ್ಯ ಭಾರ್ಯೆಯರನ್ನು ಸುನೀಥನಿಗೆ ಸಮರ್ಪಿಸಿದಳು.

೧೮೦. ನಂತರ ಅಂದು ರಾತ್ರಿ ಸುನೀಥನು ಅವರಲ್ಲಿ ಹಿರಿಯಳಾದ ತೇಜಸ್ವತಿಯೊಡನೆ ಶಯ್ಯಾಗೃಹಕ್ಕೆ ಹೋದನು.

೧೮೧. ಬಹುಕಾಲದಿಂದ ಉತ್ಸುಕಳಾಗಿದ್ದ ಆಕೆಯೊಡನೆ ಸುನೀಥನು ಅಂದು ಅನುಭವಿಸಿದ ಸುಖವು ಹಿಂದೆ ಅನುಭವಿಸಿದ್ದೇ ಆದರೂ ಹೊಸದಾಗಿತ್ತು.

೧೮೨. ಸೂರ್ಯಪ್ರಭನು ಆ ರಾತ್ರಿ ಸಚಿವರೊಡನೆ ಮತ್ತೊಂದು ಮನೆಯಲ್ಲಿ ಒಂಟಿಯಾಗಿ ಮಲಗಿದನು.

೧೮೩. "ಪ್ರಿಯಪತ್ನಿಯರನ್ನು ಬಿಟ್ಟು ಒಬ್ಬಂಟಿಗಳಾಗಿ ಮಲಗಿದ್ದಾರಲ್ಲಾ ಪ್ರೀತಿಯಿಲ್ಲದ ಇವರಿಂದೇನು ?' ಎಂದೋ ಏನೋ, ನಿತ್ಯವೂ ಸ್ತ್ರೀಸಂಗ ಮಾಡುತ್ತಿದ್ದ ಅವರಲ್ಲಿ ಯಾರ ಬಳಿಯೂ ನಿದ್ರಾದೇವಿ ಸುಳಿಯಲೇ ಇಲ್ಲ.

೧೮೪. ಯಾವಾಗಲೂ ಕಾರ್ಯಚಿಂತನೆ ಮಾಡುವ ಪ್ರಹಸ್ತನ ಮೇಲಿನ ಈರ್ಷ್ಯೆಯಿಂದಲೋ ಎಂಬಂತೆ ನಿದ್ರೆ ಆತನ ಬಳಿ ಬರಲಿಲ್ಲ. ಉಳಿದವರು ಸ್ವಲ್ಪಹೊತ್ತಿನಲ್ಲಿ ಸೂರ್ಯಪ್ರಭನ ಸುತ್ತ ಮಲಗಿ ನಿದ್ರಿಸಿದರು.

---

ಚಂದ್ರಪ್ರಭಶರೀರೇಣ ಪರಿಣೀತಾ ಚ ಯಾ ತ್ವಯಾ ।
ಪ್ರಭಾಸಸ್ಯ ವಸೋರೇತಾಂ ವೇತ್ಸಿ ಕೀರ್ತಿಮತೀಂ ಸುತಾಂ ॥ ೧೭೮
ತಿಸ್ರಸ್ತದೇತಾ ದ್ರಷ್ಟವ್ಯಾಃ ಸಮದೃಷ್ಟ್ಯಾ ಸುತ ತ್ವಯಾ ।
ಇತ್ಯುಕ್ತ್ವಾ ಮುಖ್ಯಭಾರ್ಯಾಸ್ತಾಸ್ತಿಸ್ರೋಽಸ್ಮೈ ಸಾ ಸಮರ್ಪಯತ್ ॥ ೧೭೯
ತತಸ್ತಸ್ಮಿನ್ ದಿನೇ ರಾತ್ರೌ ಸುನೀಥೋ ಜ್ಯೇಷ್ಠಯಾ ತಯಾ ।
ತೇಜಸ್ವತ್ಯಾ ಸಮಂ ಶಯ್ಯಾವಾಸವೇಶ್ಮ ವಿವೇಶ ಸಃ ॥ ೧೮೦
ತತ್ರೋಪಭುಂಕ್ತೇ ಸ್ಮ ತಯಾ ಸುಚಿರೋತ್ಸುಕಯಾ ಸಹ ।
ರತಿಕ್ರೀಡಾಸುಖಂ ತತ್ತತ್ ಪ್ರಾಗ್ಭುಕ್ತಮಪಿ ನೂತನಮ್ ॥ ೧೮೧
ಸೂರ್ಯಪ್ರಭಸ್ತು ಸಚಿವೈಃ ಸಹವಾಸಗೃಹೇಽಪರೇ ।
ನಿಶಿ ತಸ್ಯಾಮಪತ್ನೀಕೋ ನ್ಯಷೀದಚ್ಛಯನೀಯಕೇ ॥ ೧೮೨
ನಿಃಸ್ನೇಹೇನ ಕಿಮೇತೇನ ಸ್ವಪ್ರಿಯಾಸ್ತ್ಯಜತಾ ಬಹಿಃ ।
ಇತೀವ ನಿದ್ರಾ ಸ್ತ್ರೀನಿತ್ಯಸ್ಯೈಕಸ್ಯಾಪ್ಯಸ್ಯ ನಾಯಯೌ ॥ ೧೮೩
ಪ್ರಹಸ್ತಸ್ಯ ಚ ಸೇರ್ಷ್ಯೇವ ಕಾರ್ಯಚಿಂತೈಕಸಂಗಿನಃ ।
ಅನ್ಯೇತು ಪರಿತಃ ಸೂರ್ಯಪ್ರಭಂ ನಿದ್ರಾಂ ಯಯುಃ ಸುಖಮ್ ॥ ೧೮೪

೧೮೫. ಅಷ್ಟರಲ್ಲಿ, ಅಪೂರ್ವ ಸುಂದರಿಯಾದ ಕನ್ಯೆಯೊಬ್ಬಳು ಸಖಿಯೊಡನೆ ಒಳಬರುತ್ತಿದ್ದುದನ್ನು ಸೂರ್ಯಪ್ರಭನೂ ಪ್ರಹಸ್ತನೂ ಕಂಡರು.

೧೮೬. 'ನಾನು ಮಾಡಿರುವ ಸುರಾಂಗನಾಸೃಷ್ಟಿಯು ಇವಳ ಮುಂದೆ ನೀರಸವಾಗಬಾರದು' ಎಂದು ಯೋಚಿಸಿದ ವಿಧಿಯು ಅವಳನ್ನು ಸೃಜಿಸಿದ ಬಳಿಕವೂ ಪಾತಾಳ ಲೋಕದಲ್ಲಿ ಇಟ್ಟನೋ ಎಂಬಂತೆ ಕಾಣುತ್ತಿದ್ದಳು.

೧೮೭. ಸೂರ್ಯಪ್ರಭನು ಇವಳು ಯಾರಿರಬಹುದೆಂದು ವಿಮರ್ಶಿಸುತ್ತಿರಲಾಗಿ, ಆಕೆ ಮಲಗಿದ್ದ ಅವನ ಸ್ನೇಹಿತರನ್ನೆಲ್ಲ ಒಬ್ಬೊಬ್ಬರನ್ನಾಗಿ ನೋಡಿದಳು.

೧೮೮. ಚಕ್ರವರ್ತಿ ಲಕ್ಷಣಗಳಿಲ್ಲದ ಅವರನ್ನು ಬಿಟ್ಟು, ಎಲ್ಲ ಲಕ್ಷಣಗಳಿಂದ ಕೂಡಿದ್ದ, ನಡುವೆ ಮಲಗಿದ್ದ ಸೂರ್ಯಪ್ರಭನ ಬಳಿಗೆ ಬಂದಳು.

೧೮೯. ಸಖಿಯನ್ನು ಕುರಿತು ಹೀಗೆಂದಳು, "ಈತನೇ ಅವನು; ಇವನ ಪಾದಸ್ಪರ್ಶ ಮಾಡು. ನೀರಿನಂತಹ ಶೀತಲವಾದ ಕೈಗಳಿಂದ ಇವನನ್ನು ಎಚ್ಚರಿಸು'

೧೯೦. ಅವಳ ಮಾತನ್ನು ಕೇಳಿದ ಸಖಿಯು ಹಾಗೆಯೇ ಮಾಡಿದಳು. ಸೂರ್ಯಪ್ರಭನು ನಿದ್ದೆಯ ನಟನೆಯನ್ನು ಬಿಟ್ಟು ಕಣ್ಣು ತೆರೆದನು.

೧೯೧. ಆ ಇಬ್ಬರು ಕನ್ಯೆಯರನ್ನೂ ನೋಡಿ, "ನೀವಾರು ? ಇಲ್ಲಿಗೆ ಏಕೆ ಬಂದಿದ್ದೀರಿ'? ಎಂದು ಕೇಳಿದಾಗ, ಸಖಿಯು ಹೇಳಿದಳು.

---

ತಾವತ್ ಸೂರ್ಯಪ್ರಭಃ ಸೋಽತ್ರ ಪ್ರಹಸ್ತಶ್ಚ ಸಖೀಯುತಾಮ್ ।
ಪ್ರವಿಶಂತೀಂ ದದೃಶತುರ್ವರಕನ್ಯಾಮನುತ್ತಮಾಮ್ ॥ ೧೮೫
ಮಾ ಭೂತ್ ಸುರಾಂಗನಾಸರ್ಗೋ ವಿಚ್ಛಾಯೋಽಸ್ಯಾಃ ಪುರೋ ಮಮ ।
ಇತ್ಯುತ್ಪಾದ್ಯಾಪಿ ವಿಧಿನಾ ಪಾತಾಲೇ ಸ್ಥಾಪಿತಾಮಿವ ॥ ೧೮೬
ಸೂರ್ಯಪ್ರಭಶ್ಚ ಕೇಯಂ ಸ್ಯಾದಿತಿ ಯಾವದ್ವಿಮರ್ಶತಿ ।
ತಾವತ್ಸಾ ತತ್ಸಖೀನೇತ್ಯ ಸುಪ್ತಾನೇಕೈಕಮೈಕ್ಷತ ॥ ೧೮೭
ಅಚಕ್ರವರ್ತಿಚಿಹ್ನಾಂಸ್ತಾನ್ಹಿತ್ವಾ ತಲ್ಲಕ್ಷಣಾನ್ವಿತಮ್ ।
ದೃಷ್ಟ್ವಾ ಸೂರ್ಯಪ್ರಭಂ ಸಾ ತಮುಪಾಗಾನ್ಮಧ್ಯಶಾಯಿನಮ್ ॥ ೧೮೮
ಉವಾಚ ಚ ಸಖೀಂ ಸೋಽಯಂ ಸಖಿ ತತ್ಸ್ಪೃಶ ಪಾದಯೋಃ ।
ಏತಂ ತೋಯಸುಶೀತಾಭ್ಯಾಂ ಕರಾಭ್ಯಾಂ ಪ್ರತಿಬೋಧಯ ॥ ೧೮೯
ತಚ್ಛ್ರುತ್ವಾ ತತ್ಸಖೀ ಸಾ ತತ್ತಥಾ ಚಕ್ರೇ ಸ ಚೇಕ್ಷಣೇ ।
ಸೂರ್ಯಪ್ರಭೋ ವ್ಯಾಜಸುಪ್ತಂ ವಿಹಾಯ ಪ್ರೋದಘಾಟಯತ್ ॥ ೧೯೦
ವೀಕ್ಷ್ಯ ಚೋವಾಚ ಕನ್ಯೇ ತೇ ಕೇ ಯುವಾಂ ಕಿಮಿಹಾಗಮಃ ।
ಭವತ್ಯೋರಿತಿ ತಚ್ಛ್ರುತ್ವಾ ತತ್ಸಖೀ ತಮಭಾಷತ ॥ ೧೯೧

೧೯೨. '''ದೇವ ! ಕೇಳು; ದ್ವಿತೀಯ ಪಾತಾಲದಲ್ಲಿ ಅಮೀಲನೆಂಬ ದೈತ್ಯೇಂದ್ರನಿದ್ದಾನೆ. ಅವನು ಪರಾಕ್ರಮಿಯೂ ಬಲಶಾಲಿಯೂ ಆದ ಹಿರಣ್ಯಾಕ್ಷನ ಪುತ್ರನು.

೧೯೩. ಅವನ ಪ್ರಾಣಕ್ಕಿಂತ ಪ್ರಿಯಳಾದ ಪುತ್ರಿ ಕಲಾವತಿಯೇ ಈಕೆ. ಇಂದು ಅಮೀಲನು ಬಲಿಯ ಬಳಿಗೆ ಹೋಗಿದ್ದವನು ಬಂದು ಹೀಗೆ ಹೇಳಿದನು.

೧೯೪. 'ನಮ್ಮ ಅದೃಷ್ಟದಿಂದ ಇಂದು ಸುನೀಥನು ಮತ್ತೆ ಜೀವ ಪಡೆದನು. ಆತನನ್ನು ನಾನು ಕಂಡೆ. ಸುಮುಂಡೀಕನ ಅವತಾರವಾದ ಯುವಕ ಸೂರ್ಯಪ್ರಭನನ್ನು ನೋಡಿದೆ

೧೯೫. ಹರನು ಈತನನ್ನು ಭಾವೀ ಖೇಚರ ಚಕ್ರವರ್ತಿಯೆಂದೇ ಸೃಜಿಸಿದ್ದಾನೆ. ಆ ಕಾರಣ ಸುನೀಥನಿಗೆ ಆನಂದದಿಂದ ಸನ್ಮಾನ ಮಾಡುತ್ತೇನೆ.

೧೯೬. ಮಗಳಾದ ಕಲಾವತಿಯನ್ನು ಸೂರ್ಯಪ್ರಭನಿಗೆ ಮದುವೆ ಮಾಡಿಕೊಡುವೆ. ಸುನೀಥನದು ನಮ್ಮದೂ ಒಂದೇ ಗೋತ್ರವಾದುದರಿಂದ ಅವನಿಗೆ ಮಗಳನ್ನು ಕೊಡಲಾಗುವುದಿಲ್ಲ.

೧೯೭. (ಸುನೀಥನು) ಚಂದ್ರಪ್ರಭನಾಗಿದ್ದಾಗ ಸೂರ್ಯಪ್ರಭನು ಅವನ ಮಗನಾಗಿ ಹುಟ್ಟಿದವನು. ಅಸುರ ಜನ್ಮದಲ್ಲಲ್ಲ. ಮಗನಿಗೆ ಮಾಡಿದ ಸಂಮಾನ ತಂದೆಗೆ ಮಾಡಿದಂತೆಯೆ ತಾನೆ ?'

---

ಶೃಣು ದೇವಾಸ್ತಿ ಪಾತಾಲೇ ದ್ವಿತೀಯೇಽಧಿಪತಿರ್ಜಯೀ ।
ಅಮೀಲ ಇತಿ ದೈತ್ಯೇಂದ್ರೋ ಹಿರಣ್ಯಾಕ್ಷಸುತೋ ಬಲೀ ॥ ೧೯೨
ಕಲಾವತೀತಿ ತಸ್ಯೈಷಾ ಪ್ರಾಣೇಭ್ಯೋಽಪ್ಯಧಿಕಾ ಸುತಾ ।
ಸ ಇತೋಽದ್ಯ ಬಲೇಃ ಪಾರ್ಶ್ವಾದಾಗತ್ಯೈತತ್ಪಿತಾಬ್ರವೀತ್ ॥ ೧೯೩
ದಿಷ್ಟ್ಯಾದ್ಯ ಜೀವಿತಂ ಪ್ರಾಪ್ತಃ ಸುನೀಥಃ ಪುನರೀಕ್ಷಿತಃ ।
ಸುಮುಂಡೀಕಾವತಾರಶ್ಚ ದೃಷ್ಟಃ ಸೂರ್ಯಪ್ರಭೋ ಯುವಾ ॥ ೧೯೪
ಸೃಷ್ಟಃ ಖೇಚರಸಚ್ಚಕ್ರವರ್ತೀ ಭಾವೀ ಹರೇಣ ಯಃ ।
ತದಿಹಾನಂದಸಂಮಾನಂ ಸುನೀಥಸ್ಯ ಕರೋಮ್ಯಹಮ್ ॥ ೧೯೫
ಸುತಾಂ ಸೂರ್ಯಪ್ರಭಾಯೈತಾಂ ಪ್ರಯಚ್ಛಾಮಿ ಕಲಾವತೀಮ್ ।
ಸುನೀಥಸ್ಯೈಕಗೋತ್ರತ್ವಾದ್ದಾತುಂ ಚೈಷಾ ನಯುಜ್ಯತೇ ॥ ೧೯೬
ಸೂರ್ಯಪ್ರಭಶ್ಚ ಪುತ್ರೋಽಸ್ಯ ರಾಜಜನ್ಮನಿ ನಾಸುರೇ ।
ತತ್ಸುತಸ್ಯ ಚ ಸಂಮಾನಃ ಕೃತಸ್ತಸ್ಯ ಕೃತೋ ಭವೇತ್ ॥ ೧೯೭

೧೯೮. ತಂದೆಯ ಈ ಮಾತನ್ನು ಕೇಳಿ ನಿನ್ನ ಗುಣಗಳಿಗೆ ಮಾರುಹೋದ ಈ ನನ್ನ ಗೆಳತಿ ನಿನ್ನನ್ನು ನೋಡುವ ಕುತೂಹಲದಿಂದ ಇಲ್ಲಿಗೆ ಬಂದಿದ್ದಾಳೆ."

೧೯೯. ಹೀಗೆ ಅವಳು ಹೇಳುತ್ತಿರುವಾಗ ಸೂರ್ಯಪ್ರಭನು ಅವಳ ಅಭಿಪ್ರಾಯವನ್ನು ತಿಳಿಯಲು ನಿದ್ದೆಯ ಸೋಗುಹಾಕಿದನು.

೨೦೦. ಆಗ ಆ ಕನ್ಯೆಯು ಎಚ್ಚರದಲ್ಲಿದ್ದ ಪ್ರಹಸ್ತನ ಬಳಿಗೆ ಮೆಲ್ಲಗೆ ಬಂದು ಸಖಿಯ ಮೂಲಕ ಎಲ್ಲವನ್ನೂ ತಿಳಿಸಿ ಹೊರನಡೆದಳು.

೨೦೧. ಪ್ರಹಸ್ತನು ಸೂರ್ಯಪ್ರಭನ ಬಳಿಗೆ ಬಂದು, "ದೇವ, ಎಚ್ಚರವಾಗಿರುವಿ ಯೇನು ?' ಎಂದಾಗ ಸೂರ್ಯಪ್ರಭನು ಕಣ್ಣುಬಿಟ್ಟು ಹೇಳಿದನು.

೨೦೨. "ಗೆಳೆಯ, ಎಚ್ಚರವಾಗಿಯೇ ಇರುವೆ. ಏಕಾಂಗಿಯಾದ ನನಗೆ ನಿದ್ದೆ ತಾನೆ ಹೇಗೆ ಬಂದೀತು ? ಒಂದು ವಿಶೇಷವನ್ನು ಹೇಳುತ್ತೇನೆ. ನಿನ್ನಿಂದ ಮುಚ್ಚಿಡಬೇಕಾದದ್ದು ನನಗೆ ಏನೂ ಇಲ್ಲ.

೨೦೩. ಇದೀಗ ತಾನೆ ತನ್ನ ಗೆಳತಿಯೊಡನೆ ಬಂದಿದ್ದ ಕನ್ಯೆಯೊಬ್ಬಳನ್ನು ನೋಡಿದೆ. ಬಹುಶಃ ಆಕೆಗೆ ಸರಿಸಮಾನಳು ಮೂರು ಲೋಕಗಳಲ್ಲಿ ಮತ್ತೋರ್ವಳು ಇರಲಾರಳು.

೨೦೪. ಒಂದೇ ಕ್ಷಣದಲ್ಲಿ ಅವಳು ನನ್ನ ಮನವನ್ನು ಕದ್ದು ಎಲ್ಲೋ ಹೊರಟುಹೋದಳು. ಅವಳು ಇಲ್ಲೇ ಎಲ್ಲೋ ಇರಬಹುದೇನೋ, ಸ್ವಲ್ಪ ಹುಡುಕಿ ನೋಡು'

---

ಏತತ್ ಪಿತುರ್ವಚಃ ಶ್ರುತ್ವಾ ತ್ವದ್ಗುಣಾಕೃಷ್ಟಮಾನಸಾ ।
ಮತ್ಸಖೀಯಮಿಹಾಯಾತಾ ತ್ವದ್ದರ್ಶನಕುತೂಹಲಾತ್ ॥ ೧೯೮
ಏವಂ ತಯೋಕ್ತೇ ತತ್ಸಖ್ಯಾ ನಿದ್ರಾತಿ ಸ್ಮ ಮೃಷೈವ ಸಃ ।
ತದಭಿಪ್ರಾಯತಾತ್ಪರ್ಯಂ ಜ್ಞಾತುಂ ಸೂರ್ಯಪ್ರಭಸ್ತದಾ ॥ ೧೯೯
ಸಾಥ ಕನ್ಯಾ ವಿನಿದ್ರಸ್ಯ ಪ್ರಹಸ್ತಸ್ಯಾಂತಿಕಂ ಶನೈಃ ।
ಗತ್ವಾ ಸಖೀಮುಖೇನೋಕ್ತ್ವಾ ಸರ್ವಮಸ್ಮೈ ಬಹಿರ್ಯಯೌ ॥ ೨೦೦
ಪ್ರಹಸ್ತಶ್ಚಾಪ್ಯುಪಾಗತ್ಯ ದೇವ ಜಾಗರ್ಷಿ ಕಿಂ ನ ವಾ ।
ಇತಿ ಸೂರ್ಯಪ್ರಭಂ ಸ್ಮಾಹ ಸ ಚೋನ್ಮಿಷ್ಯ ತಮಭ್ಯಧಾತ್ ॥ ೨೦೧
ಸಖೇ ಜಾಗರ್ಮಿ ನಿದ್ರಾ ಹಿ ಮಮಾಪ್ಯೇಕಾಕಿನಃ ಕುತಃ ।
ವಿಶೇಷಂ ತು ವದಾಮ್ಯೇವಂ ಶೃಣು ಗೋಪ್ಯಂ ಹಿ ಕಿಂ ತ್ವಯಿ ॥ ೨೦೨
ಅಧುನೈವ ಪ್ರವಿಷ್ಟೇಹ ಮಯಾ ದೃಷ್ಟಾ ಸಖೀಯುತಾ ।
ಕನ್ಯೈಕಾ ಸಮಾ ಯಸ್ಯಾಸ್ತ್ರೈಲೋಕ್ಯೇಽಪಿ ನ ದೃಶ್ಯತೇ ॥ ೨೦೩
ಕ್ಷಣೇನ ಚ ಗತಾ ಕ್ವಾಪಿ ಹೃತ್ವೈವ ಮಮ ಮಾನಸಮ್ ।
ತದ್ಗವೇಷಯ ಸದ್ಯಸ್ತಾಮಿಹೈವ ಕ್ವಚನ ಸ್ಥಿತಾಮ್ ॥ ೨೦೪

೨೦೫. ಎಂದು ಸೂರ್ಯಪ್ರಭನು ಹೇಳಿದಾಗ ಪ್ರಹಸ್ತನು ಹೊರಗೆ ಬಂದು ಸಖಿಯೊಡನೆ ಇದ್ದ ಕನ್ಯೆಯನ್ನು ನೋಡಿ ಮಾತನಾಡಿಸಿದನು.

೨೦೬. ""ನಿನ್ನ ಒತ್ತಾಯದಿಂದ ನಮ್ಮ ಒಡೆಯನನ್ನು ನಾನು ಎಚ್ಚರಗೊಳಿಸಿದೆ. ನೀನು ಈಗ ನನ್ನ ಒತ್ತಾಯದಿಂದ ಮತ್ತೊಮ್ಮೆ ಆತನಿಗೆ ದರ್ಶನ ನೀಡು.

೨೦೭. ಆತನ ರೂಪ ದಿಟವಾಗಿಯೂ ಕಣ್ಣುಗಳನ್ನು ಸಾರ್ಥಕಗೊಳಿಸುವಂಥಹುದು. ಒಂದೇ ಒಂದು ನೋಟದಿಂದ ಅವನನ್ನು ವಶೀಕರಿಸಿಕೊಂಡಿರುವ ಈ ನಿನ್ನ ರೂಪ ಸಿರಿಯನ್ನು ಆತನೂ ನೋಡಲಿ.

೨೦೮. ಎಚ್ಚರಗೊಂಡ ಆತನು ಮಾತನಾಡಿದ್ದು ನಿನ್ನ ವಿಚಾರವನ್ನೇ ಅಲ್ಲದೆ, 'ಹೇಗಾದರೂ ಮಾಡಿ ಆಕೆಯನ್ನು ಮತ್ತೊಮ್ಮೆ ನನಗೆ ತೋರಿಸು, ಇಲ್ಲಿಗೆ ಕರೆದುತಾ. ಇಲ್ಲದಿದ್ದರೆ ನಾನು ಬದುಕಲಾರೆ' ಎಂದಿದ್ದಾನೆ.

೨೦೯–೨೧೦. ಅದಕ್ಕಾಗಿಯೇ ನಾನಿಲ್ಲಿಗೆ ಬಂದದ್ದು. ಬಂದು ಈತನನ್ನು ನೋಡು" ಹೀಗೆಂದು ಪ್ರಹಸ್ತನು ಹೇಳಿದಾಗ ಆ ಕನ್ಯೆ ತುಂಬ ನಾಚಿಕೊಂಡವಳಾಗಿ ಮುಂದಡಿಯಿಡಲು ಅವಳಿಗೆ ಸಾಧ್ಯವಾಗದೆ ಮನದಲ್ಲಿಯೇ ಆಲೋಚಿಸುತ್ತಿರುವಾಗ, ಅವನೇ ಆಕೆಯ ಕೈ ಹಿಡಿದು ಸೂರ್ಯಪ್ರಭನ ಬಳಿಗೆ ಕರೆದೊಯ್ಯಬೇಕಾಯಿತು.

---

ಇತಿ ಸೂರ್ಯಪ್ರಭೇಣೋಕ್ತೇ ಪ್ರಹಸ್ತೋಽಥ ಬಹಿರ್ಗತಃ ।
ದೃಷ್ಟ್ವಾತ್ರ ತಾಂ ಸಮಂ ಸಖ್ಯಾ ಸ್ಥಿತಾಂ ಕನ್ಯಾಮಭಾಷತ ॥ ೨೦೫
ಮಯಾ ತ್ವದುಪರೋಧೇನ ಸ್ವಾಮ್ಯೇಷ ವಿಬೋಧಿತಃ ।
ತತ್ತ್ವಂ ಮದುಪರೋಧೇನ ಪುನರ್ದೇಹ್ಯಸ್ಯ ದರ್ಶನಮ್ ॥ ೨೦೬
ಪಶ್ಯಾಸ್ಯ ರೂಪಂ ಭೂಯೋಽಪಿ ಕೃತಾರ್ಥಕರಣಃ ದೃಶೋಃ ।
ತವ ಪಶ್ಯತು ಚೈಷೋಽಪಿ ದೃಷ್ಟಿಮಾತ್ರವಶೀಕೃತಃ ॥ ೨೦೭
ಪ್ರಬುದ್ಧೇನ ಹ್ಯನೇನಾಹಮುಕ್ತಃ ಕೃತ್ವಾ ಭವತ್ಕಥಾಮ್ ।
ಕುತೋಽಪಿ ದರ್ಶಯಾನೀಯ ತಾಂ ಮೇ ಪ್ರಾಣಿಮಿ ನಾನ್ಯಥಾ ॥ ೨೦೮
ತತೋಽಹಂ ತ್ವಾಮುಪಾಯಾತಸ್ತದೇಹ್ಯಾಲೋಕಯ ಸ್ವಯಮ್ ।
ಇತಿ ಪ್ರಹಸ್ತೇನೋಕ್ತಾ ಸಾ ಕನ್ಯಾಸುಲಭಯಾ ಹ್ರಿಯಾ ॥ ೨೦೯
ಪ್ರಸಹ್ಯ ನಾಶಕದ್ಗಂತುಂ ವಿಮೃಶಂತೀ ಯದಾ ತದಾ ।
ಹಸ್ತೇ ಗೃಹೀತ್ವಾನೀತಾಭೂತ್ತೇನ ಸೂರ್ಯಪ್ರಭಾಂತಿಕಮ್ ॥ ೨೧೦

೨೧೧. ತನ್ನ ಬಳಿಗೆ ಬಂದ ಕಲಾವತಿಯನ್ನು ಕಂಡು ಸೂರ್ಯಪ್ರಭನು, "ಚಂಡಿ, ನೀನು ಮಾಡಿದ್ದು ಸರಿಯೇ ?

೨೧೨. ನನ್ನ ಪಾಡಿಗೆ ನಾನು ಮಲಗಿದ್ದೆ. ಕಳ್ಳತನದಿಂದ ಬಂದು ನನ್ನ ಹೃದಯವನ್ನು ಕದ್ದಿದ್ದೀಯೆ. ಕಳ್ಳಿ! ಈಗ ನನ್ನ ಕೈಗೆ ಸಿಕ್ಕಿಬಿದ್ದಿರುವೆ, ನಿನ್ನನ್ನು ಶಿಕ್ಷಿಸದೆ ಬಿಡುವುದಿಲ್ಲ' ಎಂದನು.

೨೧೩. ಅವನ ಮಾತನ್ನು ಕೇಳಿ ಜಾಣೆಯಾದ ಅವಳ ಸಖಿಯು ಹೀಗೆಂದಳು, "ಇದನ್ನು ಮೊದಲೇ ತಿಳಿದ ಇವಳ ತಂದೆಯು ಈ ಕಳ್ಳಿಯನ್ನು ಬಂಧಿಸಲಿ ಎಂದು ನಿನಗೆ ಒಪ್ಪಿಸಲು ನಿಶ್ಚಯಿಸಿದ್ದಾನೆ

೨೧೪. ಆದ್ದರಿಂದ ಬೇಡ ಎನ್ನುವವರು ಯಾರೂ ಇಲ್ಲ. ಇವಳ ಕಳ್ಳತನದ ಅಪರಾಧಕ್ಕೆ ತಕ್ಕ ಬಂಧನದ ಶಾಸ್ತಿಯನ್ನು ಮಾಡಲಾರೆಯಾ ?'

೨೧೫. ಅದನ್ನು ಕೇಳಿ ಸೂರ್ಯಪ್ರಭನು ಅವಳನ್ನು ಆಲಿಂಗಿಸಲು ಮುಂದಾದಾಗ ನಾಚಿ ನೀರಾದ ಕಲಾವತಿಯು, "ಬೇಡ ಆರ್ಯಪುತ್ರ ! ನಾನಿನ್ನೂ, ಕನ್ಯೆ' (ವಿವಾಹ ಸಂಸ್ಕಾರವಾಗಿಲ್ಲ) ಎಂದಳು.

೨೧೬-೨೧೭ ಆಗ ಪ್ರಹಸ್ತನು ಆಕೆಯನ್ನು ಕುರಿತು, "ದೇವಿ, ನಿನ್ನ ಮನದಲ್ಲಿನ ಶಂಕೆಯನ್ನು ದೂರಮಾಡು. ಎಲ್ಲ ವಿಧದ ವಿವಾಹವಿಧಿಗಳಿಗಿಂತ ಗಾಂಧರ್ವ ವಿವಾಹವೇ ಉತ್ತಮವಾದುದು' ಎಂದು ಹೇಳಿ ಎಲ್ಲರೊಡನೆ ಹೊರ ಹೋಗಲಾಗಿ ಸೂರ್ಯಪ್ರಭನು ತತ್ಕಾಲದಲ್ಲೇ ಅವಳನ್ನು ಭಾರ್ಯೆಯೆಂದು ಸ್ವೀಕರಿಸಿದನು.

---

ಸೂರ್ಯಪ್ರಭಶ್ಚ ತಾಂ ದೃಷ್ಟ್ವಾ ಪಾರ್ಶ್ವಾಯಾತಾಂ ಕಲಾವತೀಮ್ ।
ಉವಾಚ ಚಂಡಿ ಯುಕ್ತಂ ತೇ ಕಿಮೇತದ್ಯದಿಹಾದ್ಯ ಮೇ ॥ ೨೧೧
ತ್ವಯಾ ಸುಪ್ತಸ್ಯ ಚೌರ್ಯೇಣ ಪ್ರವಿಶ್ಯ ಹೃದಯಂ ಹೃತಮ್ ।
ತದಿಹಾನಿಗೃಹೀತಾ ತ್ವಂ ಚೌರಿ ನ ತ್ಯಕ್ಷ್ಯಸೇ ಮಯಾ ॥ ೨೧೨
ಏತಚ್ಛ್ರುತ್ವಾ ವಿದಗ್ಧಾ ಸಾ ತತ್ಸಖೀ ವ್ಯಾಜಹಾರ ತಮ್ ।
ಪೂರ್ವಂ ಜ್ಞಾತ್ವೈವ ಪಿತ್ರೈವ ಚೌರೀಯಂ ನಿಗ್ರಹಾಯ ತೇ ॥ ೨೧೩
ನಿಶ್ಚಿತಾರ್ಪಯಿತುಂ ಯಸ್ಮಾತ್ತಸ್ಮಾತ್ಕಸ್ತೇ ನಿಷೇಧಕಃ ।
ಅಸ್ಯಾಶ್ಚೌರ್ಯೋಚಿತಂ ಕಾಮಂ ನಿಗ್ರಹಂ ನ ಕರೋಷಿ ಕಿಮ್ ॥ ೨೧೪
ತಚ್ಛ್ರುತ್ವಾಲಿಂಗಿತುಂ ಸೂರ್ಯಪ್ರಭೇ ವಾಂಛತಿ ಸತ್ರಪಾ ।
ಮಾ ಮಾರ್ಯ್ಯಾರ್ಯಪುತ್ರ ಕನ್ಯಾಸ್ಮೀತ್ಯವೋಚತ್ಸಾ ಕಲಾವತೀ ॥ ೨೧೫
ತತಃ ಪ್ರಹಸ್ತೋಽವಾದೀತ್ತಾಂ ಮಾ ವಿಕಲ್ಪೋಽಸ್ತು ದೇವಿ ತೇ ।
ಗಾಂಧರ್ವೋ ಹ್ಯೇಷ ಸರ್ವೇಷಾಂ ವಿವಾಹಾನಾಮಿಹೋತ್ತಮಃ ॥ ೨೧೬
ಇತ್ಯುಕ್ತ್ವೈವ ಸಮಂ ಸರ್ವೈಃ ಪ್ರಹಸ್ತೇ ನಿರ್ಗತೇ ಬಹಿಃ ।
ಸೂರ್ಯಪ್ರಭಸ್ತದೈವೈತಾಂ ಭಾರ್ಯಾಂ ಚಕ್ರೇ ಕಲಾವತೀಮ್ ॥ ೨೧೭

೨೧೮. ನಂತರ ಅವನು ಆ ಪಾತಾಲ ಲೋಕದ ಕನ್ಯೆಯೊಡನೆ ಮನುಜ ಮಾತ್ರರಿಗೆ ದುರ್ಲಭವಾದ, ಅಚಿಂತ್ಯವಾದ ನವಸಮಾಗಮ ಸುಖವನ್ನು ಅನುಭವಿಸಿದನು.

೨೧೯. ರಾತ್ರಿ ಕಳೆದಾಗ ಕಲಾವತಿಯು ತನ್ನ ಮನೆಗೆ ತೆರಳಿದಳು. ಸೂರ್ಯಪ್ರಭನು ಸುನೀಥ ಮತ್ತು ಮಯಾಸುರನ ಸಮೀಪಕ್ಕೆ ಹೋದನು.

೨೨೦. ಬಳಿಕ ಎಲ್ಲರೂ ಸೇರಿ ಪ್ರಹ್ಲಾದನ ಬಳಿಗೆ ಹೋದರು. ಸಭೆಯಲ್ಲಿದ್ದ ಆತನು ಎಲ್ಲರನ್ನೂ ಅವರವರಿಗೆ ಉಚಿತವಾದ ಸನ್ಮಾನ ಮಾಡಿದ ನಂತರ ಮಯನಿಗೆ ಹೇಳಿದನು.

೨೨೧. "ಸುನೀಥನ ಸಂಭ್ರಮದ ಈ ಸಂದರ್ಭದಲ್ಲಿ ಪ್ರಿಯವಾದುದನ್ನು ಏನಾದರೂ ನಾನು ಮಾಡಲೇ ಬೇಕು. ಇಂದು ನಾವೆಲ್ಲರೂ ಕಲೆತು ಊಟಮಾಡೋಣ'

೨೨೨. "ಆಗಬಹುದು, ನನ್ನದೇನೂ ಅಭ್ಯಂತರವಿಲ್ಲ' ಎಂದು ಮಯನು ಒಪ್ಪಿದ ನಂತರ ಪ್ರಹ್ಲಾದನು ದೂತರ ಮೂಲಕ ಎಲ್ಲ ಅಸುರ ಮುಖ್ಯರನ್ನೂ ಕರೆಕಳುಹಿದನು.

೨೨೩. ಕ್ರಮವಾಗಿ ಎಲ್ಲ ಪಾತಾಳಲೋಕಗಳಿಂದಲೂ ಅಸುರರು ಬಂದು ನೆರೆದರು. ಎಲ್ಲರಿಗಿಂತ ಮೊದಲು ಅಸಂಖ್ಯರಾದ ಮಹಾಸುರರೊಡನೆ ಬಲಿಯು ಬಂದು ಸೇರಿದನು.

---

ತಯಾ ಸಹ ಚ ಪಾತಾಲಕನ್ಯಯಾ ಮರ್ತ್ಯದುರ್ಲಭಮ್ ।
ಭೇಜೇ ಸುರತಸಂಭೋಗಮಚಿಂತ್ಯನವಸಂಗಮಮ್ ॥ ೨೧೮
ರಾತ್ರ್ಯಂತೇ ಚ ಕಲಾವತ್ಯಾಂ ಗತಾಯಾಂ ವಸತಿಂ ನಿಜಾಮ್ ।
ಸೂರ್ಯಪ್ರಭಃ ಸುನೀಥಸ್ಯ ಯಯೌ ಪಾರ್ಶ್ವಂ ಮಯಸ್ಯ ಚ ॥ ೨೧೯
ತೇ ಮಿಲಿತ್ವಾಥ ಸರ್ವೇಽಪಿ ಪ್ರಹ್ಲಾದಸ್ಯಾಂತಿಕಂ ಯಯುಃ ।
ಸ ತಾನ್ಯಥಾರ್ಹಂ ಸಂಮಾನ್ಯ ಸಭಾಸ್ಥೋ ಮಯಮಬ್ರವೀತ್ ॥ ೨೨೦
ಸುನೀಥಸ್ಯೋತ್ಸವೇಽಮುಷ್ಮಿನ್ ಪ್ರಿಯಂ ಕರ್ತವ್ಯಮೇವ ನಃ ।
ತದದ್ಯ ಯಾವತ್ಸರ್ವೇಽಪಿ ವಯಮೇಕತ್ರ ಭುಂಜ್ಮಹೇ ॥ ೨೨೧
ಏವಂ ಕುರ್ಮೋಽತ್ರ ಕೋ ದೋಷ ಇತ್ಯುಕ್ತೇ ಚ ಮಯೇನ ಸಃ ।
ದೂತೈರ್ನಿಮಂತ್ರಯಾಮಾಸ ಪ್ರಹ್ಲಾದೋಽತ್ರಾಸುರಾಧಿಪಾನ್ ॥ ೨೨೨
ಆಯಯುಶ್ಚಾತ್ರ ಸರ್ವೇಭ್ಯಃ ಪಾತಾಲೇಭ್ಯಃ ಕ್ರಮೇಣ ತೇ ।
ಪೂರ್ವಮಾಗಾದ್ಬಲೀ ರಾಜಾ ಮಹಾಸಂಖ್ಯೈಃ ಮಹಾಸುರೈಃ ॥ ೨೨೩

೨೨೪–೨೨೫. ಬಳಿಕ ಅಮೀಲನು ಬಂದನು, ನಂತರ ವೀರನಾದ ದುರಾರೋಹ, ಸುಮಾಯ, ತಂತುಕಚ್ಛ, ವಿಕಟಾಕ್ಷ, ಪ್ರಕಂಪನ, ಮಹಾಮಾಯ, ಧೂಮಕೇತು, ಮುಂತಾದ ಇನ್ನೂ ಅನೇಕ ಅಸುರೇಶ್ವರರು ತಮ್ಮ ತಮ್ಮ ಸಾವಿರಾರು ಸಾಮಂತರೊಡನೆ ಕೂಡಿ ಬಂದರು.

೨೨೬. ಪರಸ್ಪರ ವಂದನೆ ಮಾಡಿಕೊಂಡ ಅವರಿಂದ ಸಭೆಯು ತುಂಬಿಕೊಂಡಿತು. ಎಲ್ಲರೂ ಕ್ರಮವಾಗಿ ಕುಳಿತುಕೊಂಡ ನಂತರ ಪ್ರಹ್ಲಾದನು ಅವರನ್ನು ಗೌರವಿಸಿದನು.

೨೨೭. ಭೋಜನಕಾಲ ಬಂದಾಗ ಮಯ ಮುಂತಾದವರೊಡನೆ ಗಂಗಾಸ್ನಾನ ಮಾಡಿಕೊಂಡು ಭೋಜನ ಶಾಲೆಗೆ ಬಂದು ಸೇರಿದರು.

೨೨೮. ಆ ಮಹಾಸಭೆಯು ಶತಯೋಜನ ವಿಸ್ತೀರ್ಣವಾಗಿದ್ದಿತು. ಅದರಲ್ಲಿ ಸುವರ್ಣ, ರತ್ನಗಳಿಂದ ಮೆಟ್ಟಿದ ನೆಲವೂ, ರತ್ನಖಚಿತವಾದ ಸ್ತಂಭಗಳೂ ಇದ್ದು ವಿಚಿತ್ರವೂ ಸುಂದರವೂ ಆದ ಮಣಿಪಾತ್ರೆಗಳನ್ನು ಅಲ್ಲಲ್ಲಿ ಇಡಲಾಗಿತ್ತು.

೨೨೯–೨೩೦. ಅಲ್ಲಿ ಪ್ರಹ್ಲಾದನೊಡಗೂಡಿ ಮಯಾಸುರನೂ, ಸುನೀಥನೂ ಸಚಿವರೊಡನೆ ಇದ್ದ ಸೂರ್ಯಪ್ರಭನೂ, ಮಹಾಸುರರೂ ಭಕ್ಷ್ಯಭೋಜ್ಯಲೇಹ್ಯಾದಿ ಷಡ್ರಸೋಪೇತವಾದ, ನಾನಾವಿಧದ ರುಚಿಕರವಾದ, ದಿವ್ಯವಾದ ಆಹಾರವನ್ನು ಊಟಮಾಡಿ ಉತ್ತಮವಾದ ಪೇಯಗಳನ್ನು ಪಾನಮಾಡಿದರು.

---

ಅನಂತರಮಮೀಲಶ್ಚ ದುರಾರೋಹಶ್ಚ ವೀರ್ಯವಾನ್ ।
ಸುಮಾಯಸ್ತಂತುಕಚ್ಛಶ್ಚ ವಿಕಟಾಕ್ಷಃ ಪ್ರಕಂಪನಃ ॥ ೨೨೪
ಧೂಮಕೇತುರ್ಮಹಾಮಾಯೋ ಯೇ ಚಾನ್ಯೇಽಪ್ಯಸುರೇಶ್ವರಾಃ ।
ಏಕೈಕೋ ನಿಜಸಾಮಂತಸಹಸ್ರೇಣಾಯಯೌ ವೃತಃ ॥ ೨೨೫
ಆಪೂರ್ಯತ ಸಭಾ ತೈಶ್ಚ ವಿಹಿತಾನ್ಯೋನ್ಯವಂದನೈಃ ।
ಯಥಾಕ್ರಮೋಪವಿಷ್ಟಾಂಶ್ಚ ಪ್ರಹ್ಲಾದಸ್ತಾನಮಾನಯತ್ ॥ ೨೨೬
ಪ್ರಾಪ್ತೇ ಚಾಹಾರಕಾಲೇ ತೇ ಸರ್ವೇ ಸಹ ಮಯಾದಿಭಿಃ ।
ಗಂಗಾಸ್ನಾತಾಃ ಸಮಾಜಗ್ಮುರ್ಭೋಜನಾಯ ಮಹಾಸಭಾಮ್ ॥ ೨೨೭
ಶತಯೋಜನವಿಸ್ತೀರ್ಣಸುವರ್ಣಮಣಿಕುಟ್ಟಿಮಾಮ್ ।
ರತ್ನಸ್ತಂಭಚಿತಾಂ ನ್ಯಸ್ತವಿಚಿತ್ರಮಣಿಭಾಜನಾಮ್ ॥ ೨೨೮
ತತ್ರ ಪ್ರಹ್ಲಾದಸಹಿತಾಃ ಸಸುನೀಥಮಯಾಶ್ಚ ತೇ ।
ಸೂರ್ಯಪ್ರಭೇಣ ಸಚಿವೈರ್ಯುಕ್ತೇನ ಚ ಸಹಾಸುರಾಃ ॥ ೨೨೯
ತತ್ತನ್ನಾನಾವಿಧಂ ಭಕ್ಷ್ಯಭೋಜ್ಯಲೇಹ್ಯಾದಿ ಷಡ್ರಸಮ್ ।
ದಿವ್ಯಮನ್ನಂ ಬುಭುಜಿರೇ ಪಪುಃ ಪಾನಮಥೋತ್ತಮಮ್ ॥ ೨೩೦

೩೩೧. ತಿಂದುಕುಡಿದು ತೃಪ್ತಿಯಾದ ನಂತರ ಎಲ್ಲರೂ ರತ್ನಮಯವಾದ ಸಭೆಗೆ ಬಂದು ದೈತ್ಯದಾನವ ಕನ್ಯೆಯರು ಮಾಡಿದ ನೃತ್ಯವನ್ನು ನೋಡಿದರು.

೩೩೨. ನೃತ್ಯಾಂಗನೆಯರಲ್ಲಿ ತಂದೆಯಾದ ಪ್ರಹ್ಲಾದನ ಅಣತಿಯಂತೆ ನೃತ್ಯ ಮಾಡುತ್ತಿದ್ದ ಮಹಲ್ಲಿಕೆಯೆಂಬವಳನ್ನು ಸೂರ್ಯಪ್ರಭನು ನೋಡಿದನು.

೩೩೩ ತನ್ನ ಕಾಂತಿಯಿಂದ ದಿಕ್ಕುಗಳನ್ನೇ ಬೆಳಗುತ್ತಾ, ನೋಡುವ ದೃಷ್ಟಿಗೆ ಅಮೃತದ ವರ್ಷಧಾರೆಯನ್ನೇ ಸುರಿಸುತ್ತಾ ಇದ್ದ ಆಕೆ, ಪಾತಾಲಲೋಕವನ್ನು ಕಾಣುವ ಕುತೂಹಲದಿಂದ ಚಂದ್ರಲೇಖೆಯೇ ಮೂರ್ತಿವೆತ್ತು ಬಂದಂತೆ ಕಾಣುತ್ತಿದ್ದಳು.

೩೩೪. ಆಕೆಯ ಹಣೆಯಲ್ಲಿ ತಿಲಕವೂ, ಪಾದಗಳಲ್ಲಿ ನೂಪುರವೂ ಶೋಭಿಸುತ್ತಿತ್ತು. ನಗುಮೊಗದಿಂದ ಕೂಡಿದ ಆಕೆಯನ್ನು ನೃತ್ತಕ್ಕಾಗಿಯೇ ಬ್ರಹ್ಮನು ಸೃಷ್ಟಿ ಮಾಡಿದಂತೆ ತೋರುತ್ತಿತ್ತು.

೩೩೫ ಗುಂಗುರು ಕೂದಲಿನಿಂದಲೂ, ಚೂಪಾದ ಚಿಕ್ಕ (ಮೊಗ್ಗಿನಾಕಾರದ ಮುದ್ದಾದ) ದಂತಗಳಿಂದಲೂ ದುಂಡಾದ ಸ್ತನಗಳಿಂದಲೂ ಕೂಡಿದ ಅವಳು ನರ್ತಿಸುತ್ತಿದ್ದರೆ ಹೊಸದೊಂದು ನೃತ್ತಪ್ರಕಾರವೇ ಸೃಷ್ಟಿಯಾದಂತೆ ತೋರುತ್ತಿತ್ತು.

೩೩೬ ಸೂರ್ಯಪ್ರಭನು ಈಗಾಗಲೇ ಎಷ್ಟೋ ಜನ ವಿಲಾಸಿನಿಯರಿಗೆ ಮಾರುಹೋಗಿದ್ದರೂ ಸಮರ್ಥೆಯಾದ ಅವಳು ಅವನ ಕಣ್ಣಿಗೆ ಬಿದ್ದೊಡನೆ ಅವನ ಮನಸ್ಸನ್ನು ಒಮ್ಮೆಲೆ ಅಪಹರಿಸಿಬಿಟ್ಟಳು.

---

ಭುಕ್ತಪೀತಾಶ್ಚ ಗತ್ವಾನ್ಯತ್ಸರ್ವೇ ರತ್ನಮಯಂ ಸದಃ ।
ದೈತ್ಯದಾನವಕನ್ಯಾನಾಂ ದದೃಶುರ್ನೃತ್ತಮುತ್ತಮಮ್ ॥ ೩೩೧
ತತ್ಪ್ರಸಂಗೇ ದದರ್ಶಾತ್ರ ಪ್ರನೃತ್ತಾಂ ಪಿತುರಾಜ್ಞಯಾ ।
ಪ್ರಹ್ಲಾದಸ್ಯ ಸುತಾಂ ಸೂರ್ಯಪ್ರಭೋ ನಾಮ್ನಾ ಮಹಲ್ಲಿಕಾಮ್ ॥ ೩೩೨
ದ್ಯೋತಯಂತೀಂ ದಿಶಃ ಕಾಂತ್ಯಾ ವರ್ಷಂತೀಮಮೃತಂ ದೃಶೋಃ ।
ಕೌತುಕಾದಿವ ಪಾತಾಲಮಾಗತಾಂ ಮೂರ್ತಿಮೈಂದವೀಂ ॥ ೩೩೩
ಲಲಾಟತಿಲಕೋಪೇತಾಂ ಚಾರುನೂಪುರಪಾದಕಾಮ್ ।
ಸ್ಮೇರದೃಷ್ಟಿಂ ವಿಧಾತ್ರೈವ ಸೃಷ್ಟಾಂ ನೃತ್ತಮಯೀಮಿವ ॥ ೩೩೪
ಕೇಶೈರರಾಲೈರ್ದಶನೈಃ ಶಿಖರೈರ್ಬಿಭ್ರತೀಂ ಸ್ತನೌ ।
ಉರೋಮಂಡಲಿನೌ ನೃತ್ತಂ ಸೃಜತೀಮಿವ ನೂತನಮ್ ॥ ೩೩೫
ದೃಷ್ಟೈವ ಚ ತದಾ ಚಂಡೀ ತಸ್ಯ ಸೂರ್ಯಪ್ರಭಸ್ಯ ಸಾ ।
ಅಪಿ ಸ್ವೀಕೃತಮನ್ಯಾಭಿರ್ಜಹಾರ ಹೃದಯಂ ಹಠಾತ್ ॥ ೩೩೬

೩೩೭. ಹರನು ಕಾಮದೇವನನ್ನು ಸುಟ್ಟ ಮೇಲೆ ಬ್ರಹ್ಮದೇವನು ಮತ್ತೊರ್ವ ರತಿಪತಿಯನ್ನು ಸೃಜಿಸಿದ್ದನೋ ಎಂಬಂತಿದ್ದ, ಅಸುರೇಂದ್ರರ ನಡುವೆ ಇದ್ದ ಅವನನ್ನು ಅವಳು ದೂರದಿಂದಲೇ ಗಮನಿಸಿದಳು.

೩೩೮. ಅವನನ್ನು ನೋಡಿದೊಡನೆ ಅವಳ ಮನಸ್ಸು ಅವನಲ್ಲಿ ಹೇಗೆ ನಾಟಿತೆಂದರೆ ಆಕೆಯ ಆಂಗಿಕಾಭಿನಯವು ವಿಚಲಿತವಾಗಿ ಇವಳ ಅವಿನಯವನ್ನು ಕಂಡು ಅದಕ್ಕೆ ಕೋಪಬಂದಿತೋ ಎಂಬಂತೆ ಕಾಣುತ್ತಿತ್ತು.

೩೩೯. ಸಭಾಸದರಲ್ಲಿ ಯಾರೂ ಇವರಿಬ್ಬರ ನಡುವೆ ಉಂಟಾದ ಭಾವತೀವ್ರತೆಯನ್ನು ಗಮನಿಸಲಿಲ್ಲ. ಬದಲಾಗಿ ರಾಜಪುತ್ರಿಗೆ ಆಯಾಸವಾಗಿದೆ ಎಂದುಕೊಂಡು ನೃತ್ಯ ಕಾರ್ಯಕ್ರಮವನ್ನು ನಿಲ್ಲಿಸಿದರು.

೩೪೦. ಬಳಿಕ, ತಂದೆಯ ಅನುಮತಿಯನ್ನು ಪಡೆದು ದಾನವೇಂದ್ರರನ್ನು ವಂದಿಸಿ ಮಹಲ್ಲಿಕೆಯು ಸೂರ್ಯಪ್ರಭನನ್ನೇ ಕಡೆಗಣ್ಣಿನಿಂದ ನೋಡುತ್ತಾ, ಮನೆಗೆ ನಡೆದಳು.

೩೪೧. ನಂತರ, ಎಲ್ಲ ದಾನವ ವೀರರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಸೂರ್ಯಪ್ರಭನೂ ಸಂಜೆಯಹೊತ್ತಿಗೆ ತನ್ನ ಆವಾಸಕ್ಕೆ ಮರಳಿದನು.

೩೪೨. ರಾತ್ರಿ ಅಲ್ಲಿಗೆ ಬಂದ ಕಲಾವತಿಯೊಡನೆ ಒಳಮನೆಯಲ್ಲಿ ರಹಸ್ಯವಾಗಿ ಮಲಗಿದನು. ಅವನ ಅನುಚರರೆಲ್ಲ ಹೊರಗೆ ನಿದ್ರಿಸಿದರು.

---

ತತಃ ಸಾಪ್ಯಸುರೇಂದ್ರಾಣಾಂ ಮಧ್ಯೇ ದೂರಾದ್ದದರ್ಶ ತಮ್ ।
ಹರದಗ್ಧೇ ಸ್ಮರೇ ಸೃಷ್ಟಂ ಧಾತ್ರಾ ಪರಮಿವ ಸ್ಮರಮ್ ॥ ೩೩೭
ದೃಷ್ಟ್ವೈವ ತದ್ಗತಮನಾಸ್ತಥಾಭೂದಚಲದ್ಯಥಾ ।
ಆಂಗಿಕೋಽಭಿನಯೋಽಪ್ಯಸ್ಯಾ ದೃಷ್ಟ್ವೇವಾವಿನಯಂ ರುಷಾ ॥ ೩೩೮
ಸಭಾಸ್ಥಾಶ್ಚ ತಯೋರ್ಭಾವಂ ತಂ ದ್ವಯೋರಪ್ಯಲಕ್ಷಯನ್ ।
ಪ್ರೇಕ್ಷಣಂ ಚೋಪಸಂಜಹ್ರುಃ ಶ್ರಾಂತಾ ರಾಜಸುತೇತಿ ತೇ ॥ ೩೩೯
ತತಃ ಸೂರ್ಯಪ್ರಭಂ ತಿರ್ಯಕ್ ಪಶ್ಯಂತೀ ಸಾ ಮಹಲ್ಲಿಕಾ ।
ಪಿತ್ರಾ ವಿಸೃಷ್ಟಾ ವಂದಿತ್ವಾ ದಾನವೇಂದ್ರಾನಗಾದ್ಗೃಹಮ್ ॥ ೩೪೦
ದಾನವೇಂದ್ರಾಶ್ಚ ತೇ ಸರ್ವೇ ಯಥಾಸ್ವಮಗಮನ್‌ಗೃಹಾನ್ ।
ಸೂರ್ಯಪ್ರಭೋಽಪಿ ಸ್ವಾವಾಸಮಾಜಗಾಮ ದಿನಕ್ಷಯೇ ॥ ೩೪೧
ಪ್ರದೋಷೇ ಚ ಕಲಾವತ್ಯಾ ಪುನರಾಗತಯಾ ಸಹ ।
ಸುಷ್ವಾಪಾಭ್ಯಂತರೇ ಗುಪ್ತಂ ಬಹಿಃ ಸುಪ್ತಾಖಿಲಾನುಗಃ ॥ ೩೪೨

೨೪೩ ಅಷ್ಟರಲ್ಲಿ ಅವನನ್ನು ಕಾಣುವ ಹಂಬಲದಿಂದ ಮಹಲ್ಲಿಕೆಯೂ ಅವಳಿಗೆ ತುಂಬ ವಿಶ್ವಾಸಪಾತ್ರರಾದ ಇಬ್ಬರು ಗೆಳತಿಯರೊಡನೆ ಅಲ್ಲಿಗೆ ಬಂದಳು.

೨೪೪. ಅಷ್ಟರಲ್ಲಿ ಪ್ರಜ್ಞಾಢ್ಯನೆಂಬ ಸೂರ್ಯಪ್ರಭನ ಸಚಿವನು ಆ ಕ್ಷಣದಲ್ಲಿ ನಿದ್ದೆಯಿಂದ ಎಚ್ಚೆತ್ತವನಾಗಿ, ಒಳಮನೆಯೆಡೆಗೆ ಹೋಗುತ್ತಿದ್ದ ಅವಳನ್ನು ಕಂಡನು.

೨೪೫ ಅವಳನ್ನು ಗುರುತುಹಿಡಿದು ಎದ್ದು ನಿಂತ ಅವನು "ದೇವಿ! ಒಂದು ಕ್ಷಣ ನಿಲ್ಲು, ನಾನು ಒಳಗೆ ಹೋಗಿ ಬರುತ್ತೇನೆ', ಎಂದು ಹೇಳಿದನು.

೨೪೬ 'ನಮ್ಮನ್ನೇಕೆ ತಡೆಯುತ್ತಿದ್ದೀರಿ ?  ನೀವೇಕೆ ಹೊರಗಡೆ ?' ಎಂದು ಸಂದೇಹದಿಂದ ಕೇಳುತ್ತಿದ್ದ ಆಕೆಯನ್ನು ಕುರಿತು ಮತ್ತೆ ಪ್ರಜ್ಞಾಢ್ಯನು ಮತ್ತೆ  ಇಂತೆಂದನು.

೨೪೭ "ಹಾಯಾಗಿ ಮಲಗಿರುವವನ ಬಳಿಗೆ ಒಮ್ಮೆಲೆ ಏಕೆ ಹೋಗುತ್ತಿದ್ದೀರಿ?  ನಮ್ಮ ಪ್ರಭು ವ್ರತದಲ್ಲಿದ್ದಾನೆ, ಒಬ್ಬನೇ ಒಳಗಿದ್ದಾನೆ.'

೨೪೮. ಅವನ ಮಾತನ್ನು ಲೆಕ್ಕಕ್ಕಿಡದೆ ಆಕೆ "ಇರಲಿ ಒಳಗೆ ನಡೆ', ಎಂದು ಹೇಳಿದಾಗ, ಅವನು ಅವಳೊಡನೆ ತಾನೂ ಒಳ ಮನೆಗೆ ಬಂದನು.

೨೪೯. ಅಲ್ಲಿ ಕಲಾವತಿಯು ಮಲಗಿದ್ದನ್ನು ಕಂಡು ಸೂರ್ಯಪ್ರಭನನ್ನು ಎಬ್ಬಿಸಿ, ಮಹಲ್ಲಿಕೆ ಬಂದ ವಿಚಾರವನ್ನು ತಿಳಿಸಿದನು.

---

ತಾವನ್ ಮಹಲ್ಲಿಕಾ ಸಾಪಿ ತತ್ಸಂದರ್ಶನಸೋತ್ಸುಕಾ ।
ತತ್ರಾಯಯೌ ಸವಿಸ್ರಂಭವಯಸ್ಯಾದ್ವಯಸಂಗತಾ ॥ ೨೪೩

ಅಂತಃ ಪ್ರವೇಷ್ಟುಮಿಚ್ಛಂತೀಂ ಪ್ರಜ್ಞಾಢ್ಯಾಖ್ಯೋ ದದರ್ಶ ತಾಮ್ ।
ಸೂರ್ಯಪ್ರಭಸ್ಯ ಸಚಿವೋ ನಿದ್ರಯಾ ತತ್ಕ್ಷಣೋಜ್ಝಿತಃ ॥ ೨೪೪

ದೇವಿ ತಿಷ್ಠ ಕ್ಷಣಂ ಯಾವತ್ ಪ್ರವಿಶ್ಯಾಭ್ಯಂತರಾದಹಮ್ ।
ನಿರ್ಗಚ್ಛಾಮೀತಿ ಸ ಚ ತಾಂ ಪರಿಜ್ಞಾಯೋತ್ಥಿತೋಽಭ್ಯಧಾತ್ ॥ ೨೪೫

ರುದ್ಧಾಃಸ್ಮ ಕಿಂ ಬಹಿಃ ಕಸ್ಮಾದ್ಯೂಯಂ ಚೇತಿ ಸಶಂಕಯಾ ।
ತಯಾ ಪೃಷ್ಟಃ ಸ ಭೂಯೋಽಪಿ ಪ್ರಜ್ಞಾಢ್ಯೋ ನಿಜಗಾದ ತಾಮ್ ॥ ೨೪೬

ಸ್ವೈರಂ ಸುಪ್ತಸ್ಯ ಸಹಸೈವಾಂತಿಕಂ ಕಿಂ ಪ್ರವಿಶ್ಯತೇ ।
ಸುಪ್ತಶ್ಚಾಸ್ಮತ್ಪ್ರಭುರಸಾವೇಕೋ ವ್ರತವಶಾದಿತಿ ॥ ೨೪೭

ತತಸ್ತಯಾ ವಿಶಾಸ್ತ್ವೇವಮಿತ್ಯುಕ್ತಃ ಸವಿಲಕ್ಷಯಾ ।
ಪ್ರಹ್ಲಾದದೈತ್ಯಸುತಯಾ ಪ್ರಜ್ಞಾಢ್ಯೋಽಂತರ್ವಿವೇಶ ಸಃ ॥ ೨೪೮

ಸುಪ್ತಾಂ ಕಲಾವತೀಂ ದೃಷ್ಟ್ವಾ ತಸ್ಮೈ ಸೂರ್ಯಪ್ರಭಾಯ ಸಃ ।
ಪ್ರಬೋಧ್ಯ ಸ್ವೈರಮಾಚಖ್ಯಾವಾಗತಾಂ ತಾಂ ಮಹಲ್ಲಿಕಾಮ್ ॥ ೨೪೯

೨೫೦. ಸೂರ್ಯಪ್ರಭನು ಎಚ್ಚರಗೊಂಡು ಮೆಲ್ಲನೆ ಎದ್ದುಬಂದು ಇಬ್ಬರು ಸಖಿಯರೊಡನೆ ಇದ್ದ ಮಹಲ್ಲಿಕೆಯನ್ನು ಮಾತನಾಡಿಸಿದನು.

೨೫೧. "ನಾನಿಂದು ಕೃತಾರ್ಥನಾದೆ. ಇಲ್ಲಿ ಬಂದು ಆಸನವನ್ನು ಸ್ವೀಕರಿಸಬೇಕು. ಅದನ್ನೂ ಕೃತಾರ್ಥವನ್ನಾಗಿ ಮಾಡಬೇಕು' ಎಂದನು.

೨೫೨. ಆ ಮಾತನ್ನು ಕೇಳಿ ಮಹಲ್ಲಿಕೆಯು ಸಖಿಯರೊಡನೆ ಆಸನದಲ್ಲಿ ಕುಳಿತಳು. ನಂತರ ಸೂರ್ಯಪ್ರಭನೂ ಸಚಿವ ಪ್ರಜ್ಞಾಢ್ಯನೊಡನೆ ಆಸನವನ್ನು ಗ್ರಹಿಸಿದನು.

೨೫೩–೨೫೪. ಕುಳಿತ ಬಳಿಕ ಮಹಲ್ಲಿಕೆಯನ್ನು ಕುರಿತು ಇಂತೆಂದನು, "ತನ್ವಿ, ನೀನಿಂದು (ದಾನವ) ಸದಸ್ಸಿನಲ್ಲಿ ಯಾರಾದರೂ ನೋಡಿಯಾರೆಂದು ಕಾತರದಿಂದ ನನ್ನನ್ನು ನೋಡದಂತಿದ್ದರೂ ಎಲೈ ಲೋಲಾಕ್ಷಿ! ನೀನು ನಿನ್ನ ಸೌಂದರ್ಯದಿಂದಲೂ, ನಿನ್ನ ನೃತ್ಯದ ಸೊಗಸಿನಿಂದಲೂ ನನ್ನ ಕಣ್ಣುಗಳನ್ನು ಸಾರ್ಥಕವಾಗಿಸಿದೆ.'

೨೫೫–೨೫೬. ಅವನ ಮಾತನ್ನು ಕೇಳಿದ ಪ್ರಹ್ಲಾದ ಪುತ್ರಿ ಇಂತೆಂದಳು, "ಆರ್ಯಪುತ್ರ ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಯಾರಿಂದ ನನ್ನ ಅಭಿನಯ ಪಲ್ಲಟಗೊಂಡು, ಅದರಿಂದ ನಾನು ನಾಚಿಕೆ ಪಡುವಂತಾಯಿತೋ ಅವರದೇ ತಪ್ಪು. ಅದನ್ನು ಕೇಳಿ ಸೂರ್ಯಪ್ರಭನು ನಗುತ್ತಾ "ಸೋತೆ' ಎಂದು ಒಪ್ಪಿಕೊಂಡನು.

---

ಸೂರ್ಯಪ್ರಭಶ್ಚ ಬುದ್ಧ್ವಾ ತಚ್ಛನೈರುತ್ಥಾಯ ನಿರ್ಗತಃ ।
ದೃಷ್ಟ್ವಾ ಮಹಲ್ಲಿಕಾಮಾತ್ತತೃತೀಯಾಮಭ್ಯಭಾಷತ ॥ ೨೫೦
ನೀತಃ ಕೃತಾರ್ಥತಾಂ ತಾವದಯಮಭ್ಯಾಗತೋ ಜನಃ ।
ನೀಯತಾಂ ಸ್ಥಾನಮಪ್ಯೇತದಾಸನಂ ಪರಿಗೃಹ್ಯತಾಮ್ ॥ ೨೫೧
ತಚ್ಛ್ರುತ್ವೋಪವಿವೇಶಾಥ ಸಹಾನ್ಯಾಭ್ಯಾಂ ಮಹಲ್ಲಿಕಾ ।
ಸೂರ್ಯಪ್ರಭೋಽಪ್ಯುಪಾವಿಕ್ಷತ್ಸ ಪ್ರಜ್ಞಾಢ್ಯಯುತಸ್ತತಃ ॥ ೨೫೨
ಉಪವಿಶ್ಯ ಸ ಚೋವಾಚ ತನ್ವಿ ಯದ್ಯಪಿ ಮೇ ಕೃತಾ ।
ತ್ವಯಾವಜ್ಞಾ ಸದಸ್ಯನ್ಯಾ ಪ್ರೇಕ್ಷ್ಯಂತೇ ವರ್ಧಮಾನಯಾ ॥ ೨೫೩
ತಥಾಪಿ ತಾವಲ್ಲೋಲಾಕ್ಷಿ ದೃಷ್ಟಮಾತ್ರೇಣ ಮೇ ತವ ।
ಸೌಂದರ್ಯೇಣ ಚ ನೃತ್ತೇನ ಲೋಚನೇ ಸಫಲೀಕೃತೇ ॥ ೨೫೪
ಇತಿ ಸೂರ್ಯಪ್ರಭೇಣೋಕ್ತಾ ಸಾ ಪ್ರಹ್ಲಾದಸುತಾಬ್ರವೀತ್ ।
ನಾರ್ಯಪುತ್ರಾಪರಾಧೋಽಸೌ ಮಮ ಸೋಽತ್ರಾಪರಾಧ್ಯತಿ ॥ ೨೫೫
ಯೇನಾಹಂ ಸಂಸದಿ ಕೃತಾ ಭಗ್ನಾಭಿನಯಲಜ್ಜಿತಾ ।
ಏತಚ್ಛ್ರುತ್ವಾ ಜಿತೋಽಸ್ಮೀತಿ ಹಸನ್ ಸೂರ್ಯಪ್ರಭೋಽಬ್ರವೀತ್ ॥ ೨೫೬

೨೫೭. ಬಳಿಕ ರಾಜಪುತ್ರನು ಅವಳ ಕೈಹಿಡಿದನು. ಬಲಾತ್ಕಾರದಿಂದ ಹಿಡಿದದ್ದರಿಂದ ಹೆದರಿದಂತೆ ಆಕೆಯ ಕೈ ಸಣ್ಣಗೆ ನಡುಗುತ್ತಿತ್ತು. ಬೆವರಿನಿಂದ ಒದ್ದೆಯೂ ಆಗಿತ್ತು.

೨೫೮. ಆಗ, "ಆರ್ಯಪುತ್ರ, ಬಿಡು, ನಾನು ತಂದೆಯ ವಶದಲ್ಲಿರುವ ಕನ್ಯೆ' ಎಂದು ಹೇಳುತ್ತಿದ್ದ ಅಸುರೇಂದ್ರ ಕನ್ಯೆಯನ್ನು ಕುರಿತು ಪ್ರಜ್ಞಾಢ್ಯನು ಹೇಳಿದನು.

೨೫೯. 'ದೇವಿ, ಕನ್ಯೆಯರಿಗೆ ಗಾಂಧರ್ವ ವಿವಾಹ ವಿಧಿ ವಿಹಿತವಲ್ಲವೆ ? ನಿನ್ನ ಆಶಯವನ್ನು ತಿಳಿದ ತಂದೆ ಅನ್ಯರಿಗೆ ನಿನ್ನನ್ನು ಮದುವೆ ಮಾಡಿಕೊಡುವುದಿಲ್ಲ.

೨೬೦. ಈತನನ್ನು ನಿಶ್ಚಯವಾಗಿಯೂ ಅವನು ಗೌರವಿಸುತ್ತಾನೆ. ಭಯಪಡಬೇಡ. ಈ ನಿಮ್ಮ ಸಮಾಗಮ ವ್ಯರ್ಥವಾಗುವುದು ಬೇಡ.

೨೬೧. ಹೀಗೆ ಪ್ರಜ್ಞಾಢ್ಯನು ಮಹಲ್ಲಿಕೆಯನ್ನು ಕುರಿತು ಹೇಳುತ್ತಿರುವಾಗ ಒಳಗೆ ಕಲಾವತಿಯು ಎಚ್ಚರಗೊಂಡಳು.

೨೬೨. ಹಾಸಿಗೆಯಲ್ಲಿ ಸೂರ್ಯಪ್ರಭನನ್ನು ಕಾಣದೆ, ಸ್ವಲ್ಪಕಾಲ ಕಾದು, ಬರದೆ ಇದ್ದಾಗ ತಳಮಳಗೊಂಡು ಸಂಶಯದಿಂದ ತಾನೇ ಹೊರಬಂದಳು.

೨೬೩. ಮಹಲ್ಲಿಕೆಯೊಡನೆ ಇದ್ದ ತನ್ನ ಪ್ರಿಯವಲ್ಲಭನನ್ನು ಕಂಡು ಅವಳಿಗೆ ಒಮ್ಮೆಲೆ ಕೋಪ, ಲಜ್ಜೆ ಭಯ ಉಂಟಾದವು.

---

ಜಗ್ರಾಹ ಚ ಕರೇಣಾಸ್ಯಾಃ ಕರಂ ರಾಜಸುತೋಽಥ ಸಃ ।
ಬಲಾತ್ಕಾರಗ್ರಹಾದ್ಭೀತಮಿವ ಸಸ್ವೇದವೇಪಥುಮ್ ॥ ೨೫೭
ಮುಂಚಾರ್ಯಪುತ್ರ ಕನ್ಯಾಹಂ ಪಿತೃವಶ್ಯೇತಿ ವಾದಿನೀಮ್ ।
ತತೋಽಸುರೇಂದ್ರತನಯಾಂ ಪ್ರಜ್ಞಾಢ್ಯಸ್ತಾಮುವಾಚ ಸಃ ॥ ೨೫೮
ಕನ್ಯಾನಾಂ ಕಿಂ ನ ಗಾಂಧರ್ವೋ ವಿವಾಹೋ ದೇವಿ ವಿದ್ಯತೇ ।
ನ ಚ ಪ್ರದಾಸ್ಯತ್ಯನ್ಯಸ್ಮೈ ಪಿತಾ ತ್ವಾಂ ಲಕ್ಷಿತಾಶಯಃ ॥ ೨೫೯
ಏತಸ್ಯ ಚಾತ್ರ ಸಂಮಾನಂ ನಿಶ್ಚಿತಂ ಸ ಕರಿಷ್ಯತಿ ।
ತದಲಂ ಸಾಧ್ವಸೇನೇದೃಗ್ವೃಥಾ ಮಾಭೂತ್ ಸಮಾಗಮಃ ॥ ೨೬೦
ಏವಂ ಮಹಲ್ಲಿಕಾಂ ಯಾವತ್ ಪ್ರಜ್ಞಾಢ್ಯಸ್ತಾಂ ಬ್ರವೀತಿ ಸಃ ।
ತಾವತ್ಸಾಭ್ಯಂತರೇ ತತ್ರ ಪ್ರಬುದ್ಧಾಭೂತ್ ಕಲಾವತೀ ॥ ೨೬೧
ಅಪಶ್ಯಂತೀ ಚ ತಂ ಸೂರ್ಯಪ್ರಭಂ ಸಾ ಶಯನೀಯಕೇ ।
ಪ್ರತೀಕ್ಷ್ಯ ಕಿಂಚಿದುದ್ವಿಗ್ನಶಂಕಿತಾ ನಿರಗಾದ್ಬಹಿಃ ॥ ೨೬೨
ದೃಷ್ಟ್ವಾ ಮಹಲ್ಲಿಕೋಪೇತಂ ತಂ ಚಾತ್ರ ನಿಜವಲ್ಲಭಮ್ ।
ಸಕೋಪಾ ಚ ಸಲಜ್ಜಾ ಚ ಸಭಯಾ ಚ ಬಭೂವ ಸಾ ॥ ೨೬೩

೨೬೪. ಮಹಲ್ಲಿಕೆಯು ಅವಳನ್ನು ಕಂಡು ಭಯ ನಾಚಿಕೆಯಿಂದ ಕಂಪಿಸಿದಳು. ಸೂರ್ಯಪ್ರಭನಾದರೋ ಸ್ಪಂದನೆಯೇ ಇಲ್ಲದೆ ಚಿತ್ರದಲ್ಲಿ ಬರೆದಂತೆ ನಿಶ್ಚಲನಾಗಿದ್ದನು.

೨೬೫. "ಇವಳು ನನ್ನನ್ನು ನೋಡಿದ್ದಾಯಿತು. ಇನ್ನು ಓಡಿ ಹೋಗುವುದು ಹೇಗೆ ? ನಾಚಿಕೊಳ್ಳುವುದಾಗಲಿ, ಈರ್ಷ್ಯೆಗೊಳ್ಳುವುದಾಗಲಿ ಸಲ್ಲ' , ಎಂದುಕೊಂಡು ಕಲಾವತಿಯು ಸೂರ್ಯಪ್ರಭನ ಪಕ್ಕದಲ್ಲಿಯೇ ಹೋಗಿನಿಂತಳು.

೨೬೬. ಆಗ ಕಲಾವತಿಯು, ಮಹಲ್ಲಿಕೆಯನ್ನು ಕುರಿತು, "ಸಖಿ ಕುಶಲವೆ ? ಇಂತಹ ನಟ್ಟಿರುಳಿನಲ್ಲಿ ಇಲ್ಲೇಕೆ ಬಂದೆ ?' ಎಂದು ಅಸೂಯೆಯಿಂದಲೇ ಕೇಳಿದಳು.

೨೬೭. ಆಗ ಮಹಲ್ಲಿಕೆ ಹೇಳಿದಳು, "ಇದು ನನ್ನ ಮನೆ! ನೀನು ಬೇರೆ ಪಾತಾಳಗೃಹದಿಂದ ಇಲ್ಲಿಗೆ ಬಂದವಳು. ನೀನೇ ಆಗಂತುಕಳು.' (ನೀನು ಕೇಳಿದ ಪ್ರಶ್ನೆಯನ್ನು ನಾನು ನಿನಗೆ ಕೇಳಬೇಕು!).

೨೬೮–೨೬೯. ಅದನ್ನು ಕೇಳಿ ಕಲಾವತಿಯು ನಕ್ಕು, "ನಿಜವೇ, ನೀನು ಇಲ್ಲಿಗೆ ಬಂದ ಅತಿಥಿಗಳಿಗೆಲ್ಲ ಮಾಡಬೇಕಾದ ಸತ್ಕಾರವನ್ನು ಮಾಡುತ್ತಲಿರುವೆ ಎಂದು ಕಾಣುತ್ತಿದೆ' ಎನ್ನಲು, ಮಹಲ್ಲಿಕೆ ಇಂತೆಂದಳು.

---

ಮಹಲ್ಲಿಕಾಪಿ ದೃಷ್ಟ್ವೈವ ತಾಮಾಸೀತ್ಭೀತಲಜ್ಜಿತಾ ।
ಸೂರ್ಯಪ್ರಭಶ್ಚ ನಿಃಸ್ಪಂದಸ್ತಸ್ಥಾವಾಲಿಖಿತೋ ಯಥಾ ॥ ೨೬೪
ದೃಷ್ಟಾ ಕಥಂ ಪಲಾಯೇಽಹಂ ಜಿಹ್ರೇಮೀರ್ಷ್ಯಾಮಿ ವಾ ಯದಿ ।
ಇತಿ ತತ್ಪಾರ್ಶ್ವಮೇವಾಗಾತ್ ಕಲಾವತ್ಯಪಿ ಸಾ ತತಃ ॥ ೨೬೫
ಕುಶಲಂ ಸಖಿ ಕುತ್ರ ತ್ವಮಾಗತೈವಮಿತೋ ನಿಶಿ ।
ಏವಂ ಮಹಲ್ಲಿಕಾಂ ತಾಂ ಚ ಸಾಭ್ಯಸೂಯಮುವಾಚ ಸಾ ॥ ೨೬೬
ತತೋ ಮಹಲ್ಲಿಕಾಪ್ಯೋಚನ್ಮಮೈತದ್ಗೃಹಮತ್ರ ತು ।
ತ್ವಮನ್ಯಪಾತಾಲಗೃಹಾತ್ ಪ್ರಾಪ್ತಾ ಪ್ರಾಘುಣಿಕಾದ್ಯ ಮೇ ॥ ೨೬೭
ತಚ್ಛ್ರುತ್ವಾ ಸಾ ವಿಹಸ್ಯೈತಾಂ ಕಲಾವತ್ಯೇವಮಬ್ರವೀತ್ ।
ಸತ್ಯಂ ದೃಶ್ಯತ ಏವೇದಂ ಯತ್ತ್ವಂ ಸರ್ವಸ್ಯ ಕಸ್ಯಚಿತ್ ॥ ೨೬೮
ಕರೋಷೀಹಾಗತಸ್ಯೈವ ಪ್ರಾಘುಣಾತಿಥ್ಯಸತ್ಕ್ರಿಯಾಮ್ ।
ಏವಮುಕ್ತೇ ಕಲಾವತ್ಯಾ ಸಾ ಜಗಾದ ಮಹಲ್ಲಿಕಾ ॥ ೨೬೯

೨೭೦. ನಾನು ಸ್ನೇಹದಿಂದ ಮಾತನಾಡಿಸಿದರೆ ನೀನು ದ್ವೇಷನಿಷ್ಠುರವಾದ ಮಾತನ್ನಾಡುವೆಯಲ್ಲ ! ನಾಚಿಕೆಗೆಟ್ಟವಳೇ, ನಾನೇನು ನಿನ್ನಂತೆ ಎಂದುಕೊಂಡೆಯಾ ?

೨೭೧. ಬಾಂಧವರ ಸಮ್ಮುಖದಲ್ಲಿ ಮದುವೆಯಾಗದೆ ನಿನ್ನಂತೆ ದೂರದಿಂದ ಬಂದು ಪರಸ್ಥಳದಲ್ಲಿ, ಪರಪುರುಷನ ಹಾಸಿಗೆಯಲ್ಲಿ ರಾತ್ರಿ ಗುಟ್ಟಾಗಿ ಮಲಗಿರುವೆನೆ ?

೨೭೨. ನನ್ನ ತಂದೆಯ ಅತಿಥಿಯನ್ನು ನನ್ನದೇ ಮನೆಯಲ್ಲಿ ನೋಡಲು ಬಂದಿರುವೆ. ಆತಿಥ್ಯವನ್ನೆಸಗಲು ಸಖಿಯರಿಬ್ಬರನ್ನು ಕರೆತಂದಿರುವೆ.

೨೭೩. ನಮ್ಮನ್ನು ಮೊದಲು ವಂಚಿಸಿ ಈ ಮಂತ್ರಿಯು ಒಳಗೆ ಹೋದಾಗಲೇ ನನಗೆ ಸಂಶಯ ಮೂಡಿತು. ನೀನೇ ಅದನ್ನು ಸ್ಪಷ್ಟಗೊಳಿಸಿದ್ದೀಯೆ!'

೨೭೪. ಮಹಲ್ಲಿಕೆಯು ಹೀಗೆ ಹೇಳಿದ್ದನ್ನು ಕೇಳಿ ಕಲಾವತಿಯು ಕೋಪದಿಂದ ಕೆಂಪಾದ ಕಣ್ಣುಗಳಿಂದ ಪ್ರಿಯನನ್ನೇ ವಕ್ರದೃಷ್ಟಿಯಿಂದ ನೋಡುತ್ತಾ ಹೋದಳು.

೨೭೫. ಬಳಿಕ ಮಹಲ್ಲಿಕೆಯು ಸೂರ್ಯಪ್ರಭನನ್ನು ಕುರಿತು, "ಬಹುವಲ್ಲಭನೇ! ನಾನೂ ಹೊರಟೆ, ಎಂದು ಹೇಳಿ ರೋಷದಿಂದ ಬಿರಬಿರನೆ ಹೊರ ನಡೆದಳು.

---

ಯದಿ ಪ್ರೀತ್ಯಾ ಮಯೋಕ್ತಾ ತ್ವಂ ತತ್ಕಿಂ ಸದ್ವೇಷನಿಷ್ಠುರಮ್ ।
ಏವಂ ವದಸಿ ನಿರ್ಲಜ್ಜೇ ಕಿಮಹಂ ಸದೃಶೀ ತವ ॥ ೨೭೦
ಕಿಮಹಂ ಬಾಂಧವಾದತ್ತಾ ದೂರಾದೇತ್ಯ ಪರಸ್ಥಲೇ ।
ಪರಸ್ಯ ಶಯನೇ ಸುಪ್ತಾ ರಹಸ್ಯೇಕಾಕಿನೀ ನಿಶಿ ॥ ೨೭೧
ಅಹಂ ಪಿತುಃ ಪ್ರಾಘುಣಿಕಂ ಸ್ವಸ್ಥಾನೇ ದ್ರಷ್ಟುಮಾಗತಾ ।
ಆತಿಥ್ಯೇನಾಧುನೈವೈಷಾ ಸಖೀದ್ವಿತಯಸಂಗತಾ ॥ ೨೭೨
ಯದಾಸ್ಮಾನ್ ವಿಪ್ರಲಭ್ಯಾದಾವಸೌ ಮಂತ್ರೀ ಪ್ರವಿಷ್ಟವಾನ್ ।
ತದೈವೈತನ್ಮಯಾ ಜ್ಞಾತಂ ತ್ವಯಾ ವ್ಯಕ್ತೀಕೃತಂ ಸ್ವತಃ ॥ ೨೭೩
ಏವಂ ಮಹಲ್ಲಿಕೋಕ್ತಾ ಸಾ ಕಲಾವತ್ಯಗಮತ್ತತಃ ।
ತಿರ್ಯಕ್ಕೋಪಕಷಾಯೇಣ ಪಶ್ಯಂತೀ ಚಕ್ಷುಷಾ ಪ್ರಿಯಮ್ ॥ ೨೭೪
ತತೋ ಮಹಲ್ಲಿಕಾ ಸಾಪಿ ಬಹುವಲ್ಲಭ ಯಾಮ್ಯಹಮ್ ।
ಸಂಪ್ರತೀತಿ ರುಷಾ ಸೂರ್ಯಪ್ರಭಮುಕ್ತ್ವಾ ತತೋ ಯಯೌ ॥ ೨೭೫

೨೭೬. ಸೂರ್ಯಪ್ರಭನೂ ಮೊದಲು ಇದರಿಂದ ಬೇಸರಗೊಂಡರೂ, ಇಬ್ಬರು ಕಾಂತೆಯರಲ್ಲೂ ಸಮನಾಗಿ ಅವನ ಮನಸ್ಸು ಆಸಕ್ತವಾಯಿತು.

೨೭೭. ಕಲಾವತಿಯ ಕಲಹಾಂತರ ಚೇಷ್ಟೆ (ಜಗಳವಾಡಿ ಮುನಿಸಿಕೊಂಡ ಪ್ರಿಯತಮೆ, ಕಲಹಾಂತರಿತೆ; ಅಷ್ಟವಿಧನಾಯಿಕೆಯರಲ್ಲಿ ಒಬ್ಬಳು) ಯನ್ನರಿಯಲು ಸೂರ್ಯಪ್ರಭನು ತನ್ನ ಮಂತ್ರಿಯಾದ ಪ್ರಭಾಸನನ್ನು ಕೂಡಲೇ ಎಬ್ಬಿಸಿ ಕಳಿಸಿದನು.

೨೭೮. ಮಹಲ್ಲಿಕೆಯ ವೃತ್ತಾಂತವನ್ನರಿಯಲು ಪ್ರಹಸ್ತನನ್ನು ಕಳಿಸಿದನು. ಅವರು ತರುವ ವಾರ್ತೆಯನ್ನು ಎದುರುನೋಡುತ್ತಾ ಪ್ರಜ್ಞಾಢ್ಯನೊಡನೆ ಕುಳಿತನು.

೨೭೯. ಕಲಾವತಿಯು ಏನು ಮಾಡಿದಳೆಂದು ತಿಳಿದು ಅವನ ಬಳಿ ಬಂದ ಪ್ರಭಾಸನು ಏನಾಯಿತೆಂದಾಗ ಹೀಗೆ ಹೇಳಿದನು.

೨೮೦. ಇಲ್ಲಿಂದ ಎರಡನೆಯ ಪಾತಾಲದಲ್ಲಿರುವ ಅವಳ ಮನೆಗೆ ನನ್ನ ವಿದ್ಯಾಪ್ರಭಾವದಿಂದ ಅದೃಶ್ಯನಾಗಿ ಹೋದೆ.

೨೮೧. ಅಲ್ಲಿ ಹೊರಗಡೆ ಇದ್ದ ಇಬ್ಬರು ಹೆಣ್ಣಾಳುಗಳ ಸಂವಾದವನ್ನು ಕೇಳಿದೆ. ಒಬ್ಬಳು ಹೇಳಿದಳು. 'ಸಖಿ! ಕಲಾವತಿಯು ಇಂದೇಕೆ ಉದ್ವಿಗ್ನಳಾಗಿದ್ದಾಳೆ'.

---

ಸೂರ್ಯಪ್ರಭಶ್ಚ ವಿಮನಾ ಯುಕ್ತೋ ಯದಭವತ್ತದಾ ।
ಕಾಂತಾಭ್ಯಾಂ ಹಿ ಸಮಂ ತಸ್ಯ ತದಾಸಕ್ತಂ ಮನೋಗತಮ್ ॥ ೨೭೬
ಅಥ ಜ್ಞಾತುಂ ಕಲಾವತ್ಯಾಃ ಕಲಹಾಂತರಚೇಷ್ಟಿತಮ್ ।
ಪ್ರಾಹಿಣೋದ್ದ್ರುತಮುತ್ಥಾಪ್ಯ ಪ್ರಭಾಸಂ ಸ ಸ್ವಮಂತ್ರಿಣಮ್ ॥ ೨೭೭
ಮಹಲ್ಲಿಕಾಯಾಸ್ತದ್ವಚ್ಚ ಪ್ರಹಸ್ತಂ ಸ ವಿಸೃಷ್ಟವಾನ್ ।
ಸ್ವಯಂ ಚ ತತ್ಪ್ರತೀಕ್ಷಃ ಸನ್ನಾಸೀತ್ ಪ್ರಜ್ಞಾಢ್ಯಸಂಯುತಃ ॥ ೨೭೮
ಅಥಾನ್ವಿಷ್ಯ ಕಲಾವತ್ಯಾಶ್ಚೇಷ್ಟಿತಂ ಸ ಸಮಾಯಯೌ ।
ಪ್ರಭಾಸೋ ನಿಕಟಂ ತಸ್ಯ ಪೃಷ್ಟಶ್ಚೈವಮುವಾಚ ತಮ್ ॥ ೨೭೯
ಇತೋ ದ್ವಿತೀಯಪಾತಾಲವರ್ತಿ ತದ್ಗತವಾನಹಮ್ ।
ವಾಸವೇಶ್ಮ ಕಲಾವತ್ಯಾಃ ಸ್ವವಿದ್ಯಾಚ್ಛಾದಿತಾತ್ಮಕಃ ॥ ೨೮೦
ಬಹಿಸ್ತತ್ರ ದ್ವಯೋಶ್ಚೇಟ್ಯೋರಾಲಾಪಶ್ಚ ಶ್ರುತೋ ಮಯಾ ।
ಏಕಾಬ್ರವೀತ್ ಸಖಿ ಕಿಮದ್ಯೋದ್ವಿಗ್ನಾಸ್ತೇ ಕಲಾವತೀ ॥ ೨೮೧

೨೮೨–೨೮೩. ಅದಕ್ಕೆ ಎರಡನೆಯವಳೆಂದಳು. "ಕಾರಣ ತಿಳಿಯಬೇಕೆ ? ಕೇಳು. ಚತುರ್ಥ ರಸಾತಲದಲ್ಲಿ ಸುಮುಂಡೀಕನ ಅವತಾರವಾದ ಸೂರ್ಯಪ್ರಭನು ಇದ್ದಾನೆ. ಅವನು ರೂಪದಲ್ಲಿ ಮನ್ಮಥನನ್ನೂ ಸೋಲಿಸಿದ್ದಾನೆ. ಇವಳು ತಾನಾಗಿಯೇ ಹೋಗಿ ಗುಟ್ಟಿನಲ್ಲಿ ಅವನಿಗೆ ತನ್ನನ್ನು ಒಪ್ಪಿಸಿಕೊಂಡಿದ್ದಾಳೆ.

೨೮೪. ಇಂದು ರಾತ್ರಿ ಕೂಡ ಅವನ ಬಳಿಗೆ ಈಕೆ ಹೋದಾಗ ಪ್ರಹ್ಲಾದರಾಜನ ಕುವರಿ ಮಹಲ್ಲಿಕೆಯೂ ಸ್ವತಃ ಅಲ್ಲಿಗೆ ಬಂದಳು.

೨೮೫. ಅವಳೊಡನೆ ಅಸೂಯೆಯಿಂದ ಜಗಳವಾಡಿ ಬಂದು ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸಿದ ಇವಳನ್ನು ತಂಗಿಯಾದ ಸುಖಾವತಿಯು ಕಾಪಾಡಿದಳು.

೨೮೬. ನಂತರ ಒಳಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡ ಇವಳನ್ನು, "ಏನು ಸಮಾಚಾರ' ಎಂದು ತಂಗಿ ಕೇಳುತ್ತಿದ್ದಾಳೆ.

೨೮೭. ಹೀಗೆ ಚೇಟಿಯರ ಮಾತನ್ನು ಕೇಳಿ ಒಳಹೋಗಿ ನೋಡಲಾಗಿ ಒಂದೇ ರೀತಿಯ ಆಕಾರವುಳ್ಳ ಕಲಾವತಿ, ಸುಖಾವತಿಯರನ್ನು ಕಂಡೆ."

೨೮೮. ಹೀಗೆಂದು ಸೂರ್ಯಪ್ರಭನಿಗೆ ಪ್ರಭಾಸನು ಗುಟ್ಟಿನಲ್ಲಿ ಹೇಳುತ್ತಿರಲಾಗಿ, ಪ್ರಹಸ್ತನೂ ಅಲ್ಲಿಗೆ ಬಂದನು. ಏನೆಂದು ಕೇಳಲು ಅವನೂ ಹೇಳಿದನು.

---

ತತೋ ದ್ವಿತೀಯಾಪ್ಯವದತ್ಸಖಿ ಶೃಣ್ವತ್ರ ಕಾರಣಮ್ ।
ಸುಮುಂಡೀಕಾವತಾರೋ ಹಿ ಚತುರ್ಥೇಽದ್ಯ ರಸಾತಲೇ ॥ ೨೮೨

ಸ್ಥಿತಃ ಸೂರ್ಯಪ್ರಭೋ ನಾಮ ರೂಪೇಣ ಜಿತಮನ್ಮಥಃ ।
ತಸ್ಮೈ ಗತ್ವಾ ಸ್ವಯಂ ಗುಪ್ತಮಾತ್ಮಾ ದತ್ತಃ ಕಿಲೈತಯಾ ॥ ೨೮೩

ಗತಾಯಾಮದ್ಯ ಚೈತಸ್ಯಾಂ ತತ್ಸಕಾಶಂ ನಿಶಾಗಮೇ ।
ಪ್ರಹ್ಲಾದದುಹಿತಾಪ್ಯಾಗಾತ್ ಸ್ವಯಂ ತತ್ರ ಮಹಲ್ಲಿಕಾ ॥ ೨೮೪

ತಯಾ ಸಹೇರ್ಷ್ಯಾಕಲಹಂ ಕೃತ್ವಾ ಸತ್ಯಾತ್ಮಘಾತನೇ ।
ಉದ್ಯತೈಷಾ ಸುಖಾವತ್ಯಾ ಸ್ವಸ್ರಾ ದೃಷ್ಟ್ವೈವ ರಕ್ಷಿತಾ ॥ ೨೮೫

ತತಶ್ಚಾಂತಃ ಪ್ರವಿಶ್ಯೈವ ನಿಪತ್ಯ ಶಯನೀಯಕೇ ।
ಸ್ಥಿತಾ ತಯಾ ಸಹ ಸ್ವಸ್ರಾ ಪೃಷ್ಟವೃತ್ತಾಂತವಿಘ್ನಯಾ ॥ ೨೮೬

ಏವಂ ಚೇಟ್ಯೋಃ ಕಥಾಂ ಶ್ರುತ್ವಾ ಪ್ರವಿಶ್ಯಾತ್ರ ತಥೈವ ತೇ ।
ಕಲಾವತೀಸುಖಾವತ್ಯೌ ದೃಷ್ಟೇ ತುಲ್ಯಾಕೃತೀ ಮಯಾ ॥ ೨೮೭

ಇತಿ ಪ್ರಭಾಸೋ ಯಾವತ್ತಂ ವಕ್ತಿ ಸೂರ್ಯಪ್ರಭಂ ರಹಃ ।
ತಾವತ್ಪ್ರಹಸ್ತೋಽಪ್ಯತ್ರಾಗಾತ್ಪೃಷ್ಟಃ ಸೋಽಪ್ಯಬ್ರವೀದಿದಮ್ ॥ ೨೮೮

೨೮. ನಾನು ಮಹಲ್ಲಿಕೆಯ ವಸತಿಗೆ ಹೋಗುವ ವೇಳೆಗೆ ದುಗುಡದಿಂದ ಅವಳು ಸಖಿಯರೊಡನೆ ಅಲ್ಲಿಗೆ ಬಂದಳು.

೩೦. ನಾನು ನನ್ನ ಯೋಗ ವಿದ್ಯೆಯಿಂದ ಅದೃಶ್ಯವಾಗಿದ್ದುಕೊಂಡು ಒಳಗೆ ಹೋದೆ. ಅಲ್ಲಿ ಅವಳಂತೆಯೇ ಇದ್ದ ಹನ್ನೆರಡು ಜನ ಸಖಿಯರನ್ನು ಕಂಡೆನು.

೩೧. ರತ್ನಖಚಿತವಾದ ಪರ್ಯಂಕದ ಮೇಲೆ ಕುಳಿತ ಆಕೆಯನ್ನು ಸುತ್ತುವರಿದು ಕುಳಿತ ಅವರಲ್ಲಿ ಒಬ್ಬಳು ಅವಳಿಗೆ ಹೀಗೆಂದಳು.

೩೨. "ಸಖಿ, ಏಕೆ ನೀನು ಎಂದಿನಂತಿಲ್ಲದೆ ಕಳವಳಗೊಂಡಿರುವಂತಿದ್ದೀಯೆ ? ವಿವಾಹವು ನಿಶ್ಚಿತವಾಗಿರುವಾಗ ನಿನ್ನ ದುಗುಡಕ್ಕೆ ಕಾರಣವೇನು ?'

೩೩. ಅದನ್ನು ಕೇಳಿ ತಲ್ಲಣಗೊಂಡ ಆ ಪ್ರಹ್ಲಾದಸುತೆ, "ಏನು ನನಗೆ ಮದುವೆಯೆ ? ಯಾರೊಡನೆ ? ನಿನಗೆ ಯಾರು ಹೇಳಿದರು ?' ಎಂದಳು.

---

ಇತೋ ಮಹಲ್ಲಿಕಾವಾಸಗೃಹಂ ಯಾವದಹಂ ಗತಃ ।
ತಾವತ್ತತ್ರ ಪ್ರವಿಷ್ಟಾ ಸಾ ಸಖೀಭ್ಯಾಂ ಸಹ ದುರ್ಮನಾಃ ॥ ೨೮
ಅಹಂ ತತ್ರೈವ ಚಾದೃಶ್ಯೋ ವಿದ್ಯಾಯುಕ್ತ್ಯಾ ಪ್ರವಿಷ್ಟವಾನ್ ।
ದೃಷ್ಟಾ ಮಯಾತ್ರ ತಸ್ಯಾಶ್ಚ ಸಖ್ಯೋ ದ್ವಾದಶ ತತ್ಸಮಾಃ ॥ ೩೦
ತೌಶ್ಚ ಸದ್ರತ್ನಪರ್ಯಂಕನಿಷಣ್ಣಾಂ ಪರಿವೃತ್ಯ ತಾಮ್ ।
ಮಹಲ್ಲಿಕಾಮುಪಾವಿಕ್ಷನ್ನೇಕಾ ಚೋವಾಚ ತಾಂ ತತಃ ॥ ೩೧
ಸಖಿ ಕಸ್ಮಾದಕಸ್ಮಾತ್ತ್ವಮುದ್ವಿಗ್ನೇವಾದ್ಯ ದೃಶ್ಯಸೇ ।
ವಿವಾಹೇ ಪ್ರಸ್ತುತೇಽಪ್ಯೇಷಾ ಬತ ಕಾ ತೇ ವಿಷಾದಿತಾ ॥ ೩೨
ತಚ್ಛ್ರುತ್ವಾ ಸವಿಮರ್ಶಾ ಸಾ ತಾಂ ಪ್ರಹ್ಲಾದಸುತಾಬ್ರವೀತ್ ।
ಕೋ ಮೇ ವಿವಾಹೋ ದತ್ತಾಸ್ಮಿ ಕಸ್ಮೈ ಕೇನೋದಿತಂ ತವ ॥ ೩೩

೧೯೪–೧೯೭. ಆಗ ಅವರೆಲ್ಲ ಒಟ್ಟಾಗಿ ಹೇಳಿದರು, "ದೇವಿ, ಇಂದು ಬೆಳಿಗ್ಗೆ ಸೂರ್ಯಪ್ರಭನೊಡನೆ ನಿನ್ನ ವಿವಾಹ ನಿಶ್ಚಿತವಾಯಿತು. ನಿನ್ನ ತಾಯಿ ನೀನಿಲ್ಲದಿರುವಾಗ ನಮ್ಮನ್ನು ಕೌತುಕ ಮಂಗಳವನ್ನು ನೆರವೇರಿಸಲು ನಿಯೋಜಿಸುತ್ತಾ ಇದನ್ನು ಹೇಳಿದಳು. ನೀನೇ ಧನ್ಯೆ. ಸೂರ್ಯಪ್ರಭನನ್ನು ಪತಿಯಾಗಿ ಪಡೆದಿರುವೆ. ಆತನ ರೂಪಕ್ಕೆ ಮರುಳಾದ ಯಾವ ಹೆಣ್ಣಿಗೂ ರಾತ್ರಿ ನಿದ್ದೆಯೆಂಬುದೇ ಇಲ್ಲವಾಗಿದೆ. ಇನ್ನು ಮೇಲೆ ಸೂರ್ಯಪ್ರಭನನ್ನು ಪತಿಯಾಗಿ ಪಡೆದ ನೀನೆಲ್ಲಿ, ನಾವೆಲ್ಲಿ ? ಮುಂದೆ ನಮ್ಮನ್ನೆಲ್ಲಿ ಮರೆತುಬಿಡುತ್ತೀಯೋ ಎಂಬ ದುಃಖ ನಮ್ಮನ್ನು ಕಾಡುತ್ತಿದೆ.'

೧೯೮. ಅವರ ಬಾಯಿಂದ ಈ ಮಾತನ್ನು ಕೇಳಿದ ಮಹಲ್ಲಿಕೆ ಕೇಳಿದಳು. "ಆತನನ್ನು ನೀವು ನೋಡಿದ್ದೀರಾ ? ಅವನಲ್ಲಿ ನಿಮಗೆ ಮನಸ್ಸಾಗಿದೆಯೇ ?'

೧೯೯. ಸಖಿಯರು ಹೇಳಿದರು, "ಉಪ್ಪರಿಗೆಯಿಂದ ನಾವು ಅವನನ್ನು ಕಂಡೆವು. ಅವನನ್ನು ನೋಡಿ ಯಾವ ಹೆಣ್ಣು ತಾನೆ ಅವನಲ್ಲಿ ಮೋಹಗೊಳ್ಳದಿರಲು ಸಾಧ್ಯ?

೨೦೦–೨೦೧. "ಹಾಗಾದರೆ, ನಿಮ್ಮೆಲ್ಲರನ್ನೂ ಅವನಿಗೆ ಮದುವೆಮಾಡಿಸಲು ನಾನು ತಂದೆಗೆ ಹೇಳುತ್ತೇನೆ. ಇದುವರೆಗೆ ಒಟ್ಟಿಗಿರುವ ನಾವು ಬೇರೆಯಾಗುವುದು ಬೇಡ' ಎಂದು ಮಹಲ್ಲಿಕೆ ಹೇಳಿದಾಗ ಅವರೆಲ್ಲರೂ ಗಾಬರಿಯಿಂದ ಹೀಗೆ ಹೇಳಿದರು.

---

ಏವಂ ತಯೋಕ್ತೇ ಸರ್ವಾಸ್ತಾ ಜಗದುರ್ನಿಶ್ಚಿತಂ ತವ ।
ಪ್ರಾತರ್ವಿವಾಹೋ ದತ್ತಾಸಿ ಸಖಿ ಸೂರ್ಯಪ್ರಭಾಯ ಚ ॥ ೧೯೪
ತ್ವತ್ಪಜನನ್ಯಾ ಚ ದೇವ್ಯೈತದದ್ಯೋಕ್ತಂ ತ್ವದಸನ್ನಿಧೌ ।
ಅಸ್ಮಾನ್ನಿಯೋಜಯಂತ್ಯಾ ತೇ ಕೌತುಕಪ್ರತಿಕರ್ಮಣಿ ॥ ೧೯೫
ತದ್ಧನ್ಯಾಸಿ ಚ ಯಸ್ಯಾಸ್ತೇ ಭಾವೀ ಸೂರ್ಯಪ್ರಭಃ ಪತಿಃ ।
ಯದ್ರೂಪಲುಬ್ಧೋ ನಿದ್ರಾತಿ ನಿಶಿ ನೇಹಾಂಗನಾಜನಃ ॥ ೧೯೬
ಅಸ್ಮಾಕಂ ತು ವಿಷಾದೋಽಯಂ, ಕ್ವೇದಾನೀಂ ತ್ವಂ ವಯಂ ಕ್ವ ಚ ।
ತಸ್ಮಿನ್ ಹಿ ಭರ್ತರಿ ಪ್ರಾಪ್ತೇ ತ್ವಮಸ್ಮಾನ್ ವಿಸ್ಮರಿಷ್ಯಸಿ ॥ ೧೯೭
ಏತನ್ಮಹಲ್ಲಿಕಾ ತಾಸಾಂ ಮುಖಾಚ್ಛ್ರುತ್ವಾ ಜಗಾದ ಸಾ ।
ಕಚ್ಚಿತ್ಸ ದೃಷ್ಟೋ ಯುಷ್ಮಾಭಿರ್ಮನಸ್ತಸ್ಮಿನ್ಗತಂ ಚ ವಃ ॥ ೧೯೮
ತಚ್ಛ್ರುತ್ವಾ ತಾಮವೋಚನ್ಸ್ತಾ ಹರ್ಮ್ಯಾತ್ಸೋಽಸ್ಮಾಭಿರೀಕ್ಷಿತಃ ।
ಕಾ ಚ ಸಾ ಸ್ತ್ರೀ ಮನೋ ಯಸ್ಯಾ ನ ಸ ದೃಷ್ಟೋ ಹರೇದಿತಿ ॥ ೧೯೯
ತತಃ ಸಾಪ್ಯವದತ್ತರ್ಹಿ ತಾತಂ ವಕ್ಷ್ಯಾಮ್ಯಹಂ ತಥಾ ।
ಯುಷ್ಮಾನಪ್ಯಖಿಲಾಸ್ತಸ್ಮೈ ದಾಪಯಿಷ್ಯಾಮ್ಯಮೂರ್ಯಥಾ ॥ ೨೦೦
ಇತ್ಥಮನ್ಯೋನ್ಯವಿರಹೋ ನ ಸ್ಯಾನ್ನಃ ಸಹವಾಸತಃ ।
ಇತಿ ಬ್ರುವಾಣಾಂ ಕನ್ಯಾಸ್ತಾಃ ಸಂಭ್ರಾಂತಾಃ ಸಂಬಭಾಷಿರೇ ॥ ೨೦೧

೩೦೨–೩೦೪. "ಗೆಳತಿ, ಹೀಗೆಲ್ಲ ಮಾಡಬೇಡ, ಇದು ಸರಿಯಿಲ್ಲ. ನಮಗೆ ನಾಚಿಕೆಯಾಗುತ್ತದೆ' ಆಗ ಅವರನ್ನು ಕುರಿತು ಮಹಲ್ಲಿಕೆ "ಅವನನ್ನು ನಾನೊಬ್ಬಳೇ ಮದುವೆಯಾಗುವುದು ಸರಿಯೇನು ? ದೈತ್ಯ ದಾನವರೆಲ್ಲರೂ ಅವನಿಗೆ ತಮ್ಮ ಕನ್ಯೆಯರನ್ನು ಕೊಡುತ್ತಾರೆ. ಇನ್ನೂ ಎಷ್ಟೋ ಜನ ರಾಜಕನ್ಯೆಯರು, ಅವನ ಪತ್ನಿಯರಾಗಿ, ಭೂಮಿಯಲ್ಲೂ ಇದ್ದಾರೆ. ಎಷ್ಟೋ ಜನ ವಿದ್ಯಾಧರಕನ್ನಿಕೆಯರನ್ನು ಅವನು ಮದುವೆಯಾಗಲಿದ್ದಾನೆ.

೩೦೫. ಹೀಗಿರುವಾಗ ನಿಮ್ಮನ್ನೂ ಅವನು ಮದುವೆಯಾದರೆ ನನಗೇನೂ ಕೊರತೆಯಾಗುವುದಿಲ್ಲ. ನಾವೆಲ್ಲ ಈಗಿರುವಂತೆಯೇ ಸುಖವಾಗಿರೋಣ'.

೩೦೬. ನನಗೆ ವಿರುದ್ಧರಾದ ಅನ್ಯ ಸಪತ್ನಿಯರೊಡನೆ ನನಗೇನು ಸಂಬಂಧ ? ನೀವೇಕೆ ನಾಚಿಕೊಳ್ಳಬೇಕು ? ನಾನೆಲ್ಲ ನೋಡಿಕೊಳ್ಳುತ್ತೇನೆ.'

೩೦೭. "ಹೀಗೆ ನಿನ್ನ ವಿಚಾರವಾಗಿಯೇ ಅವರೆಲ್ಲ ಮಾತನಾಡುತ್ತಿರುವಾಗ ನಾನು ಅಲ್ಲಿಂದ ಹೊರಟು ನಿನ್ನ ಬಳಿಗೆ ಬಂದೆ.'

೩೦೮. ಹೀಗೆ ಪ್ರಹಸ್ತನು ಹೇಳಿದ ಮಾತನ್ನು ಕೇಳಿದ ಸೂರ್ಯಪ್ರಭನು ಆ ರಾತ್ರಿಯನ್ನು ನಿದ್ದೆಯಿಲ್ಲದೆಯೇ ಆನಂದದಿಂದ ಕಳೆದನು.

---

ಸಖಿ ಮೈವಂ ಕೃಥಾ ನೈತದ್ಯುಕ್ತಮೇಷಾ ತ್ರಪಾ ಹಿ ನಃ ।
ಏವಮುಕ್ತವತೀರೇತಾಃ ಸಾ ಜಗಾದಾಸುರೇಂದ್ರಜಾ ॥ ೩೦೨
ಕಿಮಯುಕ್ತಂ ನ ತೇನೈಕಾ ಪರಿಣೇಯಾಹಮೇವ ಹಿ ।
ತಸ್ಮೈ ಸರ್ವೇಽಪಿ ದಾಸ್ಯಂತಿ ದುಹಿತೄರ್ದೈತ್ಯದಾನವಾಃ ॥ ೩೦೩
ಅನ್ಯಾಶ್ಚ ರಾಜತನಯಾಸ್ತಸ್ಯೋಢಾ ಭುವಿ ಸ್ಥಿತಾಃ ।
ಪರಿಣೇಷ್ಯತಿ ಬಹ್ವೀಶ್ಚ ಸ ವಿದ್ಯಾಧರಕನ್ಯಕಾಃ ॥ ೩೦೪
ತನ್ಮಧ್ಯೇ ಪರಿಣೀತಾಸು ಯುಷ್ಮಾಸು ಮಮ ಕಾ ಕ್ಷತಿಃ ।
ಸುಖಂ ಪ್ರತ್ಯುತ ವತ್ಸ್ಯಾಮೋ ವಯಂ ಸಖ್ಯಃ ಪರಸ್ಪರಮ್ ॥ ೩೦೫
ಅನ್ಯಾಭಿಸ್ತು ವಿರುದ್ಧಾಭಿಃ ಕಸ್ತಾಭಿಃ ಸಂಸ್ತವೋ ಮಮ ।
ಯುಷ್ಮಾಕಂ ಚ ತ್ರಪಾ ಕಾತ್ರ ಸರ್ವಮೇತತ್ಕರೋಮ್ಯಹಮ್ ॥ ೩೦೬
ಇತಿ ತಾಸಾಂ ಕಥಾ ಯಾವದ್ವರ್ತತೇ ತ್ವದ್ಗತಾತ್ಮನಾಮ್ ।
ತಾವತ್ತತೋಽಹಂ ನಿರ್ಗತ್ಯ ಸ್ವೈರಂ ತ್ವತ್ಪಾರ್ಶ್ವಮಾಗತಃ ॥ ೩೦೭
ಏತತ್ಪ್ರಹಸ್ತಸ್ಯ ಮುಖಾಚ್ಛ್ರುತ್ವಾ ಸೂರ್ಯಪ್ರಭೋಽತ್ರ ಸಃ ।
ಅನಿದ್ರ ಏವ ಶಯನೇ ತಾಂ ನಿಶಾಮನಯನ್ಮುದಾ ॥ ೩೦೮

೩೯. ಬೆಳಗಾದಾಗ ಸುನೀಥ, ಮಯಾಸುರರೊಡನೆ ಅಸುರಾಧಿಪತಿಯಾದ ಪ್ರಹ್ಲಾದನನ್ನು ಕಾಣಲು ಅವನ ಸಭೆಗೆ ಹೋದನು.

೩೧೦–೩೧೧. ಸುನೀಥನನ್ನು ಗೌರವಿಸಿದ ನಂತರ ಪ್ರಹ್ಲಾದನು ಹೀಗೆಂದನು, 'ನನ್ನ ಮಗಳಾದ ಮಹಲ್ಲಿಕೆಯನ್ನು ಸೂರ್ಯಪ್ರಭನಿಗೆ ಮದುವೆ ಮಾಡಿಸುತ್ತೇನೆ. ಈತನಿಗೆ ಅತಿಥಿ ಸತ್ಕಾರವನ್ನು ಮಾಡಬೇಕಲ್ಲವೆ ? ನಿನಗೂ ಪ್ರಿಯವನ್ನುಂಟುಮಾಡಬೇಕಲ್ಲವೆ ?' ಆತನ ಮಾತನ್ನು ಕೇಳಿ ಸುನೀಥನಿಗೆ ಸಂತೋಷವಾಯಿತು.

೩೧೨–೩೧೩. ಬಳಿಕ ಮದುವೆಯ ಮಂಟಪದ ವೇದಿಯಲ್ಲಿ ಅಗ್ನಿ ಜ್ವಲಿಸತೊಡಗಿತು. ಅಲ್ಲಿದ್ದ ರತ್ನಖಚಿತವಾದ ಸ್ತಂಭಗಳು ಜ್ವಾಲೆಗಳಿಂದ ಮತ್ತಷ್ಟು ಪ್ರಕಾಶಮಾನವಾದವು. ಅವುಗಳಲ್ಲಿ ಪ್ರತಿಫಲಿಸಿ ಕಂಗೊಳಿಸುತ್ತಿದ್ದ ಮಹಲ್ಲಿಕೆಯನ್ನು ಪ್ರಹ್ಲಾದನು ಸೂರ್ಯಪ್ರಭನಿಗೆ ಮದುವೆ ಮಾಡಿಸಿದನು. ಅಸುರ ಸಾಮ್ರಾಜ್ಯ ಲಕ್ಷ್ಮಿಗೆ ಒಪ್ಪುವಂತೆ ಮದುವೆಯ ಸಮಾರಂಭ ವಿಜೃಂಭಿಸಿತು.

೩೧೪. ದೇವತೆಗಳನ್ನೆಲ್ಲ ಜಯಿಸಿ ದೇವಲೋಕಗಳಿಂದ ತಂದು ಸುಮೇರು ಪರ್ವತದ ಶಿಖರಗಳಂತೆ ರಾಶಿಹಾಕಿದ್ದ ಜಾತಿರತ್ನಗಳನ್ನೇ ತನ್ನ ಮಗಳಿಗೂ ವರನಿಗೂ ಪ್ರಹ್ಲಾದನು (ಬಳುವಳಿಯಾಗಿ) ನೀಡಿದನು.

---

ಪ್ರಾತಃ ಸಹ ಸುನೀಥೇನ ಮಯೇನ ಸಚಿವೈಶ್ಚ ಸಃ ।
ಅಸುರಾಧಿಪತಿಂ ದ್ರಷ್ಟುಂ ಪ್ರಹ್ಲಾದಂ ತತ್ಸಭಾಂ ಯಯೌ ॥ ೩೯
ಸುನೀಥಂ ತತ್ರ ಸ ಪ್ರಾಹ ಪ್ರಹ್ಲಾದೋ ದರ್ಶಿತಾದರಃ ।
ಸುತಾಂ ಸೂರ್ಯಪ್ರಭಾಯಾಹಂ ದದಾಮ್ಯಸ್ಮೈ ಮಹಲ್ಲಿಕಾಮ್ ॥ ೩೧೦
ಅಸ್ಯ ಹಿ ಪ್ರಾಘುಣಾತಿಥ್ಯಂ ಕಾರ್ಯಂ ಮೇ ತವ ಚ ಪ್ರಿಯಮ್ ।
ಏತತ್ಪ್ರಹ್ಲಾದವಚನಂ ಸುನೀಥೋಽಭಿನನಂದ ಸಃ ॥ ೩೧೧
ತತೋ ವೇದೀಂ ಸಮಾರೋಪ್ಯ ಮಧ್ಯಜ್ವಲಿತಪಾವಕಾಮ್ ।
ತತ್ಪ್ರಭಾಭ್ರಾಜಿತೋದಗ್ರರತ್ನಸ್ತಂಭಾವಭಾಸಿತಾಮ್ ॥ ೩೧೨
ಮಹಲ್ಲಿಕಾಂ ತಾಂ ಸ್ವಸುತಾಂ ಪ್ರಾದಾತ್ಸೂರ್ಯಪ್ರಭಾಯ ಸಃ ।
ಪ್ರಹ್ಲಾದೋಽಸುರಸಾಮ್ರಾಜ್ಯಸದೃಶೀಭಿರ್ವಿಭೂತಿಭಿಃ ॥ ೩೧೩
ದದೌ ಸದ್ರತ್ನರಾಶೀಂಶ್ಚ ಸದುಹಿತ್ರೇ ವರಾಯ ಚ ।
ತ್ರಿದಶಾವಜಯಾನೀತಾನ್ ಸುಮೇರುಶಿಖರೋಪಮಾನ್ ॥ ೩೧೪

೩೧೫ ಆಗ ಮಹಲ್ಲಿಕೆಯು, "ಅಪ್ಪಾ, ನನ್ನ ಪ್ರಿಯಸಖಿಯರು ಹನ್ನೆರಡು ಜನ ಇದ್ದಾರಲ್ಲ, ಅವರನ್ನೂ ಇವನಿಗೆ ಮದುವೆ ಮಾಡಿಸು' ಎಂದು ಪ್ರಹ್ಲಾದನಿಗೆ ತಾನೇ ಹೇಳಿದಳು.

೩೧೬ ಆಗ ಪ್ರಹ್ಲಾದನು, "ಮಗಳೇ, ಇವರೆಲ್ಲ ನನ್ನ ಸೋದರನ ಅಧೀನದಲ್ಲಿರುವವರು. ಅವನೇ ಇವರನ್ನು ಬಂದಿಗಳಾಗಿಸಿದ್ದಾನೆ. ನಾನು ಇವರನ್ನು ಮದುವೆ ಮಾಡಿಕೊಡುವುದು ಸರಿಯಾಗುವುದಿಲ್ಲ' ಎಂದನು.

೩೧೭ ನಂತರ, ಮದುವೆಯ ದಿನದ ಉತ್ಸವಗಳೆಲ್ಲ ಮುಗಿದು, ಸೂರ್ಯಪ್ರಭನು ಮಹಲ್ಲಿಕೆಯೊಡನೆ ರಾತ್ರಿಯಲ್ಲಿ ಶಯ್ಯಾಗೃಹವನ್ನು ಪ್ರವೇಶಿಸಿದನು.

೩೧೮. ಅಂದು ಆಕೆಯೊಡನೆ ಸಕಲವಿಧವಾದ ಕಾಮೋಪಚಾರಗಳಿಂದ ಕೂಡಿದ ಸಮಾಗಮ ಸೌಖ್ಯವನ್ನು ಸುಪ್ರೀತವಾದ ಮನಸ್ಸಿನಿಂದ ಪೂರ್ಣವಾಗಿ ಅನುಭವಿಸಿದನು.

೩೧೯. ಬೆಳಿಗ್ಗೆ ಪ್ರಹ್ಲಾದನು ತನ್ನ ಪರಿವಾರದೊಡನೆ ಸಭೆಯಲ್ಲಿದ್ದಾಗ ದಾನವಾಧೀಶನಾದ ಅಮೀಲನು ಬಂದು ಅವರನ್ನೆಲ್ಲ ಕುರಿತು ಹೇಳಿದನು.

೩೨೦. "ನೀವೆಲ್ಲರೂ ಇಂದು ನನ್ನ ಮನೆಗೆ ಬರಬೇಕು. ಅಲ್ಲಿ ಸೂರ್ಯಪ್ರಭನಿಗೆ ನಾನು ಆತಿಥ್ಯವನ್ನು ಮಾಡಬೇಕು.

೩೨೧. ನಿಮಗೆಲ್ಲ ಒಪ್ಪಿಗೆಯಾದರೆ ನನ್ನ ಮಗಳಾದ ಕಲಾವತಿಯನ್ನು ಅವನಿಗೆ ಮದುವೆ ಮಾಡಿಸಬೇಕು'. ಈ ಮಾತನ್ನು ಕೇಳಿ ಎಲ್ಲರೂ ಆಗಲೆಂದು ಒಪ್ಪಿದರು.

---

ತಾತ ತಾ ಅಪಿ ದೇಹ್ಯಸ್ಮೈ ಸಖೀರ್ಮೇದ್ವಾದಶ ಪ್ರಿಯಾಃ ।
ಏವಂ ಮಹಲ್ಲಿಕಾ ಸ್ವೈರಂ ಪ್ರಹ್ಲಾದಂ ಸಾ ತದಾಬ್ರವೀತ್ ॥ ೩೧೫
ಪುತ್ರಿ ಮದ್ಭ್ರಾತ್ರಧೀನಾಸ್ತಾಸ್ತೇನ ಬಂದೀಕೃತಾ ಯತಃ ।
ಮಮ ದಾತುಂ ನ ಯುಜ್ಯಂತೇ ಇತಿ ಸೋಽಪಿ ಜಗಾದ ತಾಮ್ ॥ ೩೧೬
ಕೃತೋದ್ವಾಹೋತ್ಸವಶ್ಚಾಸ್ಮಿನ್ಯಾತೇ ಸೂರ್ಯಪ್ರಭೋ ದಿನೇ ।
ವಿವೇಶ ವಾಸಕಂ ನಕ್ತಂ ಸಮಹಲ್ಲಿಕಯಾ ಸಹ ॥ ೩೧೭
ಸರ್ವಕಾಮೋಪಚಾರಾಢ್ಯಾಂ ತತ್ರ ತಂ ಸುರತೋತ್ಸವಮ್ ।
ಅನಯಾ ಸಮನಃಪ್ರೀತಿಸೌಖ್ಯಂ ಸೋಽನುಬಭೂವ ಚ ॥ ೩೧೮
ಪ್ರಾತರ್ಗತೇ ಚ ಪ್ರಹ್ಲಾದೇ ಸಭಾಂ ತಸ್ಮಿನ್ ಸಹಾನುಗೇ ।
ಅಮೀಲೋ ದಾನವಾಧೀಶಃ ಪ್ರಹ್ಲಾದಾದೀನಭಾಷತ ॥ ೩೧೯
ಅದ್ಯ ಯುಷ್ಮಾಭಿರಖಿಲೈರಾಗಂತವ್ಯಂ ಗೃಹೇ ಮಮ ।
ತತ್ರಾತಿಥ್ಯಂ ಯತಃ ಸೂರ್ಯಪ್ರಭಸ್ಯಾಸ್ಯ ಕರೋಮ್ಯಹಮ್ ॥ ೩೨೦
ಸುತಾಂ ಕಲಾವತೀಂ ತಸ್ಮೈ ದದಾಮಿ ಯದಿ ವೋ ಹಿತಮ್ ।
ಏತತ್ತದ್ವಚನಂ ಸರ್ವೇ ತಥೇತಿ ಪ್ರತಿಪೇದಿರೇ ॥ ೩೨೧

೩೨. ಆಗ ಸೂರ್ಯಪ್ರಭ ಮತ್ತು ಮಯಾಸುರ ಮುಂತಾದವರನ್ನೊಳಗೊಂಡು ಎಲ್ಲರೂ ಆ ಹೊತ್ತಿನಲ್ಲಿಯೇ ದ್ವಿತೀಯ ಪಾತಾಲಕ್ಕೆ ಹೋದರು.

೩೩. ಅಲ್ಲಿ, ಮೊದಲೇ ತನ್ನನ್ನು ಸೂರ್ಯಪ್ರಭನಿಗೆ ಒಪ್ಪಿಸಿಕೊಂಡಿದ್ದ ಮಗಳಾದ ಕಲಾವತಿಯನ್ನು ಅಮೀಲನು ಸೂರ್ಯಪ್ರಭನಿಗೆ ವಿಧ್ಯುಕ್ತವಾಗಿ ಮದುವೆ ಮಾಡಿಸಿದನು.

೩೪. ವಿವಾಹವಾದ ಮೇಲೆ ಪ್ರಹ್ಲಾದನ ಮನೆಯಲ್ಲಿ ಊಟಮಾಡಿ, ಅಸುರರಿಂದ ಕೂಡಿಕೊಂಡು ಭೋಗೋಪಚಾರಗಳನ್ನು ಪಡೆಯುತ್ತಾ ಸೂರ್ಯಪ್ರಭನು ಆ ದಿನವನ್ನು ಕಳೆದನು.

೩೫. ಎರಡನೇ ದಿನ ದುರಾರೋಹನೆಂಬ ಅಸುರೇಶ್ವರನು ಅವರೆಲ್ಲರನ್ನೂ ತನ್ನ ಲೋಕವಾದ ಪಂಚಮಪಾತಾಲಕ್ಕೆ ಕರೆದೊಯ್ದನು.

೩೬. ಅಲ್ಲಿ ಉಳಿದ ಅಸುರ ರಾಜರಂತೆ ಅವನೂ ಕೂಡ ತನ್ನ ಪುತ್ರಿಯಾದ ಕುಮುದಾವತಿಯನ್ನು ಸೂರ್ಯಪ್ರಭನಿಗೆ ಕೊಟ್ಟು ಆತಿಥ್ಯದೊಡನೆ ಸಾಂಗವಾಗಿ ಮದುವೆ ಮಾಡಿಸಿದನು.

೩೭. ಎಲ್ಲರೊಡಗೂಡಿ ವೈಭೋಗದಿಂದ ಅಂದಿನ ದಿನ ಕಳೆದ ಸೂರ್ಯಪ್ರಭನು ರಾತ್ರಿಯಾದಾಗ ಕುಮುದಾವತಿಯೊಡನೆ ವಾಸಗೃಹವನ್ನು ಪ್ರವೇಶಿಸಿದನು.

೩೮. ನವಸಂಗಮದ ಉತ್ಸಾಹದಲ್ಲಿದ್ದ ಆ ಪ್ರೀತಿಯುತಳೂ ಮುಗ್ಧಳೂ ಆದ ತ್ರಿಲೋಕಸುಂದರಿಯೊಡನೆ ಆ ರಾತ್ರಿಯನ್ನು ಕಳೆದನು.

---

ತತೋ ದ್ವಿತೀಯಂ ಪಾತಾಲಂ ತಸ್ಮಿನ್ನೇವ ಕ್ಷಣೇ ಚ ತೇ ।
ಸರ್ವೇ ಜಗ್ಮುಃ ಸಮಂ ಸೂರ್ಯಪ್ರಭೇಣ ಸಮಯಾದಿನಾ ॥ ೩೨
ತತ್ರಾಮೀಲೋ ದದೌ ತಸ್ಮೈ ಸುತಾಂ ಸೂರ್ಯಪ್ರಭಾಯ ತಾಮ್ ।
ಕಲಾವತೀಂ ಪ್ರಕ್ರಿಯಯಾ ದತ್ತಾತ್ಮಾನಮಪಿ ಸ್ವಯಮ್ ॥ ೩೩
ಕೃತ್ವಾ ವಿವಾಹಂ ಪ್ರಹ್ಲಾದಗೃಹೇ ಭುಕ್ತ್ವಾ ಸುರಾನ್ವಿತಃ ।
ನಿನ್ಯೇ ಭೋಗೋಪಚಾರೇಣ ದಿನಂ ಸೂರ್ಯಪ್ರಭೋಽತ್ರ ತತ್ ॥ ೩೪
ದ್ವಿತೀಯೇಽಹ್ನಿ ತಥೈವೈತಾನ್ ದುರಾರೋಹೋಽಸುರೇಶ್ವರಃ ।
ನಿಮಂತ್ರ್ಯ ಸರ್ವಾನನಯತ್ ಪಂಚಮಃ ಸ್ವರಸಾತಲಮ್ ॥ ೩೫
ತತ್ರ ಸೂರ್ಯಪ್ರಭಾಯ ಸ್ವಾಂ ನಾಮ್ನಾ ಸ ಕುಮುದಾವತೀಮ್ ।
ಪ್ರಾದಾದನ್ಯವದಾತಿಥ್ಯಹೇತೋರ್ವಿಧಿವದಾತ್ಮಜಾಮ್ ॥ ೩೬
ತತಃ ಸರ್ವೈಃ ಸಮೇತಸ್ತೈರ್ಭೋಗೈರ್ನೀತ್ವಾ ದಿನಂ ಸ ತತ್ ।
ವಾಸಕಂ ಕುಮುದಾವತ್ಯಾ ಭೇಜೇ ಸೂರ್ಯಪ್ರಭೋ ನಿಶಿ ॥ ೩೭
ತತ್ರ ತ್ರಿಲೋಕಸುಂದರ್ಯಾ ನವಸಂಗಮಸೋತ್ಕಯಾ ।
ಸ ಸ್ನಿಗ್ಧಮುಗ್ಧಯಾ ಸಾಕಂ ತಯಾ ರಾತ್ರಿಮುವಾಸ ತಾಮ್ ॥ ೩೮

೩೨೯. ಬೆಳಗಾದಾಗ ತಂತುಕಚ್ಛನೆಂಬ ಏಳನೆಯ ಪಾತಾಳಾಧಿಪತಿಯು ಪ್ರಹ್ಲಾದನೇ ಮೊದಲಾದ ದಾನವರೊಡನಿದ್ದ ಸೂರ್ಯಪ್ರಭನನ್ನು ಆಮಂತ್ರಿಸಿ ತನ್ನ ಮನೆಗೆ ಕರೆದೊಯ್ದನು.

೩೩೦. ಅಲ್ಲಿ ಆ ಅಸುರಪತಿಯು ಅಪರಂಜಿ ಚಿನ್ನದಂತೆ ಹೊಳೆಯುವ ಮೈಬಣ್ಣವುಳ್ಳ ತನ್ನ ಮಗಳಾದ ಮನೋವತಿಯನ್ನು ರತ್ನಾಭರಣಗಳ ಸಹಿತ ಸೂರ್ಯ ಪ್ರಭನಿಗೆ ಮದುವೆಮಾಡಿಕೊಟ್ಟನು.

೩೩೧. ಅಂದಿನ ದಿನವನ್ನು ಸುಖಮನೋಹರವಾಗಿ ಕಳೆದ ಸೂರ್ಯಪ್ರಭನು ನವಸಂಗಮದಿಂದ ಪುಳಕಿತಳಾದ ಮನೋವತಿಯೊಡನೆ ರಾತ್ರಿಯನ್ನು ಕಳೆದನು.

೩೩೨. ಮರುದಿನ, ಆರನೆಯ ಪಾತಾಳ ಲೋಕಕ್ಕೆ ರಾಜನಾದ ಸುಮಾಯನೆಂಬ ಅಸುರಾಧಿಪತಿಯು ಸೂರ್ಯಪ್ರಭನನ್ನು ಎಲ್ಲರೊಡನೆ ತನ್ನ ಲೋಕಕ್ಕೆ ಕರೆದೊಯ್ದನು.

೩೩೩. ಅಲ್ಲಿ, ದೂರ್ವಾಲತೆಯಂತೆ ಶ್ಯಾಮಲ ವರ್ಣಕಾಂತಿಯಿಂದ ಶೋಭಿಸುತ್ತಿದ್ದ ರತೀದೇವಿಯ ಮೂರ್ತಿಯಂತಿದ್ದ ಸುಭದ್ರಾ ಎಂಬ ತನ್ನ ಮಗಳನ್ನು ಸೂರ್ಯಪ್ರಭನಿಗೆ ಕೊಟ್ಟನು.

೩೩೪. ಚಂದ್ರಮುಖಿಯಾದ ರತಿಸುಖಯೋಗ್ಯಳಾದ ಆ ಶ್ಯಾಮಸುಂದರಿಯೊಡನೆ ಸೂರ್ಯಪ್ರಭನು ಇಡೀ ದಿನವನ್ನು ಕಳೆದನು.

---

ಪ್ರಾತಶ್ಚ ತಂತುಕಚ್ಛೇನ ಪ್ರಹ್ಲಾದಪ್ರಮುಖೈರ್ವೃತಃ ।
ನಿಮಂತ್ರ್ಯ ಸಪ್ತಮಂ ನಿನ್ಯೇ ಪಾತಾಲಂ ಸ ಸ್ವಮಂದಿರಮ್ ॥ ೩೨೯
ತತ್ರಾಸುರಪತಿಃ ಸೋಽಸ್ಮೈ ಸುತಾಂ ನಾಮ್ನಾ ಮನೋವತೀಮ್ ।
ದದೌ ಸರತ್ನಾಭರಣಾಂ ತಪ್ತಜಾಂಬೂನದದ್ಯುತಿಮ್ ॥ ೩೩೦
ತತಃ ಸೂರ್ಯಪ್ರಭಃ ಸೋಽತ್ರ ನೀತಾಽಧಿಕಸುಖಂ ದಿನಮ್ ।
ಮನೋವತೀನವಾಶ್ಲೇಷಸುಖಿನೀಮನಯನ್ನಿಶಾಮ್ ॥ ೩೩೧
ಅಪರೇದ್ಯುಶ್ಚ ತಂ ಸರ್ವೈರ್ಯುಕ್ತಂ ಕೃತನಿಮಂತ್ರಣಃ ।
ಪಾತಾಳಮನಯತ್ಷಷ್ಠಂ ಸ್ವಂ ಸುಮಾಯೋಽಸುರಾಧಿಪಃ ॥ ೩೩೨
ತತ್ರ ಸೋಽಪಿ ದದೌ ತಸ್ಮೈ ಸುಭದ್ರಾಂ ನಾಮ ಕನ್ಯಕಾಮ್ ।
ದೂರ್ವಾಲತಾಶ್ಯಾಮಲಾಂಗೀಂ ಮೂರ್ತಿಂ ಪಾಂಚಶರೀಮಿವ ॥ ೩೩೩
ತಯಾ ಸುರತಸಂಭೋಗಯೋಗ್ಯಯಾ ಶ್ಯಾಮಯಾತ್ರ ಸಃ ।
ಸಹಾಸೀತ್ತದಹಃ ಸೂರ್ಯಪ್ರಭಃ ಪೂರ್ಣೇಂದುವಕ್ತ್ರಯಾ ॥ ೩೩೪

೩೩೫. ಮಾರನೆಯ ದಿನ ತೃತೀಯ ಪಾತಾಳಕ್ಕೆ ರಾಜನಾದ ಬಲಿ ಮಹಾರಾಜನು ಅನ್ಯ ಪಾತಾಳಾಧಿಪತಿಗಳಂತೆಯೇ ಸೂರ್ಯಪ್ರಭನನ್ನು ತನ್ನ ಲೋಕಕ್ಕೆ ಕರೆದುಕೊಂಡು ಹೋದನು.

೩೩೬. ಅಲ್ಲಿ ಹೊಚ್ಚ ಹೊಸ ಹವಳದಂತೆ ಹೊಳೆಯುತ್ತಿದ್ದ ಮಧುಮಾಸದ ಹೂಗೊಂಚಲಿನಂತೆ ಕಂಗೊಳಿಸುತ್ತಿದ್ದ ತನ್ನ ಮುದ್ದು ಮಗಳಾದ ಸುಂದರಿಯನ್ನು ವಿವಾಹ ಮಾಡಿಕೊಟ್ಟನು.

೩೩೭. ದಿವ್ಯವಾದ ಭೋಗಗಳಿಂದ ಭೂಷಿತವಾದ ಅತಿಮನೋಹರವಾದ ಅಂದಿನ ದಿನವನ್ನು ಸೂರ್ಯಪ್ರಭನು ಆ ಸ್ತ್ರೀರತ್ನದೊಡನೆ ಕಳೆದನು.

೩೩೮. ಮಾರನೆಯ ದಿನ ಮಯಾಸುರನು ಮತ್ತೆ ಆ ರಾಜಪುತ್ರನನ್ನು ಚತುರ್ಥ ಪಾತಾಳದಲ್ಲಿನ ತನ್ನ ಮಂದಿರಕ್ಕೆ ಕರೆದುಕೊಂಡು ಹೋದನು.

೩೩೯. ಅದಾದರೋ ಅವನದೇ ಮಾಯೆಯಿಂದ ನಿರ್ಮಿತವಾಗಿದ್ದು ಚಿತ್ರವಿಚಿತ್ರವಾದ ಮಣಿಗಳಿಂದ ಕೂಡಿದ ಉಪ್ಪರಿಗೆಗಳಿಂದಲೂ ಥಳಥಳಿಸುವ ಕಾಂತಿಯಿಂದಲೂ ಪ್ರತಿಕ್ಷಣವೂ ನಿತ್ಯನೂತನವಾಗಿ ಕಾಣುತ್ತಿತ್ತು.

೩೪೦. ಅಲ್ಲಿ ಮಯನು ತನ್ನ ಮಗಳಾದ ಸುಮಾಯೆಯೆಂಬವಳನ್ನು ಅವನಿಗೆ ಮದುವೆ ಮಾಡಿಸಿದನು. ಪರಮಾಶ್ಚರ್ಯ ಮೂಡಿಸುವ ರೂಪಶ್ರೀಯಿಂದ ಮಿನುಗುತ್ತಿದ್ದ ಆಕೆಯು ಮಯಾಸುರನ ಶಕ್ತಿಯೇ ಮೂರ್ತಿವೆತ್ತು ಬಂದಂತೆ ತೋರುತ್ತಿದ್ದಳು.

---

ಅನ್ಯೇದ್ಯುಶ್ಚ ಬಲೀ ರಾಜಾ ತದ್ವದೇವ ನಿನಾಯ ತಮ್ ।
ಸೂರ್ಯಪ್ರಭಂ ಸ್ವಪಾತಾಲಂ ತೃತೀಯಂ ಸೋಽಸುರಾನುಗಃ ॥ ೩೩೫
ಸೋಽಪಿ ತತ್ರ ಸುತಾಂ ತಸ್ಮೈ ಸುಂದರೀಂ ನಾಮ ದತ್ತವಾನ್ ।
ಬಾಲಪ್ರವಾಲಸಚ್ಛಾಯಾಂ ಮಾಧವೀಮಿವ ಮಂಜರೀಮ್ ॥ ೩೩೬
ಸ್ತ್ರೀರತ್ನೇನ ಸಮಂ ತೇನ ರೇಮೇ ಸೂರ್ಯಪ್ರಭೋಽತ್ರ ಸಃ ।
ಸುರಂಜಿತಸ್ತದ್ದಿವಸಂ ದಿವ್ಯಭೋಗವಿಭೂಷಿತಮ್ ॥ ೩೩೭
ಅಪರೇಽಹ್ನಿ ಮಯಃ ಸೋಽಪಿ ರಾಜಪುತ್ರಂ ತಥೈವ ತಮ್ ।
ಚತುರ್ಥಪಾತಾಲಗತಂ ಭೂಯೋಽನೈಷೀತ್ ಸ್ವಮಂದಿರಮ್ ॥ ೩೩೮
ವಿಚಿತ್ರರತ್ನಪ್ರಾಸಾದಂ ನಿಜಮಾಯಾವಿನಿರ್ಮಿತಮ್ ।
ನವಂ ನವಮಿವಾಭಾಸಮಾನಂ ಲಕ್ಷ್ಯ್ಯಪ್ರತಿಕ್ಷಣಮ್ ॥ ೩೩೯
ತತ್ರ ಸೋಽಪಿ ದದೌ ತಸ್ಮೈ ಸುಮಾಯಾಖ್ಯಾಂ ನಿಜಾಂ ಸುತಾಂ ।
ಜಗದಾಶ್ಚರ್ಯರೂಪಾಂ ಸ್ವಾಂ ಶಕ್ತಿಂ ಮೂರ್ತಿಮತೀಮಿವ ॥ ೩೪೦

೩೪೧. ಸೂರ್ಯಪ್ರಭನು ಮನುಷ್ಯನಾಗಿದ್ದರಿಂದ ತನ್ನ ಪುತ್ರಿಯನ್ನು ಅವನಿಗೆ ಕೊಡಬಾರದೆಂದೇನೂ ಮಯನಿಗೆ ಅನ್ನಿಸಲಿಲ್ಲ. (ಆಕೆಯನ್ನು ಪಡೆದು) ಧನ್ಯನಾದ ಸೂರ್ಯಪ್ರಭನು ಅವಳೊಡನೆ ಸುಖಿಸಿದನು.

೩೪೨. ತನ್ನ ವಿದ್ಯಾಪ್ರಭಾವದಿಂದ ಅನೇಕ ದೇಹಗಳನ್ನು ಏಕಕಾಲದಲ್ಲಿ ಪಡೆದ ಸೂರ್ಯಪ್ರಭನು ಆ ಎಲ್ಲ ಅಸುರ ಕನ್ಯೆಯರೊಡನೆ ಸಮನಾಗಿ ರಮಿಸಿದನು.

೩೪೩. ಆದರೆ ತನ್ನ ತಾತ್ತ್ವಿಕ ದೇಹದಿಂದ ತಾನು ಬಹುವಾಗಿ ಮೆಚ್ಚಿಕೊಂಡಿದ್ದ ಪ್ರಹ್ಲಾದನ ಮಗಳಾದ ಮಹಲ್ಲಿಕೆಯೊಡನೆ ಮನಸಾರೆ ಕೂಡಿದನು.

೩೪೪–೩೪೫. ಒಮ್ಮೆ ಮಹಾಕುಲೀನೆಯಾದ ಆಕೆಯೊಡನೆ ಮಾತನಾಡುತ್ತಾ ಹೀಗೆ ಕೇಳಿದನು, "ಪ್ರಿಯೆ, ಅಂದು ರಾತ್ರಿ ನಿನ್ನೊಡನೆ ಬಂದಿದ್ದರಲ್ಲ, ಆ ಇಬ್ಬರು ಸಖಿಯರು ಎಲ್ಲಿಯವರು ? ಕಾಣುತ್ತಲೇ ಇಲ್ಲವಲ್ಲ ? ಎಲ್ಲಿ ಹೋದರು ?' ಎಂದು.

೩೪೬. (ಆಗ ಮಹಲ್ಲಿಕೆಯು) "ಅವರನ್ನು ನೀವು ನೆನಪಿಸಿದ್ದು ಒಳ್ಳೆಯದಾಯಿತು. ನನಗೆ ಅವರಿಬ್ಬರೇ ಅಲ್ಲ, ಅಂತಹ ಸಖಿಯರು ಹನ್ನೆರಡು ಜನರಿದ್ದಾರೆ.

೩೪೭. ನನ್ನ ತಂದೆಯ ಸೋದರನು ಅವರನ್ನು ಸ್ವರ್ಗದಿಂದ ಕದ್ದು ತಂದಿದ್ದಾನೆ. ಒಬ್ಬಳು ಅಮೃತಪ್ರಭಾ, ಮತ್ತೊಬ್ಬಳು ಕೇಳಿನೀ.

---

ಮಾನುಷತ್ವಾಚ್ಚ ತಸ್ಮೈ ತಾಂ ನೈವಾದೇಯಮಮನ್ಯತ ।
ಸೋಽಪಿ ರೇಮೇ ತಯಾ ಸಾಕಮತ್ರ ಸೂರ್ಯಪ್ರಭಃ ಕೃತೀ ॥ ೩೪೧

ವಿದ್ಯಾವಿಭಕ್ತದೇಹೋಽತ್ರ ಸರ್ವಾಭಿರ್ಯುಗಪತ್ ಸಹ ।
ಅರಂಸ್ತಾಸುರಕನ್ಯಾಭಿಸ್ತಾಭಿಃ ಸಹ ನೃಪಾತ್ಮಜಃ ॥ ೩೪೨

ತಾತ್ತ್ವಿಕೇನ ತು ದೇಹೇನ ಭಜತೇ ಸ್ಮ ಸ ಭೂಯಸಾ ।
ಮಹಲ್ಲಿಕಾಂ ಪ್ರಿಯತಮಾಂ ಪ್ರಹ್ಲಾದಾಸುರಕನ್ಯಕಾಮ್ ॥ ೩೪೩

ಏಕದಾ ಚ ನಿಶಿ ಸ್ವೈರಂ ಸ್ಥಿತಸ್ತಾಂ ಸ ಮಹಲ್ಲಿಕಾಮ್ ।
ಏವಂ ಸೂರ್ಯಪ್ರಭೋಽಪೃಚ್ಛದಭಿಜಾತಾಂ ಕಥಾಂತರೇ ॥ ೩೪೪

ಪ್ರಿಯೇ ರಾತ್ರೌ ಸಹಾಯಾತೇ ಯೇ ದ್ವೇ ಸಖ್ಯೌ ತದಾ ತವ ।
ತೇ ಕುತಸ್ತ್ಯೇ ನ ಪಶ್ಯಾಮಿ ಕಿಂ ಚ ತೇ ಕ್ವ ಗತೇ ಇತಿ ॥ ೩೪೫

ತತೋ ಮಹಲ್ಲಿಕಾವಾದೀತ್ ಸುಷ್ಟ್ವಹಂ ಸ್ಮಾರಿತಾ ತ್ವಯಾ ।
ತೇ ನ ದ್ವೇ ಏವ ತಾಃ ಸಂತಿ ವಯಸ್ಯಾ ದ್ವಾದಶೇಹ ಮೇ ॥ ೩೪೬

ಮತ್ಪಿತೃವ್ಯೇಣ ಚ ಸ್ವರ್ಗಾದಾನೀತಾ ಅಪಹೃತ್ಯ ತಾಃ ।
ಏಕಾಮೃತಪ್ರಭಾ ನಾಮ ದ್ವಿತೀಯಾ ಕೇಳಿನೀ ತಥಾ ॥ ೩೪೭

೩೪೮. ಶುಭಲಕ್ಷಣೆಯರಾದ ಇವರು ಪರ್ವತ ಮುನಿಯ ಮಕ್ಕಳು. ಮೂರನೆಯವಳು ಕಾಳಿಂದೀ, ನಾಲ್ಕನೆಯವಳು ಭದ್ರಿಕಾ.

೩೪೯. ಚಾರುಲೋಚನೆಯಾದ ಐದನೆಯವಳು ದರ್ಪಕಮಾಲಾ. ಈ ಮೂವರೂ ದೇವಲನೆಂಬ ಮಹಾಮುನಿಯ ಸುಪುತ್ರಿಯರು.

೩೫೦. ಆರನೆಯವಳು ಸೌದಾಮನೀ, ಏಳನೆಯವಳು ಉಜ್ವಲೆ. ಇವರಿಬ್ಬರೂ ಹಾಹಾ ಎಂಬ ಗಂಧರ್ವನ ತನುಜೆಯರು.

೩೫೧. ಎಂಟನೆಯವಳು ಪೀವರಾ. ಈಕೆ ಹುಹೂ ಎಂಬ ಗಂಧರ್ವನ ಸುಪುತ್ರಿ. ಒಂಭತ್ತನೆಯವಳ ಹೆಸರು ಅಂಜನಿಕಾ ಎಂದು. ಇವಳು ಕಾಲರಾಜನ ಮಗಳು.

೩೫೨. ಹತ್ತನೆಯವಳಾದ ಕೇಸರಾವಳಿಯು ಪಿಂಗಳಗಣನೆಂಬುವನ ಮಗಳು. ಹನ್ನೊಂದನೆಯವಳೇ ಮಾಲಿನೀ. ಇವಳು ಕಂಬಲನ ಸುತೆ.

೩೫೩. ಮಂದಾರಮಾಲಾ ಎಂಬ ಹನ್ನೆರಡನೆಯ ಸಖಿ ವಸುರಾಜನ ಮಗಳು. ಇವರೆಲ್ಲ ಅಪ್ಸರೆಯರಲ್ಲಿ ಜನಿಸಿದ ದಿವ್ಯ ಸ್ತ್ರೀಯರು.

೩೫೪. ನಾನು ಮದುವೆಯಾದ ಮೇಲೆ ಅವರನ್ನೆಲ್ಲ ಪ್ರಥಮ ಪಾತಾಳಕ್ಕೆ ಕರೆದೊಯ್ಯಲಾಗಿದೆ ನಾನು ಅವರೊಡನೆ ಯಾವಾಗಲೂ ಇರುವಂತೆ ಆಗಲು ಅವರನ್ನೆಲ್ಲ ನಿನಗೆ ಮದುವೆಮಾಡಿಸಬೇಕೆಂದಿರುವೆ.

---

ಪರ್ವತಸ್ಯ ಮುನೇರೇತೇ ತನಯೇ ಶುಭಲಕ್ಷಣೇ ।
ಕಾಲಿಂದೀತಿ ತೃತೀಯಾ ಚ ಚತುರ್ಥೀ ಭದ್ರಿಕೇತಿ ಚ ॥ ೩೪೮
ತಥಾ ದರ್ಪಕಮಾಲೇತಿ ಪಂಚಮೀ ಚಾರುಲೋಚನಾ ।
ಏತಾ ಮಹಾಮುನೇಸ್ತಿಸ್ರೋ ದೇವಲಸ್ಯಾತ್ಮಸಂಭವಾಃ ॥ ೩೪೯
ಷಷ್ಠೀ ಸೌದಾಮನೀ ನಾಮ ಸಪ್ತಮೀ ಚೋಜ್ವಲಾಭಿದಾ ।
ಏತೇ ಹಾಹಾಭಿಧಾನಸ್ಯ ಗಂಧರ್ವಸ್ಯ ಸುತೇ ಉಭೇ ॥ ೩೫೦
ಅಷ್ಟಮೀ ಪೀವರಾ ನಾಮ ಗಂಧರ್ವಸ್ಯ ಹುಹೋಃ ಸುತಾ ।
ನವಮ್ಯಂಜನಿಕಾ ನಾಮ ಕಾಲಸ್ಯ ದುಹಿತಾ ವಿಭೋಃ ॥ ೩೫೧
ಪಿಂಗಲಾಚ್ಚ ಗಣಾಜ್ಜಾತಾ ದಶಮೀ ಕೇಸರಾವಳೀ ।
ಏಕಾದಶೀ ಮಾಲಿನೀತಿ ನಾಮ್ನಾ ಕಂಬಲನಂದಿನೀ ॥ ೩೫೨
ನಾಮ್ನಾ ಮಂದಾರಮಾಲೇತಿ ದ್ವಾದಶೀ ವಸುಕನ್ಯಕಾ ।
ಅಪ್ಸರಸ್ಸು ಸಮುತ್ಪನ್ನಾಃ ಸರ್ವಾ ದಿವ್ಯಸ್ತ್ರಿಯಸ್ತು ತಾಃ ॥ ೩೫೩
ಪಾತಾಲಂ ಪ್ರಥಮಂ ನೀತಾಃ ತಾಶ್ಚೋದ್ವಾಹೇ ಕೃತೇ ಮಮ ।
ತುಭ್ಯಂ ಮಯಾ ಚ ದೇಯಾಸ್ತಾಸ್ತದ್ಯುಕ್ತಾ ಸ್ಯಾಂ ಸದಾ ಯಥಾ ॥ ೩೫೪

೩೫೫. (ನಿನ್ನೊಡನೆ ಮದುವೆ ಮಾಡಿಸುತ್ತೇನೆಂದು) ನಾನು ಅವರಿಗೆ ಮಾತು ಕೊಟ್ಟಿದ್ದೇನೆ. ಅವರಲ್ಲಿ ನನಗೆ ತುಂಬ ಗೆಳೆತನ ಇದೆ. ಅವರಿಗೂ ನನ್ನಲ್ಲಿ ಅಪಾರವಾದ ಸ್ನೇಹ ಇದೆ. ನಾನು ಮೊದಲೇ ನನ್ನ ತಂದೆಗೆ (ಮದುವೆ ಮಾಡಿಸಲು) ಹೇಳಿದೆ. ಆದರೆ ಸೋದರನ ಅಧೀನದಲ್ಲಿರುವವರೆಂಬ ಕಾರಣದಿಂದ ಮದುವೆ ಮಾಡಿಸಲಿಲ್ಲ.

೩೫೬. ಇದನ್ನು ಕೇಳಿ, ಉದಾಸೀನತೆಯಿಂದ ಅವನು, "ಪ್ರಿಯೆ, ಮಹಾನುಭಾವಳಾದ ನೀನಿರುವಾಗ ಹೇಗೆ ತಾನೆ ಇದನ್ನು ಮಾಡಲಿ' ಎಂದನು.

೩೫೭–೩೫೮. ಆಗ ಕುಪಿತಳಾದ ಮಹಲ್ಲಿಕೆ ಎಂದಳು. "ನನ್ನ ಕಣ್ಣೆದುರಿಗೇ ಕಂಡ ಕಂಡವರನ್ನೆಲ್ಲಾ ಮದುವೆಯಾಗುತ್ತೀಯೆ. ಆದರೆ ನನ್ನ ಆತ್ಮೀಯ ಗೆಳತಿಯರನ್ನು ಮಾತ್ರ ಒಲ್ಲೆಯೆನ್ನುತ್ತೀಯೆ. ಅವರಿಲ್ಲದೆ ನನಗೆ ಒಂದು ಕ್ಷಣವೂ ಹಿತವೆನಿಸುವುದಿಲ್ಲ' (ಇದನ್ನು ಕೇಳಿ) ಸೂರ್ಯಪ್ರಭನು (ಅವಳ ಗೆಳತಿಯರನ್ನು ಮದುವೆಯಾಗಲು) ಸಂತೋಷದಿಂದ ಒಪ್ಪಿದನು.

೩೫೯. ನಂತರ, ಆಕೆಯೇ ಪ್ರಥಮಪಾತಾಳಕ್ಕೆ ಕರೆದೊಯ್ದು ತನ್ನ ಹನ್ನೆರಡೂ ಜನ ಗೆಳತಿಯರೊಡನೆ ಅವನಿಗೆ ವಿವಾಹ ಮಾಡಿಸಿದಳು.

೩೬೦. ಅಮೃತಪ್ರಭೆಯೇ ಮೊದಲಾದ ಹನ್ನೆರಡು ಜನ ದಿವ್ಯಾಂಗನೆಯರನ್ನು ಕ್ರಮವಾಗಿ ಮದುವೆಯಾದ ಸೂರ್ಯಪ್ರಭನು ರಾತ್ರಿ ಅವರೊಡನೆ ಸುಖಾನುಭವದಲ್ಲಿ ತೇಲಿದನು.

---

ಪ್ರತಿಜ್ಞಾತಂ ಮಯಾ ಚೈತತ್ತಾಸಾಂ ಸ್ನೇಹೋ ಹಿ ತಾಸು ಮೇ ।
ತಾತೋಽಪ್ಯುಕ್ತೋ ಮಯಾ ತೇನ ನ ದತ್ತಾ ಭ್ರಾತ್ರಪೇಕ್ಷಿಣಾ ॥ ೩೫೫
ಏತಚ್ಛ್ರುತ್ವಾ ಸವೈಲಕ್ಷ್ಯಸ್ತಾಂ ಸ ಸೂರ್ಯಪ್ರಭೋಽಬ್ರವೀತ್ ।
ಪ್ರಿಯೇ ಮಹಾನುಭಾವಾ ತ್ವಮಹಂ ಕುರ್ಯಾಂ ಕಥಂ ತ್ವಿದಮ್ ॥ ೩೫೬
ಏವಂ ಸೂರ್ಯಪ್ರಭೇಣೋಕ್ತಾ ರುಷಾವೋಚನ್ಮಹಲ್ಲಿಕಾ ।
ಮತ್ಸಮಕ್ಷಂ ವಹಸ್ಯನ್ಯಾ ಮದ್ವಯಸ್ಯಾಸ್ತು ನೇಚ್ಛಸಿ ॥ ೩೫೭
ಯಾಭಿರ್ವಿಯುಕ್ತಾ ರಜ್ಯೇಯಂ ನಾಹಮೇಕಮಪಿ ಕ್ಷಣಮ್ ।
ಇತ್ಯುಕ್ತಸ್ತು ತಯಾ ಸೂರ್ಯಪ್ರಭಸ್ತುಷ್ಟ್ಯಾನ್ವಮಂಸ್ತ ತತ್ ॥ ೩೫೮
ತತಸ್ತದೇವ ಪಾತಾಲಂ ನೀತ್ವೈವ ಪ್ರಥಮಂ ತಯಾ ।
ಪ್ರಹ್ಲಾದಸುತಯಾ ತಸ್ಮೈ ಪ್ರದತ್ತಾ ದ್ವಾದಶೈವ ತಾಃ ॥ ೩೫೯
ಅಥಾಮೃತಪ್ರಭಾಮುಖ್ಯಾಸ್ತಾಃ ಸ ಸೂರ್ಯಪ್ರಭಃ ಕ್ರಮಾತ್ ।
ಪರಿಣೀಯೋಪಭುಂಕ್ತೇ ಸ್ಮ ತಸ್ಯಾಂ ದಿವ್ಯಾಂಗನಾ ನಿಶಿ ॥ ೩೬೦

೩೬೧. ಮಾರನೆಯ ದಿನ ಬೆಳಿಗ್ಗೆ, ಮಹಲ್ಲಿಕೆಯನ್ನು ಕೇಳಿ (ಅವಳಿಗೆ ವಿಷಯ ತಿಳಿಸಿ) ಪ್ರಭಾಸನು ಅವರೆಲ್ಲರನ್ನೂ ಚತುರ್ಥರಸಾತಲಕ್ಕೆ ಕರೆದೊಯ್ದು ಗುಟ್ಟಾಗಿ ಇರಿಸಿದನು.

೩೬೨. ನಂತರ ಯಾರಿಗೂ ಕಾಣದಂತೆ ಆಕೆಯೊಡನೆ ಪ್ರಹ್ಲಾದನ ಸಭೆಗೆ ಆತನನ್ನು ಅಭಿನಂದಿಸಲೆಂದು ಹೋದನು.

೩೬೩. ಅಲ್ಲಿ ಆ ಅಸುರೇಂದ್ರನು ಮಯ ಮತ್ತು ಸುನೀಥರಿಗೆ, "ಎಲ್ಲರೂ ಹೋಗಿ, ದಿತಿ ಮತ್ತು ದನು ದೇವಿಯರನ್ನು ನೊಡಿ ಬನ್ನಿ' ಎಂದು ಹೇಳುತ್ತಿದ್ದನು.

೩೬೪. ಹಾಗೆಯೇ ಆಗಲೆಂದು ಒಪ್ಪಿ ಮಯನೂ, ಸುನೀಥನೂ ಮತ್ತು ಸೂರ್ಯಪ್ರಭನೂ ಇನ್ನೂ ಅನೇಕ ಅಸುರರೊಡನೆ ರಸಾತಲದಿಂದ ಹೊರಟರು. ಸಂಕಲ್ಪ ಮಾತ್ರದಿಂದ ಪ್ರತ್ಯಕ್ಷವಾದ ಭೂತಾಸನ ವಿಮಾನವನ್ನೇರಿ ಸುಮೇರು ಗಿರಿಶಿಖರಗಳಲ್ಲಿದ್ದ ಕಾಶ್ಯಪಮುನಿಯ ಆಶ್ರಮಕ್ಕೆ ಬಂದರು.

೩೬೫. ಅಲ್ಲಿ, ದಿತಿ ಮತ್ತು ದನು ದೇವಿಯರು ಒಟ್ಟಿಗೆ ಇದ್ದರು. (ಇವರು ಬಂದದ್ದನ್ನು) ಮುನಿಜನರು ಗೌರವದಿಂದ ನಿವೇದಿಸಿಕೊಂಡ ಬಳಿಕ ಇವರೆಲ್ಲ ದೇವಿಯರ ಬಳಿ ಸಾರಿ ಅವರ ಪಾದಗಳಲ್ಲಿ ತಲೆಯಿಟ್ಟು ಕ್ರಮವಾಗಿ ವಂದನೆಯನ್ನು ಸಲ್ಲಿಸಿದರು.

---

ಪ್ರಾತಶ್ಚ ತಾಃ ಪ್ರಭಾಸೇನ ನಾಯಯಿತ್ವಾ ರಸಾತಲಮ್ ।
ಚತುರ್ಥಂ ಸ್ಥಾಪಯಾಮಾಸ ಛನ್ನಾಃ ಪೃಷ್ಟ್ವಾ ಮಹಲ್ಲಿಕಾಮ್ ॥ ೩೬೧

ಸ್ವಯಂ ಚಾಲಕ್ಷಿತಃ ಸಾಕಂ ತಯಾ ತತ್ರೈವ ಸೋಽಗಮತ್ ।
ಸಭಾಜನಾಯ ಚ ಪ್ರಾಗ್ವತ್ಪ್ರಹ್ಲಾದಸ್ಯ ಸಭಾಂ ಯಯೌ ॥ ೩೬೨

ತತ್ರಾಸುರೇಂದ್ರೋ ವಕ್ತಿ ಸ್ಮ ತಂ ಸುನೀಥಂ ಮಯಂ ಚ ಸಃ ।
ಯಾತ ಸರ್ವೇ ದಿತಿದನೂ ದ್ರಷ್ಟುಂ ದೇವ್ಯಾವುಭೇ ಇತಿ ॥ ೩೬೩

ತಥೇತ್ಯಥ ರಸಾತಲಾತ್ಸಪದಿ ನಿರ್ಗತಾಸ್ತೇ ತತೋ
ಯಥಾಸ್ವಮಸುರೈಃ ಸಮಂ ಮಯಸುನೀಥಸೂರ್ಯಪ್ರಭಾಃ ।
ವಿಮಾನಮನುಚಿಂತಿತಂ ತದಧಿರುಹ್ಯ ಭೂತಾಸನಂ
ಸುಮೇರುಗಿರಿಸಾನುಗಂ ಪ್ರಯಯುರಾಶ್ರಮಂ ಕಾಶ್ಯಪಮ್ ॥
೩೬೪

ತತ್ರ ತೇ ದಿತಿದನೂ ಸಹಸ್ಥಿತೇ ಸಾದರೈರ್ಮುನಿಜನೈರ್ನಿವೇದಿತಾಃ ।
ಅಭ್ಯುಪೇತ್ಯ ದದೃಶುಃ ಕ್ರಮೇಣ ತೇ ಪಾದಯೋಶ್ಚ ಶಿರಸಾ ವವಂದಿರೇ ॥
೩೬೫

೩೬೬. ಅಸುರ ಮಾತೆಯರು ಪರಿವಾರ ಸಹಿತರಾಗಿ ಬಂದ ಇವರನ್ನು ಆದರದಿಂದ ಬರಮಾಡಿಕೊಂಡು ಕಣ್ಣೀರು ತುಂಬಿಕೊಂಡು ತಲೆಯನ್ನು ಮುತ್ತಿಟ್ಟು ಸಂತೋಷದಿಂದ ಮಯನಿಗೆ ಆಶೀರ್ವಾದ ಮಾಡಿ, ಇಂತೆಂದರು.

೩೬೭. ಮಗನೇ, ಮತ್ತೆ ಬದುಕಿಬಂದ ಈ ನಿನ್ನ ಮಗ ಸುನೀಥನನ್ನು ಕಂಡು ನಮ್ಮ ಕಣ್ಣುಗಳು ಸಫಲವಾದವು. ನೀನು ಮಹಾಪುಣ್ಯಶಾಲಿಯಾಗಿರಬೇಕೆಂದು ನಮ್ಮ ಭಾವನೆ.

೩೬೮. ಸೂರ್ಯಪ್ರಭನಾಗಿ ಮತ್ತೆ ಜನ್ಮ ಪಡೆದಿರುವ ಈ ಸುಮುಂಡೀಕನೂ ಕೂಡ ದಿವ್ಯಾಕೃತಿಯುಳ್ಳವನೂ ಅಸಾಧಾರಣಗುಣಗಳಿಂದ ಕೂಡಿರುವವನೂ ಆಗಿದ್ದಾನೆ. ಇಂದು ಕಾಣುತ್ತಿರುವ ಈತನ ಗುಣ ಲಕ್ಷಣಗಳು ಇವನು ಮುಂದೆ ಮಹಾ ಶ್ರೇಯಸ್ಸನ್ನು ಪಡೆಯುವ ಮಹಾವ್ಯಕ್ತಿ ಎಂದು ತೋರಿಸುತ್ತವೆ. ಇಂತಹವನನ್ನು ನೋಡಿ ನಮ್ಮೊಳಗೆ ಆಗುತ್ತಿರುವ ಅಂತಸ್ಸಂತೋಷದಿಂದಲೇ ಇವನನ್ನು ನಮಸ್ಕರಿಸುತ್ತೇವೆ.

೩೬೯. ಆದ್ದರಿಂದ ಮಕ್ಕಳೇ ಮೇಲೇಳಿ, ಬೇಗ ಹೋಗಿ ಪ್ರಜಾಪತಿಯಾದ ನಮ್ಮ ಪತಿದೇವನನ್ನು ಕಾಣಿರಿ. ಆತನ ದರ್ಶನ ಮಾತ್ರದಿಂದ ನಿಮ್ಮ ಭಾವಿ ಕಾರ್ಯಗಳು ನೆರವೇರುತ್ತವೆ. ನಿಮ್ಮ ಮಂಗಳಕ್ಕಾಗಿ ಆತನು ಹೇಳುವ ಮಾತನ್ನು ನಡೆಸಿ' ಎಂದರು.

---

ತೇ ಚ ತಾನಸುರಮಾತರಾವುಭೇ ಸಾನುಗಾನ್ಸಮವಲೋಕ್ಯ ಸಾದರೇ ।
ಸಾಶ್ರು ಮೂರ್ಧ್ನಿ ಪರಿಚುಂಬ್ಯ ಸಂಮದಾ
ದಾಶಿಷೋಽನುಪದಮೂಚತುರ್ಮಯಮ್ ॥ ೩೬೬

ಪ್ರಾಪ್ತಜೀವಿತಮಮುಂ ತವಾತ್ಮಜಂ ವೀಕ್ಷ್ಯ ಪುತ್ರಕ ಸುನೀಥಮಾವಯೋಃ ।
ಚಕ್ಷುರದ್ಯ ಸಫಲತ್ವಮಾಗತಂ ತ್ವಾಂ ಚ ಪುಣ್ಯಕೃತಮೇವ ಮನ್ಮಹೇ ॥ ೩೬೭

ಸುಮುಂಡೀಕಂ ಚೈತಂ ಕೃತಿನಮಹ ಸೂರ್ಯಪ್ರಭತಯಾ
ಪುನರ್ಜಾತಂ ದಿವ್ಯಾಕೃತಿಧರಮಸಾಧಾರಣಗುಣಮ್ ।
ಚಿತಂ ಭಾವಿಶ್ರೇಯಃ ಪ್ರಥಮಪಿಶುನೈರ್ಲಕ್ಷಣಗುಣೈ
ರ್ವಿಲೋಕ್ಯಾಂತಸ್ತೋಷಾತ್ಸ್ಫುಟಮಿಹ ನಮಾವಃ ಸ್ವವಪುಷಿ ॥
೩೬೮

ತಚ್ಛೀಘ್ರಮುತ್ತಿಷ್ಠತ ಯಾತ ವತ್ಸಾಃ ಪ್ರಜಾಪತಿಂ ದ್ರಷ್ಟುಮಿಹಾರ್ಯಪುತ್ರಮ್ ।
ತದ್ದರ್ಶನಾದ್ವೋ ಭವಿತಾರ್ಥಸಿದ್ಧಿಃ ಕಾರ್ಯಂ ಚ ವಸ್ತದ್ವಚನಂ ಶಿವಾಯ ॥
೩೬೯

೩೭೦. ಹೀಗೆ ದೇವಿಯರ ಆದೇಶವನ್ನು ಪಡೆದ ಮಯಾಸುರನೇ ಮುಂತಾದವರು ಹೋಗಿ ನಂತರ ದಿವ್ಯಾಶ್ರಮದಲ್ಲಿ ಕಾಶ್ಯಪ ಮುನಿಯ ದರ್ಶನ ಮಾಡಿದರು.

೩೭೧. ಆತನು ಕರಗಿದ ಶುದ್ಧ ಚಿನ್ನದಂತೆ ಹೊಳೆಯುವ ತೇಜಸ್ವಿಯೂ, ಜ್ವಾಲೆಯಂತೆ ಕಂದು ಬಣ್ಣದ ಜಟೆಯುಳ್ಳವನೂ ಅಗ್ನಿಯಂತೆ ಇರುವವನೂ ದೇವತೆಗಳನ್ನೂ ಹಿಮ್ಮೆಟ್ಟಿಸುವ ತೇಜಸ್ಸುಳ್ಳವನೂ ಆಗಿದ್ದನು.

೩೭೨. ಆತನನ್ನು ಕಂಡು ದಾನವ ಪ್ರಮುಖರೆಲ್ಲ ತಮ್ಮ ಜತೆಗಾರರೊಡನೆ ಪಾದಾಭಿವಂದನೆ ಮಾಡಿದರು. ಆತನು ಸಂತೋಷದಿಂದ ಕ್ರಮವಾಗಿ ಎಲ್ಲರಿಗೂ ಆಶೀರ್ವಾದವನ್ನು ಮಾಡಿ, ಕೂರಲು ಹೇಳಿ, ನಂತರ ಹೀಗೆಂದನು.

೩೭೩. ಮಕ್ಕಳನ್ನೆಲ್ಲ ಒಟ್ಟಿಗೆ ನೋಡಿದ ನನ್ನ ಸಂತೋಷಕ್ಕೆ ಪಾರವೇ ಇಲ್ಲ. ಮಯಾಸುರ, ನಿನ್ನನ್ನು ಮೆಚ್ಚಲೇಬೇಕು. ಎಲ್ಲ ವಿದ್ಯೆಗಳನ್ನೂ ತಿಳಿದಿರುವೆ. ಎಂದೂ ನೀನು ಸನ್ಮಾರ್ಗವನ್ನು ಬಿಟ್ಟವನಲ್ಲ. ಸುನೀಥ, ಕಳೆದು ಹೋದ ಜೀವಿತವನ್ನು ಮತ್ತೆ ಪಡೆದ ನೀನೇ ಧನ್ಯ. ಸೂರ್ಯಪ್ರಭ, ವಿದ್ಯಾಧರ ಚಕ್ರವರ್ತಿಯಾಗುವ ನೀನು ಎಂತಹ ಪುಣ್ಯಶಾಲಿ!

---

ಇತಿ ತಾಭ್ಯಾಮಾದಿಷ್ಟಾ ದೇವೀಭ್ಯಾಂ ತೇ ತಥೈವ ಗತ್ವಾ ತಮ್ ।
ಕಾಶ್ಯಪಮುನಿಂ ಮಯಾದ್ಯಾ ದದೃಶುರ್ದಿವ್ಯಾಶ್ರಮೇ ತತ್ರ ॥ ೩೭೦

ದ್ರುತಶುದ್ಧಹಾಟಕಾಭಂ ತೇಜೋಮಯಮಾಶ್ರಮೇ ಚ ದೇವಾನಾಮ್ ।
ಜ್ವಾಲಾಕಪಿಲಜಟಾಧರಮನಲಸಮಾನಂ ದುರಾಧರ್ಷಮ್ ॥ ೩೭೧

ಉಪಗಮ್ಯ ಚ ತಸ್ಯ ಪಾದಯೋಸ್ತೇ
ನಿಪತಂತಿ ಸ್ಮ ಸಹಾನುಗೈಃ ಕ್ರಮೇಣ ।
ಅಥ ಸೋऽಪಿ ಮುಹುಃ ಕೃತೋಚಿತಾಶೀಃ
ಪರಿತೋಷಾದುಪವೇಶ್ಯ ತಾನುವಾಚ ॥ ೩೭೨

ಆನಂದಃ ಪರಮೋ ಮಮೈಷ ಯದಮೀ ದೃಷ್ಟಾಃ ಸ್ಥ ಸರ್ವೇ ಸುತಾಃ
ಶ್ಲಾಘ್ಯಸ್ತ್ವಂ ಮಯ ಸತ್ಪಥಾದಚಲಿತೋ ಯಃ ಸರ್ವವಿದ್ಯಾಸ್ಪದಮ್ ।
ಧನ್ಯಸ್ತ್ವಂ ಚ ಸುನೀಥ ಯೇನ ಗತಮಪ್ಯಾಪ್ತಂ ಪುನರ್ಜೀವಿತಂ
ತ್ವಂ ಸೂರ್ಯಪ್ರಭ ಪುಣ್ಯವಾಂಶ್ಚ ಭವಿತಾ ಯಃ ಖೇಚರಾಣಾಂ ಪತಿಃ ॥
೩೭೩

೩೭೪. ನೀವೆಲ್ಲರೂ ಧರ್ಮಮಾರ್ಗದಲ್ಲಿಯೇ ಇರತಕ್ಕದ್ದು ಸೂಕ್ತ. ನಮ್ಮ ಮಾತನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಿ. ಅಗಾಧವಾದ ಸಂಪತ್ತನ್ನು ಪಡೆದು ಅದರಿಂದ ನಿರಂತರವಾದ ಸುಖವನ್ನು ಅನುಭವಿಸಿರಿ. ಹಿಂದೆ ಆದಂತೆ ಶತ್ರುಗಳಿಂದ ಮತ್ತೆ ನಿಮಗೆ ಸೋಲುಂಟಾಗದಿರಲಿ. ಧರ್ಮಮಾರ್ಗಭ್ರಷ್ಟರಾದ ಅಸುರರು ಮುರಾರಿಯಾದ ಮಹಾವಿಷ್ಣುವಿನ ಚಕ್ರಕ್ಕೆ ಸಿಕ್ಕಿ ನಾಶವಾದರಲ್ಲವೇ ?

೩೭೫. ಸುನೀಥ, ಹಿಂದೆ ದೇವತೆಗಳಿಂದ ಹತರಾದ ಅಸುರರೇ ಮರ್ತ್ಯಲೋಕದ ವೀರರಾಗಿ ಅವತರಿಸಿದ್ದಾರೆ. ನಿನ್ನ ತಮ್ಮನಾಗಿದ್ದ ಸುಮುಂಡೀಕನು ಇಂದು ಸೂರ್ಯಪ್ರಭನಾಗಿ ಹುಟ್ಟಿದ್ದಾನೆ.

೩೭೬. ಇನ್ನೂ ಅನೇಕ ಅಸುರರು ಇವನ ಗೆಳೆಯರಾಗಿದ್ದವರು ಈಗ ಇವನ ಬಾಂಧವರಾಗಿ ಹುಟ್ಟಿದ್ದಾರೆ. ಹಿಂದೆ ಶಂಬರನಾಗಿದ್ದ ಮಹಾಸುರನು ಇಂದು ಸಚಿವನಾದ ಪ್ರಹಸ್ತನಾಗಿದ್ದಾನೆ.

೩೭೭. ತ್ರಿಶಿರನೆಂಬ ಅಸುರನು ಇಂದು ಸಿದ್ಧಾರ್ಥನೆಂಬ ಮಯಸಚಿವನಾಗಿದ್ದಾನೆ. ವಾತಾಪಿಯೆಂಬ ದಾನವನು ಪ್ರಜ್ಞಾಢ್ಯನೆಂಬ ಮಂತ್ರಿಯಾಗಿದ್ದಾನೆ.

---

ತದ್ಧರ್ಮೇ ಪಥಿ ವರ್ತಿತವ್ಯಮಧುನಾ ಬೋದ್ಧವ್ಯಮಸ್ಮದ್ವಚೋ
ಭೋಕ್ತ್ಯಧ್ವೇ ಸತತಂ ಸುಖಾನಿ ಪರಮಾಮಾಸಾದ್ಯ ಯೇನ ಶ್ರಿಯಮ್ ।
ನೈವ ಸ್ಯಾಚ್ಚ ಪುರಾ ಯಥಾ ಪರಿಭವೋ ಭೂಯಃ ಪರೇಭ್ಯೋಽತ್ರ ವೋ
ಧರ್ಮಾತಿಕ್ರಮಿಣೋಽಸುರಾ ಹಿ ಮುರಜಿಚ್ಚಕ್ರಸ್ಯ ಯಾತಾ ವಶಮ್ ॥ ೩೭೪

ಯೇ ಚಾಸುರಾ ದೇವಹತಾಃ ಸುನೀಥ
ಮರ್ತ್ಯಪ್ರವೀರಾಸ್ತ ಇಮೇಽವತೀರ್ಣಾಃ ।
ಯೋಽಭೂತ್ ಸುಮುಂಡೀಕ ಇಹಾನುಜಸ್ತೇ
ಸೂರ್ಯಪ್ರಭಃ ಸೈಷ ಕಿಲಾದ್ಯ ಜಾತಃ ॥ ೩೭೫
ಅನ್ಯೇಽಪಿ ತೇಽಮೀ ಅಸುರಾ ವಯಸ್ಯಾ
ಅಸ್ಯೈವ ಜಾತಾಃ ಖಲು ಬಾಂಧವಾಶ್ಚ ।
ಯಃ ಶಂಬರಾಖ್ಯಶ್ಚ ಮಹಾಸುರೋಽಭೂತ್
ಸೈಷೋಽದ್ಯ ಜಾತಃ ಸಚಿವಃ ಪ್ರಹಸ್ತಃ ॥ ೩೭೬
ಯಶ್ಚಾಸುರೋಽಭೂತ್ ತ್ರಿಶಿರಾ ಸಜಾತಃ
ಸಿದ್ಧಾರ್ಥನಾಮಾ ಸಚಿವೋ ಮಯಸ್ಯ ।
ವಾತಾಪಿರಿತ್ಯಾಸ ಸ ದಾನವೋ ಯಃ
ಪ್ರಜ್ಞಾಢ್ಯನಾಮಾಸ್ಯ ಸ ಏವ ಮಂತ್ರೀ ॥ ೩೭೭

೩೭೮. ಉಲೂಕನೆಂಬ ದನುಜನು ಇವನ ಗೆಳೆಯನಾದ ಶುಭಂಕರನಾಗಿದ್ದಾನೆ. ಇಂದು ಇವನ ಗೆಳೆಯನಾಗಿರುವ ವೀತಭೀತಿಯು ಹಿಂದೆ ಕಾಲನೆಂಬ ಅಸುರನಾಗಿದ್ದವನು.

೩೭೯. ಭಾಸನೆಂಬ ಇವನ ಸಚಿವನು ವೃಷಪರ್ವನೆಂಬ ದೈತ್ಯನಾಗಿದ್ದವನು. ವತ್ಸದೇಶದಲ್ಲಿ ಹುಟ್ಟಿದ ಪ್ರಭಾಸನೆಂಬ ಮಂತ್ರಿಯು ಪ್ರಬಲನೆಂಬ ದೈತ್ಯನ ಅವತಾರ.

೩೮೦–೩೮೧. ಶತ್ರುಪಕ್ಷದವರಾದ ದೇವತೆಗಳೇ ರತ್ನಮಯನಾದ ಯಾವ ಮಹಾತ್ಮನನ್ನು ಬಯಸುತ್ತಾರೆಯೋ, ಯಾವನಿಂದ ಸಕಲವಿಧವಾದ ರತ್ನಗಳು ಹುಟ್ಟುತ್ತವೆಯೋ, ಯಾರು ಚಂಡಿಕಾದೇವಿಯನ್ನೇ ತೃಪ್ತಿಗೊಳಿಸಿ ಅನ್ಯದೇಹದಲ್ಲಿ ಹೋಗುವ ವರವನ್ನು ಪಡೆದನೋ ಯಾರು ಅಂಶಾವತಾರಿಯಾಗಿರುವನೋ ಆ ಪ್ರಭಾಸನು ಇಂದು ಶತ್ರುಗಳಿಗೆ ಅಸಹನೀಯನಾದ ಮಹಾಬಲನಾಗಿದ್ದಾನೆ.

೩೮೨. ಹಿಂದೆ ಯಾರು ಸುಂದ ಉಪಸುಂದರೆಂಬ ದಾನವರಾಗಿದ್ದರೋ ಅವರೇ ಇಂದು ಸರ್ವದಮನ, ಭಯಂಕರರೆಂಬ ಇವನ ಮಂತ್ರಿಗಳಾಗಿದ್ದಾರೆ.

---

ಉಲೂಕನಾಮಾ ದನುಜಶ್ಚ ಯೋಽಭೂತ್
ಸೋಽಯಂ ವಯಸ್ಯೋಽಸ್ಯ ಶುಭಂಕರಾಖ್ಯಃ ।
ಯೋಽಯಂ ವಯಸ್ಯೋಽಸ್ಯ ಚ ವೀತಭೀತಿಃ
ಸ ಕಾಲನಾಮಾ ಹ್ಯಭವತ್ ಸುರಾರಿಃ ॥ ೩೭೮

ಯಶ್ಚೈಷ ಭಾಸಃ ಸಚಿವೋಽಸ್ಯ ಸೋಽಯಂ
ದೈತ್ಯೋಽವತೀರ್ಣೋ ವೃಷಪರ್ವನಾಮಾ ।
ಯೋಽಯಂ ಪ್ರಭಾಸಶ್ಚ ಸ ಏಷ ದೈತ್ಯೋ
ವತ್ಸಾವತೀರ್ಣಃ ಪ್ರಬಲಾಭಿಧಾನಃ ॥ ೩೭೯

ಮಹಾತ್ಮನಾ ರತ್ನಮಯೇನ ಯೇನ ದೇವೈರ್ವಿಪಕ್ಷೈರಪಿ ಯಾಚಿತೇನ ।
ಕೃತ್ವಾ ಶರೀರಂ ದಲಶೋಽವತೀರ್ಣಂ ರತ್ನಾನಿ ಜಾತಾನ್ಯಖಿಲಾನಿ ಯಸ್ಮಾತ್ ॥
೩೮೦

ತತ್ತೋಷತಶ್ಚಂಡಿಕಯಾಸ್ಯ ದೇವ್ಯಾ
ವರೋಽನ್ಯದೇಹಾನುಗತಃ ಸ ದತ್ತಃ ।
ಯೇನ ಪ್ರಭಾಸೋಽದ್ಯ ಸ ಏಷ ಜಾತೋ
ಮಹಾಬಲೋ ದುಷ್ಪ್ರಸಹೋ ರಿಪೂಣಾಮ್ ॥ ೩೮೧

ಯೌ ದಾನವಾವಭೂತಾಂ ಪೂರ್ವಂ ಸುಂದೋಪಸುಂದನಾಮಾನೌ ।
ತಾವೇತೌ ಸರ್ವದಮನಭಯಂಕರಾವಸ್ಯ ಮಂತ್ರಿಣೌ ಜಾತೌ ॥ ೩೮೨

೩೮೩. ಹಯಗ್ರೀವ ಮತ್ತು ವಿಕಟಾಕ್ಷರೆಂಬ ಇಬ್ಬರು ಅಸುರರು ಇಂದು ಸ್ಥಿರಬುದ್ಧಿ ಮತ್ತು ಮಹಾಬುದ್ಧಿ ಎಂಬ ಮಂತ್ರಿಗಳಾಗಿದ್ದಾರೆ.

೩೮೪. ಈತನಿಗೆ ಈಗ ಹೆಣ್ಣುಕೊಟ್ಟಿರುವ ಮಾವಂದಿರು, ಸಚಿವರು, ಬಾಂಧವರು ಎಲ್ಲರೂ ಅಸುರಾವತಾರಿಗಳೇ. ಇವರೆಲ್ಲ ಹಿಂದೆ ಇಂದ್ರಾದಿ ದೇವತೆಗಳನ್ನು ಅನೇಕಬಾರಿ ಸೋಲಿಸಿದ್ದಾರೆ.

೩೮೫. ಈ ರೀತಿಯಾಗಿ ನಮ್ಮ ಪಕ್ಷವು ಪುನಃ ಕ್ರಮವಾಗಿ ಏಳ್ಗೆಯಾಗಿರುವುದು ಸಂತೋಷಕರ. ಧೈರ್ಯದಿಂದ ಇರಿ. ಧರ್ಮವನ್ನು ಬಿಡದಿರಿ. ನಿಮಗೆ ಪರಮ ಸಮೃದ್ಧಿ ಒದಗಲಿ.

೩೮೬. ಹೀಗೆಂಬುದಾಗಿ ಕಾಶ್ಯಪ ಋಷಿಯು ಹೇಳುತ್ತಿರಲಾಗಿ, ಈತನ ಪತ್ನಿಯರಾದ ಅದಿತಿಯೇ ಮುಂತಾದ ಎಲ್ಲ ದಾಕ್ಷಾಯಣಿಯರೂ ಮಾಧ್ಯಾಹ್ನಿಕ ಸವನದ ಸಮಯದಲ್ಲಿ ಅಲ್ಲಿಗೆ ಬಂದರು.

೩೮೭. ಮಯಾದಿ ಅಸುರರೆಲ್ಲ ಅವರಿಗೆ ನಮಸ್ಕರಿಸಲಾಗಿ, ಆಶೀರ್ವಾದ ಮಾಡಿದರು. ಆಹ್ನಿಕಕ್ಕಾಗಿ ಪತಿಯು ಆದೇಶ ನೀಡುವಷ್ಟರಲ್ಲಿ ಎಲ್ಲ ಲೋಕಪಾಲರೊಡಗೂಡಿದ ಶಕ್ರನೂ ಕೂಡ ಮುನಿಯನ್ನು ಕಾಣಲು ಅಲ್ಲಿಗೈತಂದನು.

೩೮೮. ಅವನು ಪತ್ನೀಸಹಿತನಾದ ಕಶ್ಯಪ ಮುನಿಯ ಚರಣಗಳನ್ನು ವಂದಿಸಿದ ಬಳಿಕ ಮಯಾದಿ ಅಸುರರೆಲ್ಲ ಶಕ್ರನಿಗೆ ವಂದಿಸಿದರು. ನಂತರ ರೋಷದಿಂದ ಕೂಡಿದ ಅವನು ಸೂರ್ಯಪ್ರಭನನ್ನು ನೋಡಿ ಮಯನಿಗೆ ಹೇಳಿದನು.

---

ಯಶ್ಚ ಹಯಗ್ರೀವಾಖ್ಯೋ ವಿಕಟಾಕ್ಷಶ್ಚಾಸುರಾವಭೂತಾಂ ದ್ವೌ ।
ಸ್ಥಿರಬುದ್ಧಿಮಹಾಬುದ್ಧೀ ಉತ್ಪನ್ನಾವಸ್ಯ ತಾವಿಮೌ ಸಚಿವೌ ॥ ೩೮೩
ಅನ್ಯೇಪ್ಯಸ್ಯ ಯ ಏತೇ ಶ್ವಶುರಾಃ ಸಚಿವಾದಿಬಾಂಧವಾ ಯೇ ಚ ।
ತೇಽಪ್ಯವತೀರ್ಣಾ ಅಸುರಾ ಯೈರಿಂದ್ರಾದ್ಯಾಃ ಪರಾಜಿತಾ ಬಹುಶಃ ॥ ೩೮೪
ತದ್ಯುಷ್ಮಾಕಂ ಪಕ್ಷಃ ಪುನರಪ್ಯೇವಂ ಕ್ರಮಾದ್ಗತೋ ವೃದ್ಧಿಮ್ ।
ಧೀರಾ ಭವತ ಸಮೃದ್ಧಿಂ ಪ್ರಾಪ್ಸ್ಯಥ ಧರ್ಮಾದವಿಚ್ಯುತಾಃ ಪರಮಾಮ್ ॥ ೩೮೫
ಇತಿ ವದತಿ ಕಾಶ್ಯಪರ್ಷೌ ದಾಕ್ಷಾಯಣ್ಯಃ ಕಿಲಾಸ್ಯ ಪತ್ನ್ಯೋಽತ್ರ ।
ಅದಿತಿಪ್ರಮುಖಾಃ ಸರ್ವಾ ಮಾಧ್ಯಂದಿನಸವನಸಮಯ ಆಜಗ್ಮುಃ ॥ ೩೮೬
ದತ್ತ್ವಾಶಿಷಂ ಮಯಾದಿಷು ನಮತ್ಸು ಭರ್ತುಃ ಕೃತಾಹ್ನಿಕಾಜ್ಞಾಸು ।
ತಾಸ್ವಥ ಶಕ್ರೋಽತ್ರಾಗಾತ್ಸಲೋಕಪಾಲೋಽಪಿ ತಂ ಮುನಿಂ ದ್ರಷ್ಟುಮ್ ॥
೩೮೭
ವಂದಿತಸದಾರಕಶ್ಯಪಮುನಿಚರಣೋ ವಂದಿತೋ ಮಯಾದ್ಯೈಶ್ಚ ।
ಸೋಽಥ ಸರೋಷಂ ಪಶ್ಯನ್ ಸೂರ್ಯಪ್ರಭಮುಕ್ತವಾನ್ಮಯಂ ಶಕ್ರಃ ॥ ೩೮೮

೩೮೯. "ಇವನೇ ವಿದ್ಯಾಧರ ಚಕ್ರವರ್ತಿಪದವಿಯನ್ನು ಆಶಿಸುತ್ತಿರುವ ಹುಡುಗನಲ್ಲವೇ ? ಇವನು ಅಷ್ಟಕ್ಕೇ ಹೇಗೆ ತೃಪ್ತನಾಗಿ ಇಂದ್ರಪದವಿಯನ್ನು ಬಯಸುವುದಿಲ್ಲ?'

೩೯೦. ಆ ಮಾತನ್ನು ಕೇಳಿ ಮಯನು ಇಂತೆಂದನು, "ದೇವೇಶನೇ, ಪರಮೇಶ್ವರನೇ ನಿನ್ನಲ್ಲಿ ಇಂದ್ರತ್ವವನ್ನೂ, ಇವನಲ್ಲಿ ಖೇಚರಾಧೀಶ್ವರತ್ವವನ್ನೂ ನಿಯಾಮಕ ಮಾಡಿ ಆದೇಶಿಸಿದ್ದಾನೆ.

೩೯೧. ಮಯನ ಮಾತನ್ನು ಕೇಳಿ ಇಂದ್ರನು ನಕ್ಕು ಕುಪಿತನಾಗಿ ಹೇಳಿದನು, "ಸುಂದರಾಕಾರನಾದ ಇವನ ಯೋಗ್ಯತೆಗೆ ಅದು ಅತ್ಯಲ್ಪವಾಯಿತೇನೋ !'

೩೯೨. ಆಗ ಮಯನು, "ಶ್ರುತಶರ್ಮನು ಖೇಚರೇಂದ್ರನಾಗಲು ಎಲ್ಲಿ ಯೋಗ್ಯನೋ ಅಲ್ಲಿ ನಿಶ್ಚಯವಾಗಿಯೂ ಇವನ ಆಕೃತಿಯು ಇಂದ್ರ ಪದವಿಯನ್ನು ಪಡೆಯಲು ಅರ್ಹವಾದುದೇ ಸರಿ' ಎಂದಾಗ

೩೯೩. ಅವನಲ್ಲಿ ಅತೀವ ಕುಪಿತನಾದ ಇಂದ್ರನು ವಜ್ರಾಯುಧವನ್ನು ಹಿಡಿದು ಹೊಡೆಯಲು ಮುನ್ನುಗ್ಗಿದಾಗ ಕಶ್ಯಪಮುನಿಯು ಕೋಪದಿಂದ ಹೂಂಕರಿಸಿದನು.

೩೯೪. ದಿತಿ ಮುಂತಾದ ಮಾತೆಯರೆಲ್ಲ ಧಿಕ್ಕಾರ ಹಾಕಿ ಕೋಪದಿಂದ ಮುಖ ಕೆಂಪಗೆ ಮಾಡಿಕೊಂಡರು. ಆಗ, ಶಾಪ ನೀಡಿಯಾರೆಂಬ ಭಯದಿಂದ ಇಂದ್ರನು ಆಯುಧವನ್ನಿಳಿಸಿ ತಲೆತಗ್ಗಿಸಿ (ವಿನಯದಿಂದ) ಕುಳಿತನು.

---

ಏಷೋಽರ್ಭಕಃ ಸ ಜಾನೇ ವಿದ್ಯಾಧರಚಕ್ರವರ್ತಿತಾಕಾಮಃ ।
ತದಸೌ ಸ್ವಲ್ಪೇನ ಕಥಂ ಸಂತುಷ್ಟೋ ನೇಂದ್ರತಾ ಕಿಮರ್ಥ್ಯಯತೇ ॥ ೩೮೯
ತಚ್ಛ್ರುತ್ವೈವ ಮಯಸ್ತಂ ಜಗಾದ ದೇವೇಶ ತತ್ತ್ವಯೀಂದ್ರತ್ವಮ್ ।
ಪರಮೇಶ್ವರೇಣ ನಿರ್ಮಿತಮಾದಿಷ್ಟಂ ಚಾಸ್ಯ ಖೇಚರೇಶತ್ವಮ್ ॥ ೩೯೦
ಇತಿ ಮಯವಚನಾನ್ಮಘವಾ ಸ ತದಾ ವಿಹಸನ್ನುವಾಚ ಸಾಮರ್ಷಃ ।
ಅತ್ಯಲ್ಪಂ ಹಿ ತದಸ್ಯಾಃ ಸುಲಕ್ಷಣಸ್ಯಾಕೃತೇರಮುಷ್ಯೇತಿ ॥ ೩೯೧
ಅಥ ಸಮಯೋಽಪ್ಯವದತ್ತಂ ಶ್ರುತಶರ್ಮಾ ಯತ್ರ ಖೇಚರೇಂದ್ರತ್ವೇ ।
ಯೋಗ್ಯಸ್ತತ್ರಾಸಂಶಯಮಾಕೃತಿರಸ್ಯಾಯಮರ್ಹತೀಂದ್ರತ್ವಮ್ ॥ ೩೯೨
ಇತ್ಯುಕ್ತವತೇ ತಸ್ಮೈ ಮಯಾಯ ಕುಪಿತಃ ಸ ವಜ್ರಮುದ್ಯಮ್ಯ ।
ಮಘವೋತ್ತಸ್ಥೌ ಕಶ್ಯಪಮುನಿರಕರೋಚ್ಚಾಥ ಕೋಪಹುಂಕಾರಮ್ ॥ ೩೯೩
ಧಿಕ್ಕಾರಮುಖರತಾಮ್ರೈರ್ವದನೈಃ ಕೋಪಂ ಯಯುಶ್ಚ ದಿತ್ಯಾದ್ಯಾಃ ।
ತತ ಇಂದ್ರಃ ಶಾಪಭಯಾದುಪಾವಿಶತ್ಸಂಹೃತಾಯುಧೋಽವನತಃ ॥ ೩೯೪

೩೯೬. ಬಳಿಕ, ಅವನು ಸುರಾಸುರರಿಬ್ಬರಿಗೂ ತಂದೆಯಾದ, ಪತ್ನೀ ಸಹಿತನಾದ ಕಶ್ಯಪ ಮುನಿಯ ಪಾದಕ್ಕೆರಗಿ ಅವನನ್ನು ಸಾಂತ್ವನಗೊಳಿಸಿ ಕೈಮುಗಿದು ಹೀಗೆ ವಿಜ್ಞಾಪಿಸಿಕೊಂಡನು.

೩೯೭. "ಭಗವನ್, ನಾನು ಶ್ರುತಶರ್ಮನಿಗೆ ಕೊಟ್ಟಿರುವ ವಿದ್ಯಾಧಿರಾಜಪದವಿಯನ್ನು ಕಿತ್ತುಕೊಳ್ಳಲು ಈ ಸೂರ್ಯಪ್ರಭನು ಹವಣಿಸುತ್ತಿದ್ದಾನೆ.

೩೯೭. ಅವನ ಈ ಹವಣಿಕೆ ಕೈಗೂಡಲು ಸರ್ವವಿಧದಿಂದಲೂ ಸಹಕಾರ ನೀಡುವ ಉದ್ಯೋಗ ಈ ಮಯನದು.' ಈ ಮಾತನ್ನು ಕೇಳಿ ದಿತಿ, ದನು ಸಹಿತನಾದ ಪ್ರಜಾಪತಿಯು ಇಂದ್ರನಿಗೆ ಹೇಳಿದನು.

೩೯೮. "ನಿನಗೆ ಶ್ರುತಶರ್ಮ ಇಷ್ಟನಾದವನು. ಶಂಭುವಿಗೆ ಸೂರ್ಯಪ್ರಭನೇ ಇಷ್ಟ. ಶ್ರುತಶರ್ಮನು ವಿದ್ಯಾಧರ ಚಕ್ರವರ್ತಿಯಾಗುವುದು ತನಗೆ ಇಷ್ಟವಿಲ್ಲವೆಂದು ಮೊದಲೇ ಶರ್ವನು ಮಯನಿಗೆ ಹೇಳಿದ್ದಾನೆ.

೩೯೯. ಅಂದಮೇಲೆ ನೀನು ಮಯನನ್ನು ಕುರಿತು ಏನೇನೋ ಗಳಹುತ್ತೀದಿಯಲ್ಲ. ಇವನದೇನು ತಪ್ಪು ? ಮಯನು ಜ್ಞಾನಿಯೂ, ವಿಶೇಷ ತಿಳುವಳಿಕೆಯುಳ್ಳವನೂ, ಧರ್ಮಮಾರ್ಗಿಯೂ, ಗುರುಹಿರಿಯರಿಗೆ ಬಾಗಿ ನಡೆಯುವವನೂ ಆಗಿದ್ದಾನೆ.

೪೦೦. ನೀನೇನಾದರೂ ಪಾಪಕೆಲಸ ಮಾಡಿದ್ದೇ ಆದರೆ ನಮ್ಮ ಕ್ರೋಧಾಗ್ನಿಯು ನಿನ್ನನ್ನು ಸುಟ್ಟುಬಿಡುತ್ತದೆ ಎಚ್ಚರ ! ಇವನಿಗೆ ಸವಾಲೊಡ್ಡಲು ನೀನೆಷ್ಟರವನು ? ಅವನ ಪ್ರಭಾವ ಎಷ್ಟೆಂಬುದನ್ನು ತಿಳಿದಿಲ್ಲವೇನು ?

---

ಪ್ರಣಿಪತ್ಯ ಪಾದಯೋರಥ ದಾರಯುತಂ ತಂ ಸುರಾಸುರಪ್ರಭವಮ್ ।
ಕಶ್ಯಪಮುನಿಂ ಪ್ರಸಾದ್ಯ ಚ ವಿಜ್ಞಾಪಿತವಾನ್ಕೃತಾಂಜಲಿಃ ಶಕ್ರಃ ॥ ೩೯೬
ಶ್ರುತಶರ್ಮಣೇ ಮಯಾ ಯದ್ಭಗವತ್ವಿದ್ಯಾಧರಾಧಿರಾಜತ್ವಮ್ ।
ದತ್ತಂ ತದೇಷ ಹರ್ತುಂ ಸೂರ್ಯಪ್ರಭ ಉದ್ಯತೋಽಧುನಾ ತಸ್ಯ ॥ ೩೯೭
ಏಷ ಚ ಸರ್ವಾಕಾರಂ ಮಯೋಽಸ್ಯ ತತ್ಸಾಧನೇ ಕೃತೋದ್ಯೋಗಃ ।
ತಚ್ಛ್ರುತ್ವಾ ಸ ತಮಿಂದ್ರಂ ದಿತಿದನುಸಹಿತಃ ಪ್ರಜಾಪತಿರವೋಚತ್ ॥ ೩೯೭
ಇಷ್ಟಸ್ತೇ ಶ್ರುತಶರ್ಮಾ ಮಘವನ್ಸೂರ್ಯಪ್ರಭಶ್ಚ ಶರ್ವಸ್ಯ ।
ನ ಚ ತಸ್ಯೇಚ್ಛಾಮಿ ತಥಾ ತೇನಾಜ್ಞಪ್ತಶ್ಚ ಪೂರ್ವಮತ್ರ ಮಯಃ ॥ ೩೯೮
ತತ್ತ್ವಂ ಮಯಸ್ಯ ಕಿಂ ಖಲು ಜಲ್ಪಸಿ ಕಥಯಾತ್ರ ಕೋಪರಾಧೋಽಸ್ಯ ।
ಏಷ ಹಿ ಧರ್ಮಪಥಸ್ಥೋ ಜ್ಞಾನೀ ವಿಜ್ಞಾನವಾನ್ ಗುರುಪ್ರಣತಃ ॥ ೩೯೯
ಭಸ್ಮೀಕರಿಷ್ಯದಸ್ಮತ್ಕ್ರೋಧಾಗ್ನಿಃ ತ್ವಾಮಘಂ ವ್ಯಧಾಸ್ಯಶ್ಚೇತ್ ।
ನ ಚ ಶಕ್ತಸ್ತ್ವಮಿಮಂ ಪ್ರತಿ ಪ್ರಭಾವಮೇತಸ್ಯ ಕಿಂ ನ ಜಾನಾಸಿ ॥ ೪೦೦

೧೦೧. ಹೀಗೆ ಪತ್ನೀ ಸಮೇತನಾಗಿದ್ದ ಕಾಶ್ಯಪಮುನಿಯು ಗುಡುಗಲಾಗಿ ನಾಚಿಕೆಯಿಂದಲೂ, ಹೆದರಿಕೆಯಿಂದಲೂ ಇಂದ್ರನು ತಲೆಬಾಗಿದನು. ಆಗ ಅದಿತಿಯು, "ಶ್ರುತಶರ್ಮನು ಹೇಗಿರುವನೋ ನೋಡೋಣ. ಇಲ್ಲಿ ಕರೆದು ತೋರಿಸು', ಎಂದಳು.

೧೦೨. ಅದನ್ನು ಕೇಳಿ ಶಕ್ರನು ಆ ಕ್ಷಣದಲ್ಲೇ ಮಾತಲಿಗೆ ಆದೇಶ ನೀಡಿ ಆಕಾಶಗಾಮಿಗಳ ರಾಜನಾದ ಶ್ರುತಶರ್ಮನನ್ನು ಕರೆಸಿದನು.

೧೦೩. ಬಂದು ನಮಸ್ಕರಿಸಿದ ಶ್ರುತಶರ್ಮನನ್ನೂ, ಸೂರ್ಯಪ್ರಭನನ್ನೂ ನೋಡಿದ ಆ ದೇವಿಯರು ಕಶ್ಯಪ ಮುನಿಯನ್ನು, "ಇವರಲ್ಲಿ ಯಾರು ಹೆಚ್ಚು ರೂಪವಂತರು' ಎಂದು ಕೇಳಿದರು.

೧೦೪–೧೦೫. ಆಗ ಮುನೀಂದ್ರನೆಂದನು, "ಈ ಶ್ರುತಶರ್ಮನು (ಸೂರ್ಯಪ್ರಭನ) ಸಚಿವನಾದ ಪ್ರಭಾಸನಿಗೂ ಸಮನಾಗಿಲ್ಲ. ಅಂದ ಮೇಲೆ ನಿರುಪಮವಾದ ಸೂರ್ಯಪ್ರಭನಿಗೆ ಇವನನ್ನು ಹೋಲಿಸಲಾದೀತೆ ? ಸೂರ್ಯಪ್ರಭನಿಗೆ ದಿವ್ಯವಾದ ರೂಪಲಕ್ಷಣ ಸಂಪತ್ತಿಯಿದೆ. ಆದ್ದರಿಂದ ಅವನೇ ಶ್ರೇಷ್ಠನು. ಪ್ರಯತ್ನಿಸಿದರೆ ಸೂರ್ಯಪ್ರಭನಿಗೆ ಇಂದ್ರಪದವಿಯನ್ನು ಪಡೆಯುವುದು ಕೂಡಾ ಕಷ್ಟದ ವಿಚಾರವಲ್ಲ.'

೧೦೬. ಮುನೀಂದ್ರನ ಮಾತನ್ನು ಎಲ್ಲರೂ ಒಪ್ಪಿದರು. ನಂತರ ಮಹೇಂದ್ರನಿಗೆ ಕೇಳಿಸುವಂತೆ, ಮಯಾಸುರನಿಗೆ ವರವನ್ನೂ ಇತ್ತನು.

---

ಇತಿ ಮುನಿನಾತ್ರ ಸದಾರೇಣೋಕ್ತೇ ಲಜ್ಜಾಭಯಾನತೇ ಚೇಂದ್ರೇ ।
ಅದಿತಿರುವಾಚ ಸ ಕೀದೃಕ್ಶ್ರುತಶರ್ಮಾ ದರ್ಶ್ಯತಾಮಿಹಾನೀಯ ॥ ೧೦೧
ಏತನ್ನಿಶಮ್ಯ ಶಕ್ರೋ ಮಾತಲಿಮಾದಿಶ್ಯ ತತ್ಕ್ಷಣಂ ತತ್ರ ।
ಆನಾಯಯತಿ ಸ್ಮ ಸ ತಂ ಶ್ರುತಶರ್ಮಾಣಂ ನಭಶ್ಚರಾಧೀಶಮ್ ॥ ೧೦೨
ತಂ ದೃಷ್ಟ್ವಾ ಕೃತವಿನತಿಂ ವೀಕ್ಷ್ಯ ಚ ಸೂರ್ಯಪ್ರಭಮ್ ತಮುಪ್ರಾಪ್ತಃ ।
ಕಾಶ್ಯಪಮುನಿಂ ಸ್ವಭಾರ್ಯಾಃ ಕ ಏತಯೋ ರೂಪಲಕ್ಷಣಾಢ್ಯ ಇತಿ ॥ ೧೦೩
ಅಥ ಸ ಮುನೀಂದ್ರೋಽವಾದೀಚ್ಛ್ರುತಶರ್ಮಾಸ್ಯಾಪಿ ನ ಪ್ರಭಾಸಸ್ಯ ।
ಏತತ್ಸಚಿವಸ್ಯ ಸಮಃ ಕಿಂ ಪುನರೇತಸ್ಯ ನಿರುಪಮಾನಸ್ಯ ॥ ೧೦೪
ಸೂರ್ಯಪ್ರಭ ಏಷ ಯತೋ ದಿವ್ಯೈಸ್ತೈ ರೂಪಲಕ್ಷಣೈರ್ಯುಕ್ತಃ ।
ಯೈರಸ್ಯಾಧ್ಯವಸಾಯಂ ವಿದಧಾನಸ್ಯೇಂದ್ರತಾಪಿ ನಾಸುಲಭಾ ॥ ೧೦೫
ಇತಿ ಕಶ್ಯಪರ್ಷಿವಚನಂ ಸರ್ವೇಪಿ ಶ್ರದ್ಧಧುಸ್ತಥೇತ್ಯತ್ರ ।
ತತ ಏಷ ಮಯಾಯ ವರಂ ದದೌ ಮುನಿಃ ಶೃಣ್ವತೋ ಮಹೇಂದ್ರಸ್ಯ ॥ ೧೦೬

೪೦೭ "ಮಗನೇ, ನೀನು ಇಂದ್ರನು ಆಯುಧ ಎತ್ತಿ ಹೊಡೆಯಲು ಬಂದರೂ ನಿರ್ವಿಕಾರನಾಗಿ ನಿಂತೆಯಲ್ಲ, ಅದರಿಂದ ಹುಟ್ಟುಸಾವುಗಳಿಲ್ಲದ ವಜ್ರ ಕಠೋರವಾದ ಅಂಗಗಳಿಂದ ಕೂಡಿದವನಾಗಿ ಅಕ್ಷತನಾಗಿರುತ್ತೀಯೆ.

೪೦೮. ಈ ನಿನ್ನ ಪುತ್ರರಾದ ಸುನೀಥ ಸೂರ್ಯಪ್ರಭರೂ ಮಹಾಸತ್ತ್ವಶಾಲಿಗಳು. ತಮ್ಮ ವೈರಿಗಳ ಮುಂದೆ ಸೋಲೇ ಇಲ್ಲದೆ ಯಾವಾಗಲೂ ವಿಜಯಶಾಲಿಗಳಾಗಿಯೇ ಇರುತ್ತಾರೆ.

೪೦೯. ಶರಚ್ಚಂದ್ರನಂತೆ ಕಾಂತಿಯುತನಾದ ಈ ನನ್ನ ಪುತ್ರ ಸುವಾಸಕುಮಾರನು ರಾತ್ರಿಯ ಹೊತ್ತಿನಲ್ಲಿ ಆಪತ್ತೊದಗಿದಾಗ ನೆನಸಿಕೊಂಡ ಮಾತ್ರಕ್ಕೆ ಪ್ರತ್ಯಕ್ಷನಾಗಿ ಸಹಾಯವನ್ನು ಮಾಡುತ್ತಾನೆ.'

೪೧೦. ಮುನಿಯ ಈ ಮಾತನ್ನು ಕೇಳಿದ ಬಳಿಕ ಆ ಸದಸ್ಸಿನಲ್ಲಿದ್ದ ಆತನ ಭಾರ್ಯೆಯರೂ, ಋಷಿಗಳೂ, ಲೋಕಪಾಲರೂ ಮಯಾದಿಗಳಿಗೆ ವಿಧವಿಧವಾದ ವರಗಳನ್ನಿತ್ತರು.

೪೧೧. ಆಗ ಅದಿತಿಯು ಶಕ್ರನನ್ನು ಕುರಿತು ಹೇಳಿದಳು, 'ಮಗನೆ, ಅಹಂಕಾರ ಸಾಕುಮಾಡು. ಮಯನನ್ನು ಸಾಂತ್ವನಗೊಳಿಸಿಕೊ. ವಿನಯಶಾಲಿಗೆ ಯಾವ ಫಲ ದೊರೆಯುತ್ತದೆಂದು ಕಂಡೆಯಲ್ಲವೆ ? ಇವನಿಗೆ ಎಂಥಹ ಒಳ್ಳೆಯ ವರಗಳು ದೊರೆತವು ನೋಡಿದೆಯಾ ?

೪೧೨. ಅದನ್ನು ಕೇಳಿ ಇಂದ್ರನು ಮಯನ ಕೈಹಿಡಿದು ಅವನನ್ನು ಸಮಾಧಾನಗೊಳಿಸಿದನು. ಸೂರ್ಯಪ್ರಭನಿಗೆ ಸೋತ ಶ್ರುತಶರ್ಮನೂ ಕೂಡ ಬೆಳಗಿನ ಚಂದ್ರನಂತೆ ನಿಸ್ತೇಜನಾದನು.

---

ಯತ್ತ್ವತ್ರ ನಿರ್ವಿಕಾರಂ ಭವತಾ ಸ್ಥಿತಮುದ್ಯತಾಯುಧೇಽಪೀಂದ್ರೇ ।
ತೇನಾಜರಾಮರೋಽಂಗೈರ್ವಜ್ರಮಯೈರಕ್ಷತಶ್ಚ ಭವಿತಾಸಿ ॥ ೪೦೭
ಏತಾವಪಿ ತೇ ಸದೃಶೌ ಸುನೀಥಸೂರ್ಯಪ್ರಭೌ ಮಹಾಸತ್ತ್ವೌ ।
ಶಶ್ವದಪರಿಭವನೀಯೌ ಭವಿಷ್ಯತಃ ಸಕಲವೈರಿವರ್ಗಸ್ಯ ॥ ೪೦೮
ಏಷ ಸುವಾಸಕುಮಾರಶ್ಚಾಪದ್ರಜನೀಷು ಚಿಂತಿತೋಪಗತಃ ।
ಸಾಹಾಯಕಂ ಕರಿಷ್ಯತಿ ಮತ್ತನಯಃ ಶರದಿಜೇಂದುಸಮಕಾಂತಿಃ ॥ ೪೦೯
ಇತ್ಯುಕ್ತವತೋಽಸ್ಯ ಮುನೇರ್ಭಾರ್ಯಾ ಋಷಯಶ್ಚ ಲೋಕಪಾಲಾಶ್ಚ ।
ಸದಸಿ ಮಯಪ್ರಭೃತಿಭ್ಯಸ್ತೇಭ್ಯಃ ಸರ್ವೇ ವರಾನ್ದದುಸ್ತದ್ವತ್ ॥ ೪೧೦
ಅದಿತಿರಥ ಶಕ್ರಮವದದ್ವಿರಮಾವಿನಯಾತ್ಪ್ರಸಾದಯೇಂದ್ರ ಮಯಮ್ ।
ದೃಷ್ಟಂ ವಿನಯಫಲಂ ಹಿ ತ್ವಯಾದ್ಯ ಯದನೇನ ಸದ್ವರಾಃ ಪ್ರಾಪ್ತಾಃ ॥ ೪೧೧
ತಚ್ಛ್ರುತ್ವಾ ಮಯಮಿಂದ್ರಃ ಪಾಣಾವಾಲಂಬ್ಯ ತೋಷಯಾಮಾಸ ।
ಸೂರ್ಯಪ್ರಭಾಭಿಭೂತಃ ಶ್ರುತಶರ್ಮಾ ಚಾಭವದ್ದಿನೇಂದುನಿಭಃ ॥ ೪೧೨

೪೧೩ ನಂತರ ಶಕ್ರನು ತಂದೆಯಾದ ಕಶ್ಯಪಮುನಿಯನ್ನು ನಮಸ್ಕರಿಸಿ, ಬಂದಂತೆಯೇ ಲೋಕಪಾಲರೊಡಗೂಡಿ ಹಿಂತಿರುಗಿದನು. ಮಯನೇ ಮುಂತಾದ ದಾನವರೂ ಕೂಡ ಮುನಿವರನ ಆಜ್ಞೆಯಂತೆ ಪ್ರಕೃತದಲ್ಲಿ ಮಾಡಬೇಕಾದ ಕೆಲಸದ ಸಿದ್ಧಿಗಾಗಿ ಆಶ್ರಮದಿಂದ ತೆರಳಿದರು.

**ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ**

**ಸೂರ್ಯಪ್ರಭಲಂಬಕದಲ್ಲಿ ಎರಡನೆಯ ತರಂಗವು ಮುಗಿಯಿತು.**

---

ಪ್ರಣಮ್ಯ ತಮಥ ಕ್ಷಣಾತ್ ಸುರಪತಿರ್ಗುರುಂ ಕಶ್ಯಪಂ
ಜಗಾಮ ಸ ಯಥಾಗತಂ ನಿಖಿಲಲೋಕಪಾಲಾನ್ವಿತಃ ।
ಮಯಪ್ರಭೃತಯೋಽಪಿ ತೇ ಮುನಿವರಸ್ಯ ತಸ್ಯಾಜ್ಞಯಾ
ತತಃ ಖಲು ತದಾಶ್ರಮಾತ್ಪ್ರಕೃತಕಾರ್ಯಸಿದ್ಧ್ಯೈ ಯಯುಃ ॥ ೪೧೩

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಸೂರ್ಯಪ್ರಭಲಂಬಕೇ ದ್ವಿತೀಯಸ್ತರಂಗಃ**

# ಮೂರನೆಯ ತರಂಗ

೧–೨. ನಂತರ ಮಯಸುನೀಥರೂ ಸೂರ್ಯಪ್ರಭನೂ ಮಿಕ್ಕೆಲ್ಲರೂ ಕಶ್ಯಪಮಹರ್ಷಿಯ ಆಶ್ರಮದಿಂದ ಹೊರಟು ಚಂದ್ರಭಾಗಾ ಮತ್ತು ಐರಾವತೀ ನದಿಗಳ ಸಂಗಮಕ್ಕೆ ಬಂದರು. ಅಲ್ಲಿ ಸೂರ್ಯಪ್ರಭನಿಗಾಗಿ ಮಿತ್ರ ಬಾಂಧವರಾದ ರಾಜರೆಲ್ಲ ಕಾಯುತ್ತಿದ್ದರು.

೩. ಅಲ್ಲಿ ನೆರೆದಿದ್ದ ರಾಜರೆಲ್ಲ ಸಾಯುವಂತಾಗಿದ್ದರು. ಅವರು ಸೂರ್ಯಪ್ರಭನನ್ನು ಕಂಡು ರೋದಿಸುತ್ತಾ ದೀನವದನರಾಗಿ ಮೇಲೆದ್ದರು.

೪. ಚಂದ್ರಪ್ರಭರಾಜನನ್ನು ಕಾಣದೆ ಇವರೆಲ್ಲ ದುಃಖಪಡುತ್ತಿದ್ದಾರೆ ಎಂದುಕೊಂಡು ಸೂರ್ಯಪ್ರಭನು ನಡೆದ ವೃತ್ತಾಂತವನ್ನೆಲ್ಲ ಅವರಿಗೆ ಹೇಳಿದನು.

೫. ಆದರೂ ಅವರ ತಳಮಳ ತಗ್ಗಲಿಲ್ಲವಾದ್ದರಿಂದ ಕಾರಣ ಏನೆಂದು ಕೇಳಿದಾಗ ಅವರೆಲ್ಲರೂ ಬಹುಕಷ್ಟದಿಂದ ಸೂರ್ಯಪ್ರಭನ ಭಾರ್ಯೆಯರನ್ನು ಶ್ರುತಶರ್ಮನು ಅಪಹರಿಸಿದ್ದನ್ನು ಹೇಳಿದರು.

---

# ತೃತೀಯಸ್ತರಂಗಃ

ತತೋ ಮಯಸುನೀಥೌ ತೌ ಗತ್ವಾ ಸೂರ್ಯಪ್ರಭಶ್ಚ ಸಃ ।
ಕಶ್ಯಪಸ್ಯಾಶ್ರಮಾತ್ತಸ್ಮಾತ್ ಸಂಪ್ರಾಪುಃ ಸರ್ವ ಏವ ತೇ ॥ ೧
ಸಂಗಮಂ ಚಂದ್ರಭಾಗಾಯಾಂ ಐರಾವತ್ಯಾಶ್ಚ ಯತ್ರ ತೇ।
ಸ್ಥಿತಾಃ ಸೂರ್ಯಪ್ರಭಸ್ಯಾರ್ಥೇ ರಾಜಾನೋ ಮಿತ್ರಬಾಂಧವಾಃ ॥ ೨
ಪ್ರಾಪ್ತಂ ಸೂರ್ಯಪ್ರಭಂ ತೇ ಚ ದೃಷ್ಟ್ವಾ ತತ್ರ ಸ್ಥಿತಾ ನೃಪಾಃ ।
ರುದಂತೋಽಗ್ರೇ ಸಮುತ್ತಸ್ಥುಃ ವಿಷಣ್ಣಾ ಮರಣೋನ್ಮುಖಾಃ ॥ ೩
ಚಂದ್ರಪ್ರಭಾದರ್ಶನಜಾಂ ತೇಷಾಮಾಶಂಕ್ಯ ದುಃಖಿತಾಂ ।
ಸೂರ್ಯಪ್ರಭೋಽಖಿಲಂ ತೇಭ್ಯೋ ಯಥಾವೃತ್ತಂ ಶಶಂಸ ತತ್ ॥ ೪
ತಥಾಪಿ ವಿಗ್ನಾಃ ಪೃಷ್ಟಾಸ್ತೇ ತೇನ ಕೃಚ್ಛ್ರಾದವರ್ಣಯನ್ ।
ತಸ್ಯ ಭಾರ್ಯಾಪಹರಣಂ ವಿಹಿತಂ ಶ್ರುತಶರ್ಮಣಾ ॥ ೫

೬. ಶ್ರುತಶರ್ಮನಿಂದಾದ ಅವಮಾನ, ಸೋಲುಗಳಿಂದ ಹಣ್ಣಾದ ತಾವು ದೇಹತ್ಯಾಗ ಮಾಡಲು ಮುಂದಾದಾಗ ದಿವ್ಯವಾದ ವಾಣಿಯೊಂದು ಬೇಡವೆಂದು ಹೇಳಿದ್ದನ್ನು ನಿವೇದಿಸಿಕೊಂಡರು.

೭–೮. ಆಗ ಕೋಪಗೊಂಡ ಸೂರ್ಯಪ್ರಭನು ಪ್ರತಿಜ್ಞೆಯೊಂದನ್ನು ಮಾಡಿದನು. ಬ್ರಹ್ಮನೇ ಮೊದಲಾದ ಸುರರೆಲ್ಲರೂ ಕೂಡಿ ಅವನನ್ನು (ಶ್ರುತಶರ್ಮ) ಕಾಯ್ದುಕೊಂಡರೂ ಸರಿಯೆ, ಬುಡ ಸಹಿತ ಕೀಳುತ್ತೇನೆ. ಇದು ನಿಶ್ಚಯ. ಅವನು ಪರಸ್ತ್ರೀಯರನ್ನು ಮೋಸದಿಂದ ಅಪಹರಿಸುವ ಕಾರ್ಯದಲ್ಲಿ ಪಾಂಡಿತ್ಯ ತೋರಿರುವ ದುಷ್ಟ

೯. ಹೀಗೆ ಪ್ರತಿಜ್ಞೆ ಮಾಡಿ ವಿಜಯ ಯಾತ್ರೆ ಹೊರಡಲು ಬಯಸಿದಾಗ, ದೈವಜ್ಞರು ಇಂದಿನಿಂದ ಏಳನೆಯ ದಿನದಂದು ಪ್ರಶಸ್ತವಾಗಿದೆಯೆಂದು ಲಗ್ನ ನಿಶ್ಚಯ ಮಾಡಿದರು.

೧೦. ಸೂರ್ಯಪ್ರಭನ ನಿಶ್ಚಯವನ್ನೂ ವಿಜಯೋತ್ಸಾಹವನ್ನೂ ತನ್ನ ಮಾತುಗಳಿಂದ ದೃಢಗೊಳಿಸುತ್ತಾ ಮಯನು ಇಂತೆಂದನು.

೧೧. "'ನೀನು (ಯುದ್ಧಕ್ಕೆ) ಹೊರಡುತ್ತೇನೆಂದು ನಿಶ್ಚಯಿಸಿರುವುದರಿಂದ ಹೇಳುತ್ತೇನೆ. ನಾನೇ ಮಾಯಾ ಶಕ್ತಿಯಿಂದ ನಿನ್ನ ಪತ್ನಿಯರನ್ನೆಲ್ಲ ಪಾತಾಳಕ್ಕೆ ಒಯ್ದಿದ್ದೇನೆ.

೧೨. ನೀನು ಹೀಗೆ ರಭಸದಿಂದ ವೀರಾವೇಶದ ಮಾತುಗಳನ್ನಾಡುತ್ತೀಯೆಂದು ತಿಳಿದಿತ್ತು. ಬೆಂಕಿಗೆ ಗಾಳಿ ಹಾಕಿ ಬೆಳೆಸುವುದು ಬೇಡವೆಂದು ನಾನು ಹಾಗೆ ಮಾಡಿದೆ.

---

ತತ್ ಪರಾಭವ ದುಃಖಾಚ್ಚ ದೇಹತ್ಯಾಗೋದ್ಯಮಂ ನಿಜಂ ।
ವಾರಿತಂ ದಿವ್ಯಯಾ ವಾಚಾ ತಥೈವಾಸ್ಮೈ ನ್ಯವೇದಯನ್ ॥ ೬
ತತಃ ಸೂರ್ಯಪ್ರಭಸ್ತತ್ರ ಪ್ರತಿಜ್ಞಾಮಕರೋತ್ ಕ್ರುಧಾ ।
ಯದಿ ಬ್ರಹ್ಮಾದಯಃ ಸರ್ವೇಽಪ್ಯಭಿರಕ್ಷಂತಿ ತಂ ಸುರಾಃ ॥ ೭
ತಥಾಪ್ಯುನ್ಮೂಲನೀಯೋ ಮೇ ಶ್ರುತಶರ್ಮಾ ಸ ನಿಶ್ಚಿತಮ್ ।
ಪರದಾರಾಪಹರಣೇ ಛದ್ಮಪ್ರಾಗಲ್ಭ್ಯವಾನ್ ಶಠಃ ॥ ೮
ಏವಂ ಕೃತಪ್ರತಿಜ್ಞಶ್ಚ ಗಂತುಂ ತದ್ವಿಜಯಾಯ ಸಃ ।
ಲಗ್ನಂ ನಿಶ್ಚಿತವಾನ್ ದೃಷ್ಟಂ ಗಣಕೈಃ ಸಪ್ತಮೇಽಹನಿ ॥ ೯
ತತಸ್ತಂ ನಿಶ್ಚಿತಂ ಜ್ಞಾತ್ವಾ ಗೃಹೀತವಿಜಯೋದ್ಯಮಮ್ ।
ದ್ರಢಯಿತ್ವಾ ಪುನರ್ವಾಚಾ ಪ್ರಾಹ ಸೂರ್ಯಪ್ರಭಂ ಮಯಃ ॥ ೧೦
ಸತ್ಯಂ ಕೃತೋದ್ಯಮಸ್ತ್ವಂ ಚೇತ್ತದ್ವದಾಮಿ ಮಯಾ ತದಾ ।
ಮಾಯಾಂ ಪ್ರದರ್ಶ್ಯ ನೀತ್ವಾ ತೇ ಪಾತಾಲೇ ಸ್ಥಾಪಿತಾಃ ಪ್ರಿಯಾಃ ॥ ೧೧
ಏವಂ ತ್ವಂ ವಿಜಯೋದ್ಯೋಗಂ ಕರೋಷಿ ರಭಸಾದಿತಿ ।
ನೈವಮೇವ ತಥಾ ಹ್ಯಗ್ನಿರ್ಜ್ವಲೇದ್ವಾತೇರಿತೋ ಯಥಾ ॥ ೧೨

೧೩. ಬಾ, ಪಾತಾಳಕ್ಕೆ ಹೋಗೋಣ, ನಿನ್ನ ಪ್ರಿಯ ಪತ್ನಿಯರನ್ನು ಕಾಣುವೆಯಂತೆ.” ಎಂಬ ಮಯನ ಮಾತನ್ನು ಕೇಳಿ ಅವರೆಲ್ಲರೂ ಸಂತೋಷಗೊಂಡರು.

೧೪. ಹಿಂದೆ (ಪಾತಾಲವನ್ನು ಪ್ರವೇಶಿಸಿದ್ದ) ಅದೇ ಬಿಲದಿಂದ ಹೊರಟು ಮಯಾಸುರನ ನೇತೃತ್ವದಲ್ಲಿ ಎಲ್ಲರೂ ನಾಲ್ಕನೆಯ ಪಾತಾಲವನ್ನು ಸೇರಿದರು.

೧೫. ಅಲ್ಲಿ ಒಂದು ಒಳ ಮನೆಯಿಂದ ಮದನಸೇನೆಯೇ ಮುಂತಾದ ಎಲ್ಲ ಭಾರ್ಯೆಯರನ್ನೂ ಕರೆತಂದು ಮಯಾಸುರನು ಸೂರ್ಯಪ್ರಭನಿಗೆ ಒಪ್ಪಿಸಿದನು.

೧೬. ಅವರನ್ನೂ ತನ್ನ ಪತ್ನಿಯರಾದ ಇತರ ಅಸುರ ಪುತ್ರಿಯರನ್ನೂ ಕರೆದುಕೊಂಡು ಮಯನ ಮಾತಿನ ಮೇರೆಗೆ ಪ್ರಹ್ಲಾದನನ್ನು ಕಾಣಲು ಸೂರ್ಯಪ್ರಭನು ಹೊರಟನು.

೧೭. ಅವನು ಪ್ರಹ್ಲಾದನ ಬಳಿಗೆ ಬಂದು ನಮಸ್ಕರಿಸಿದನು. ಆಗ (ಕಶ್ಯಪನಿಂದ) ಸೂರ್ಯಪ್ರಭನು ವರಗಳನ್ನು ಪಡೆದ ವಿಚಾರವನ್ನು ಮಯಾಸುರನಿಂದ ಕೇಳಿ ತಿಳಿದ ಆ ಅಸುರನು ಆಯುಧವನ್ನೆತ್ತಿ ಕೃತಕಕೋಪವನ್ನು ನಟಿಸಿ ಆರ್ಭಟಿಸಿದನು.

೧೮. "ಎಲೈ ದುರಾಚಾರಿಯೆ, ನನ್ನ ತಮ್ಮನು ತಂದಿದ್ದ ಹನ್ನೆರಡು ಜನ ಕನ್ಯೆಯರನ್ನು ನೀನು ಅಪಹರಿಸಿರುವೆಯೆಂದು ಕೇಳಿದೆ. ಇಗೋ ಈಗಲೇ ನಿನ್ನನ್ನು ಮುಗಿಸಿಬಿಡುವೆ.”

೧೯. ರೌದ್ರಾಕಾರ ತಾಳಿದ ಆತನನ್ನು ಕಂಡು ಸೂರ್ಯಪ್ರಭನು ನಿರ್ವಿಕಾರನಾಗಿ ಹೇಳಿದನು. "ನನ್ನ ಈ ಶರೀರವು ತಮ್ಮ ಅಧೀನದಲ್ಲಿದೆ. ಅವಿನೀತನಾಗಿದ್ದರೆ ಶಿಕ್ಷಿಸಿ.”

---

ತದೇಹಿ ಯಾಮಃ ಪಾತಾಲಂ ಪ್ರಿಯಸ್ತೇ ದರ್ಶಯಾಮಿ ತಾಃ ।
ಏವಂ ಮಯವಚಃ ಶ್ರುತ್ವಾ ನನಂದುಃ ಸರ್ವ ಏವ ತೇ ॥ ೧೩
ಪ್ರಾಕ್ತನೇನ ಚ ತೇನೈವ ಪ್ರವಿಶ್ಯ ವಿವರೇಣ ತೇ ।
ಜಗ್ಮುಶ್ಚತುರ್ಥಂ ಪಾತಾಲಂ ಮಯಾಸುರಪುರಸ್ಸರಾಃ ॥ ೧೪
ತತ್ರೈಕತೋ ವಾಸಗೃಹಾನ್ಮಯಃ ಸೂರ್ಯಪ್ರಭಾಯ ತಾಃ ।
ಭಾರ್ಯಾಃ ಮದನಸೇನಾದ್ಯಾಃ ಆನೀಯಾಸೌ ಸಮರ್ಪಯತ್ ॥ ೧೫
ಗೃಹೀತ್ವಾ ತಾಸ್ತಥಾನ್ಯಾಶ್ಚ ಪತ್ನೀಸ್ತಾಃ ಸೋಽಸುರಾತ್ಮಜಾಃ ।
ಯಯೌ ಸೂರ್ಯಪ್ರಭೋ ದ್ರಷ್ಟುಂ ಪ್ರಹ್ಲಾದಂ ಮಯವಾಕ್ಯತಃ ॥ ೧೬
ಮಯಾತ್ ಶ್ರುತವರಪ್ರಾಪ್ತಿಃ ಪ್ರಣತಂ ತಂ ಚ ಸೋಽಸುರಃ ।
ಆತ್ತಾಯುಧೋಽಥ ಜಿಜ್ಞಾಸುಃ ಕೃತಕಕ್ರೋಧಮಭ್ಯಧಾತ್ ॥ ೧೭
ಶ್ರುತಂ ಮಯಾ ದುರಾಚಾರ ಯತ್ಕನ್ಯಾ ದ್ವಾದಶ ತ್ವಯಾ ।
ಭ್ರಾತ್ರಾರ್ಜಿತಾ ಮೇ ಽಪಹೃತಾಸ್ತತ್ತ್ವಾಂ ಹನ್ಮ್ಯೇಷ ಪಶ್ಯ ಮಾಂ ॥ ೧೮
ತಚ್ಛ್ರುತ್ವಾ ನಿರ್ವಿಕಾರಸ್ತಂ ಪಶ್ಯನ್ಸೂರ್ಯಪ್ರಭೋಽಬ್ರವೀತ್ ।
ಮಚ್ಛರೀರಂ ತ್ವದಾಯತ್ತಮವಿನೀತಂ ಪ್ರಶಾಧಿ ಮಾಮ್ ॥ ೧೯

೨೦-೨೧. ಆಗ ಪ್ರಹ್ಲಾದನು ನಕ್ಕು ಹೇಳಿದನು-""ನಿನ್ನನ್ನು ಪರೀಕ್ಷಿಸಿದೆ ಅಷ್ಟೆ. ನಿನ್ನಲ್ಲಿ ದರ್ಪದ ಲವಲೇಶವೂ ಇಲ್ಲ. ವರವನ್ನು ಬೇಡು. ನಿನ್ನ ನಡತೆಯಿಂದ ನಾನು ಸಂತುಷ್ಟನಾಗಿದ್ದೇನೆ.' ಆಗ ಸೂರ್ಯಪ್ರಭನು ಶಂಭುವಿನಲ್ಲಿಯೂ ಗುರುಗಳಲ್ಲಿಯೂ ಭಕ್ತಿಯನ್ನು ಬೇಡಿದನು.

೨೨. ಅದರಿಂದ ಎಲ್ಲರೂ ಸಂತೋಷಪಟ್ಟರು. ಬಳಿಕ ಪ್ರಹ್ಲಾದನು ತನ್ನ ಎರಡನೆಯ ಪುತ್ರಿಯಾದ ಯಾಮಿನಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿಸಿದನು.

೨೩. ಹಾಗೆಯೇ ಅವನಿಗೆ ಸಹಾಯಕ್ಕಿರಲೆಂದು ಆ ಅಸುರೇಶ್ವರನು ಇಬ್ಬರು ಪುತ್ರರನ್ನು ನೀಡಿದನು. ನಂತರ ಎಲ್ಲರೊಡನೆ ಸೇರಿ ಸೂರ್ಯಪ್ರಭನು ಆಮೀಲನ ಬಳಿಗೆ ತೆರಳಿದನು.

೨೪. ಅವನೂ ಕೂಡ ಸೂರ್ಯಪ್ರಭನು ವರ ಪಡೆದದ್ದನ್ನು ಕೇಳಿ ಸಂತುಷ್ಟನಾಗಿ ತನ್ನ ಎರಡನೆಯ ಮಗಳಾದ ಸುಖಾವತಿಯನ್ನು ಮದುವೆ ಮಾಡಿಸಿ ತನ್ನ ಇಬ್ಬರು ಗಂಡುಮಕ್ಕಳನ್ನು ಅವನ ಸಹಾಯಕ್ಕೆಂದು ಕಳಿಸಿದನು.

೨೫. ಅನಂತರ ಇತರ ಅಸುರಪ್ರಮುಖರನ್ನು ಅವರ ಸಹಾಯಕ್ಕಾಗಿ ಸನ್ಮಾನಗಳಿಂದ ಸಂತೋಷಪಡಿಸುತ್ತಾ ಆ ದಿನಗಳಲ್ಲಿ ಪ್ರಿಯ ಭಾರ್ಯೆಯರೊಡನೆ ಅಲ್ಲೇ ತಂಗಿದ್ದನು.

---

ಇತ್ಯುಕ್ತವಂತಂ ಪ್ರಹ್ಲಾದೋ ವಿಹಸ್ಯ ತಮುವಾಚ ಸಃ ।
ಪ್ರೇಕ್ಷಿತೋಽಸಿ ಮಯಾ ಯಾವದ್ದರ್ಪಲೇಶೋಽಪಿ ನಾಸ್ತಿ ತೇ ॥ ೨೦
ವರಂ ಗೃಹಾಣ ತುಷ್ಟೋಽಸ್ಮೀತ್ಯುಕ್ತಸ್ತೇನ ತಥೇತಿ ಸಃ ।
ಭಕ್ತಿಂ ಗುರುಷು ಶಂಭೌ ಚ ವವ್ರೇ ಸೂರ್ಯಪ್ರಭೋ ವರಂ ॥ ೨೧
ತತಸ್ತುಷ್ಟೇಷು ಸರ್ವೇಷು ತಸ್ಮೈ ಸೂರ್ಯಪ್ರಭಾಯ ಸಃ ।
ಪ್ರಹ್ಲಾದೋ ಯಾಮಿನೀಂ ನಾಮ ದ್ವಿತೀಯಾಂ ತನಯಾಂ ದದೌ ॥ ೨೨
ಸಹಾಯತ್ವೇ ಚ ಪುತ್ರೌ ದ್ವೌ ತಸ್ಯಾದಾತ್ಸೋಽಸುರೇಶ್ವರಃ ।
ತತಃ ಸರ್ವೈಃ ಸಹಾಮೀಲಪಾರ್ಶ್ವಂ ಸೂರ್ಯಪ್ರಭೋ ಯಯೌ ॥ ೨೩
ಸೋಽಪಿ ಶ್ರುತವರಪ್ರಾಪ್ತಿತುಷ್ಟಸ್ತಸ್ಮೈ ಸುಖಾವತೀಂ ।
ದದೌ ದ್ವಿತೀಯಾಂ ತನಯಾಂ ಸಾಹಾಯ್ಯೇ ಚ ಸುತದ್ವಯಂ ॥ ೨೪
ತತಃ ಸಭಾಜಯನ್ ಅನ್ಯಾನ್ ಸಾಹಾಯ್ಯಾಯಾಸುರಾಧಿಪಾನ್ ।
ಸ್ಥಿತಃ ಸೂರ್ಯಪ್ರಭಃ ಸೋಽತ್ರ ತೇಷ್ವಹಃಸು ಪ್ರಿಯಾಸಖಃ ॥ ೨೫

೨೬. ಸುನೀಥನ ಮೂವರು ಪತ್ನಿಯರೂ, ಸೂರ್ಯಪ್ರಭನ ಪತ್ನಿಯರೆಲ್ಲರೂ ಗರ್ಭವತಿಯರಾದರು. ಮಯಾದಿಗಳೊಡನೆ ಅವನಿಗೆ ಈ ವಿಚಾರ ತಿಳಿಯಿತು.

೨೭. ಬಸಿರಬಯಕೆ ಏನೆಂದು ಕೇಳಲಾಗಿ ಅವರೆಲ್ಲರೂ ಒಟ್ಟಾಗಿ ಮಹಾಸಂಗ್ರಾಮ ನೋಡಲು ಆಸೆಯಾಗಿದೆ ಎಂದರು. ಇದನ್ನು ಕೇಳಿ ಮಯಾಸುರನಿಗೆ ತುಂಬ ಮೆಚ್ಚಿಗೆಯಾಯಿತು.

೨೮. "ಇದು ನಮ್ಮ ಭಾಗ್ಯವೇ ಸರಿ. ಹಿಂದೆ ಹತರಾದ ಅಸುರರೇ ಇವರಲ್ಲಿ ಪುನರ್ಜನ್ಮ ಪಡೆಯುತ್ತಿದ್ದಾರೆ. ಆದ್ದರಿಂದಲೇ ಇವರಿಗೆಲ್ಲ ಇಂತಹ ಬಯಕೆಯಾಗುತ್ತಿದೆ' ಎಂದು ಆತನು ನುಡಿದನು.

೨೯. ಹೀಗೆ ಆರುದಿನಗಳು ಕಳೆಯಲಾಗಿ ಸೂರ್ಯಪ್ರಭಾದಿಗಳು ಏಳನೆಯದಿನ ಭಾರ್ಯಾಸಹಿತರಾಗಿ ರಸಾತಲದಿಂದ ನಿರ್ಗಮಿಸಿದರು.

೩೦. ಶತ್ರುಗಳು ಅವರಿಗೆ ಅಡಚಣೆಯನ್ನುಂಟು ಮಾಡಲು ತೋರಿದ ಉತ್ಪಾತಗಳ ಮಾಯೆಯನ್ನು ಸುವಾಸ ಕುಮಾರನು ಸ್ಮೃತಾಯಾತವೆಂಬ ಪ್ರತಿಮಾಯೆಯಿಂದ ನಿವಾರಿಸಿದನು.

---

ತಿಸ್ರಃ ಸುನೀಥಭಾರ್ಯಾಶ್ಚ ಸ್ವಭಾರ್ಯಾಶ್ಚ ನೃಪಾತ್ಮಜಾ ಃ।
ಸರ್ವಾಃ ಸಗರ್ಭಾಃ ಸಂಜಾತಾ ಮಯಾದಿಸಹಿತೋಽಶೃಣೋತ್ ॥ ೨೬
ಪೃಷ್ಟಾಶ್ಚ ದೋಹದಂ ತುಲ್ಯಂ ಶಶಂಸುರಖಿಲಾ ಅಪಿ ।
ಮಹಾಹವದಿದೃಕ್ಷಾಂ ತಾ ನನಂದಾಥ ಮಯಾಸುರಃ ॥ ೨೭
ಏತಾಸು ದಿಷ್ಟ್ಯಾ ಸಂಭೂತಾ ಅಸುರಾ ಯೇ ಪುರಾ ಹತಾಃ ।
ತೇನ ಜಾತೋಽಭಿಲಾಷೋಽಯಮೇತಾಸಾಮಿತಿ ಸೋಽವದತ್ ॥ ೨೮
ಏವಂ ಯಯುಃ ಷಡ್‌ದಿವಸಾಃ ಸಪ್ತಮಂ ತೇ ರಸಾತಲಾತ್ ।
ಭಾರ್ಯಾದಿಯುಕ್ತಾ ನಿರ್ಜಗ್ಮುಃ ಸರ್ವೇ ಸೂರ್ಯಪ್ರಭಾದಯಃ ॥ ೨೯
ಉತ್ಪಾತಮಾಯಾ ವಿಘ್ನಾಯ ಯಾ ತೇಷಾಂ ದರ್ಶಿತಾರಿಭಿಃ ।
ಸಾ ಸುವಾಸಕುಮಾರೇಣ ಸ್ಮೃತಾಯಾತೇನ ನಾಶಿತಾ ॥ ೩೦

೩೧-೩೨. ಬಳಿಕ ಚಂದ್ರಪ್ರಭನ ಪುತ್ರನಾದ ಶಿಶು ರತ್ನಪ್ರಭನನ್ನು ಪೃಥ್ವೀ ರಾಜ್ಯದಲ್ಲಿ ಅಭಿಷೇಕ ಮಾಡಿ ಎಲ್ಲರೂ ಭೂತಾಸನ ವಿಮಾನದಲ್ಲಿ ಕುಳಿತು ಮಯಾಸುರನ ಮಾತಿನಂತೆ ವಿದ್ಯಾಧರೇಂದ್ರನಾದ ಸುಮೇರುವಿನ ಆವಾಸಸ್ಥಾನವಾದ ಗಂಗಾನದಿಯ ಪೂರ್ವ ತೀರದಲ್ಲಿನ ತಪೋವನಕ್ಕೆ ಹೋದರು.

೩೩. ಮನೆಗೆ ಬಂದ ಮಿತ್ರರನ್ನೆಲ್ಲ ಸುಮೇರುವು ಸನ್ಮಾನ ಮಾಡಿ ಸಂತೋಷಪಡಿಸಿದನು. ಹಿಂದೆ ಶಂಭು ನೀಡಿದ್ದ ಆದೇಶವನ್ನು ನೆನಪಿಸಿಕೊಂಡನು. ಮಯನ ಮೂಲಕ ಪೂರ್ಣವೃತ್ತಾಂತವನ್ನು ತಿಳಿದುಕೊಂಡನು.

೩೪. ಸೂರ್ಯಪ್ರಭಾದಿಗಳು ಅಲ್ಲಿಯೇ ಇದ್ದು ತಮ್ಮ ತಮ್ಮ ಸೈನ್ಯಗಳನ್ನು ಬಂಧುಗಳನ್ನು ಮಿತ್ರರೆಲ್ಲರನ್ನೂ ಒಟ್ಟಿಗೆ ಕರೆಸಿಕೊಂಡರು.

೩೫. ಮೊದಲು ಅಲ್ಲಿಗೆ ಬಂದವರೆಂದರೆ ಸೂರ್ಯಪ್ರಭನ ಮಾವಂದಿರ ಮಕ್ಕಳು. ಮಯನ ಆಜ್ಞೆಯಂತೆ ಆ ರಾಜಪುತ್ರರೆಲ್ಲರೂ ಅನೇಕ ವಿದ್ಯೆಗಳನ್ನು ವಶಪಡಿಸಿಕೊಂಡರು.

೩೬. ಹರಿಭಟನೇ ಮುಂತಾದ ಆ ಹದಿನಾರು ರಾಜ ಪುತ್ರರನ್ನು ಅನುಸರಿಸಿ ಒಬ್ಬೊಬ್ಬರಿಗೂ ಹತ್ತುಸಾವಿರ ರಥ ಇಪ್ಪತ್ತುಸಾವಿರ ಪದಾತಿಗಳು, ಹೀಗೆ ಸೇನೆಯೂ ಬಂದಿತ್ತು.

೩೭. ಬಳಿಕ ಕರೆಕಳಿಸಲಾಗಿ ಎಲ್ಲ ದೈತ್ಯದಾನವರೂ ಬಂದರು. ಮಾವನ ಕಡೆಯವರು, ಮಾವಂದಿರು, ಇನ್ನಿತರ ಬಾಂಧವರು, ಮಿತ್ರರು ಎಲ್ಲರೂ ಬಂದು ಸೇರಿದರು.

---

ತತಶ್ಚಾಂದ್ರಪ್ರಭಂ ಪೃಥ್ವೀರಾಜ್ಯೇ ರತ್ನಪ್ರಭಂ ಶಿಶುಂ ।
ಅಭಿಷಿಚ್ಯ ಸಮಾರೂಢಭೂತಾಸನವಿಮಾನಕಾಃ ॥ ೩೧
ಸರ್ವೇ ವಿದ್ಯಾಧರೇಂದ್ರಸ್ಯ ಸುಮೇರೋಸ್ತೇ ನಿಕೇತನಂ ।
ಯಯುರ್ಮಯಗಿರಾ ಪೂರ್ವಗಂಗಾತೀರತಪೋವನಂ ॥ ೩೨
ತತ್ರ ತಾನ್ ಸೌಹೃದಪ್ರಾಪ್ತಾನ್ ಸ ಸುಮೇರುರಪೂಜಯತ್ ।
ಮಯೋಕ್ತಾಶೇಷವೃತ್ತಾಂತಃ ಪೂರ್ವಾಜ್ಞಾಂ ಶಾಂಭವೀಂ ಸ್ಮರನ್ ॥ ೩೩
ತದ್ದೇಶಸ್ಥಾಶ್ಚ ತೇ ಸ್ವಂ ಸ್ವಂ ಸೈನ್ಯಂ ಸೂರ್ಯಪ್ರಭಾದಿಕಾಃ ।
ಕಾರ್ತ್ಸ್ನ್ಯೇನಾನಾಯ ಯಾಮಾಸುರ್ಬಂಧೂಂಶ್ಚ ಸುಹೃದಸ್ತಥಾ ॥ ೩೪
ಆಯಯುಃ ಪ್ರಥಮಂ ಸೂರ್ಯಪ್ರಭಸ್ಯ ಶ್ವಶುರಾತ್ಮಜಾಃ ।
ರಾಜಪುತ್ರಾ ಮಯಾದಿಷ್ಟಾ ವಿದ್ಯಾಃ ಸಂಸಾಧ್ಯ ಸೋದ್ಯಮಾಃ ॥ ೩೫
ತೇಷಾಂ ಹರಿಭಟಾದೀನಾಂ ಷೋಡಶಾನಾಂ ರಥಾಯುತಂ ।
ದ್ವೇ ಚಾಯುತೇ ಪದಾತೀನಾಮೇಕೈಕಸ್ಯಾನುಗಂ ಬಲಂ ॥ ೩೬
ತದನುಸ್ಥಿತಸಂಕೇತಾ ಆಜಗ್ಮುರ್ದೈತ್ಯದಾನವಾಃ ।
ಶ್ವಶುರ್ಯಾಃ ಶ್ವಶುರಾ ಮಿತ್ರಾಣ್ಯನ್ಯೇ ಚೈತಸ್ಯ ಬಾಂಧವಾಃ ॥ ೩೭

೩೮–೩೯. ಸಪ್ತಮರಸಾತಲದಿಂದ ಹಿಡಿದು ಎಲ್ಲ ಪಾತಾಲಲೋಕಗಳಿಂದಲೂ ಬಹು ಸಂಖ್ಯೆಯಲ್ಲಿ ದಾನವ ವೀರರು ಬಂದು ನೆರೆದರು. ಹೃಷ್ಟರೋಮ, ಮಹಾಮಾಯ, ಸಿಂಹದಂಷ್ಟ್ರ, ಪ್ರಕಂಪನ, ತಂತುಕಚ್ಛ, ದುರಾರೋಹ, ಸುಮಾಯ, ವಜ್ರಪಂಜರ, ಧೂಮಕೇತು, ಪ್ರಮಥನ, ವಿಕಟಾಕ್ಷ ಎಲ್ಲರೂ ಇದ್ದರು.

೪೦–೪೧–೪೨. ಒಬ್ಬರು ಏಳು ಅಯುತ (ಹತ್ತುಸಾವಿರ) ರಥಗಳಿಂದಲೂ ಮತ್ತೊಬ್ಬರು ಎಂಟು ಅಯುತಗಳಿಂದಲೂ, ಕೆಲವರು ಆರು, ಇನ್ನು ಕೆಲವರು ಮೂರು, ಇನ್ನೊಬ್ಬನು ಒಂದು ಅಯುತಕ್ಕಿಂತಲೂ ಕಡಿಮೆಯಿಂದಲೂ ಕೂಡಿದ ರಥಗಳಿಂದ ಬಂದು ಸೇರಿದರು. ಕೆಲವರು ಮೂರು ಲಕ್ಷಪದಾತಿಗಳಿಂದ ಕೂಡಿದ್ದರು. ಮತ್ತೆ ಕೆಲವರು ಎರಡು ಲಕ್ಷ ಪದಾತಿಗಳೊಡನಿದ್ದರು. ಅರ್ಧ ಲಕ್ಷ ಪದಾತಿಗಳೊಡನೆ ಬಂದವನೇ ಎಲ್ಲರಿಗಿಂತ ಕಡಿಮೆ. ಅದೇ ರೀತಿ ಆನೆ, ಕುದುರೆಗಳು ಬಂದವು. ಮಯಸುನೀಥರ ಅಸಂಖ್ಯ ಸೈನ್ಯವು ಅಲ್ಲಿ ಬಂದು ಸೇರಿತು.

೪೩–೪೪. ಸೂರ್ಯಪ್ರಭನ ಅಮೇಯವಾದ ಸ್ವಂತ ಸೇನೆಯೂ ಬಂದು ಸೇರಿತು. ಹಾಗೆಯೇ ವಸುದತ್ತನೇ ಮೊದಲಾದ ರಾಜರ ಮತ್ತು ಸುಮೇರುವಿನ ಸೈನ್ಯಗಳು ಬಂದವು. ಬಳಿಕ ಮಯಾಸುರನು ಸೂರ್ಯಪ್ರಭಾದಿಗಳೊಡನೆ ಸೇರಿ ಚಿಂತಿತನಾಗಿ ಬಳಿಗೆ ಬಂದ ಸುವಾಸ ಕುಮಾರನೆಂಬ ಮುನಿಯನ್ನು ಕೇಳಿದನು.

---

ಹೃಷ್ಟರೋಮಾ ಮಹಾಮಾಯಃ ಸಿಂಹದಂಷ್ಟ್ರಃ ಪ್ರಕಂಪನಃ ।
ತಂತುಕಚ್ಛೋ ದುರಾರೋಹಃ ಸುಮಾಯೋ ವಜ್ರಪಂಜರಃ ॥ ೩೮
ಧೂಮಕೇತುಃ ಪ್ರಮಥನೋ ವಿಕಟಾಕ್ಷಶ್ಚ ದಾನವಃ ।
ಬಹವೋऽನ್ಯೇಪಿ ಚಾಜಗ್ಮುರಾಸಪ್ತಮರಸಾತಲಾತ್ ॥ ೩೯
ಕಶ್ಚಿದ್ರಥಾನಾಮಯುತೈಃ ಸಪ್ತಭಿಃ ಕಶ್ಚಿದಷ್ಟಭಿಃ ।
ಕಶ್ಚಿತ್ಷಡ್ಭಿಃ ತ್ರಿಭಿಃ ಕಶ್ಚಿದ್ಯೋऽತಿಸ್ವಲ್ಪೋऽಯುತೇನ ಸಃ ॥ ೪೦
ಪದಾತೀನಾಂ ತ್ರಿಭಿರ್ಲಕ್ಷೈಃ ಕಶ್ಚಿಲ್ಲಕ್ಷದ್ವಯೇನ ಚ ।
ಕಶ್ಚಿತ್ಕಶ್ಚಿತ್ತು ಲಕ್ಷೇಣ ಲಕ್ಷಾರ್ಧೇನಾಧಮಸ್ತು ಯಃ ॥ ೪೧
ಏಕೈಕಸ್ಯಚ ಹಸ್ತ್ಯಶ್ವಮಾಗಾತ್ತದನುಸಾರತಃ ।
ಅಸಂಖ್ಯಮಾಯಯೌ ಚಾನ್ಯತ್ ಸೈನ್ಯಂ ಮಯಸುನೀಥಯೋಃ ॥ ೪೨
ಸೂರ್ಯಪ್ರಭಸ್ಯ ಚಾಮೇಯಮಾಜಗಾಮ ನಿಜಂ ಬಲಂ ।
ವಸುದತ್ತಾದಿಭೂಪಾನಾಂ ಸುಮೇರೋಶ್ಚ ತಥೈವ ಚ ॥ ೪೩
ತತೋ ಮಯಾಸುರೋऽಪೃಚ್ಛಚ್ಚಿಂತಿತೋಪಸ್ಥಿತಂ ಮುನಿಂ ।
ತಂ ಸುವಾಸಕುಮಾರಾಖ್ಯಂ ಸಹ ಸೂರ್ಯಪ್ರಭಾದಿಭಿಃ ॥ ೪೪

೪೫ "ಪೂಜ್ಯನೇ, ಈ ಸೈನ್ಯವೆಲ್ಲ ಚದುರಿಹೋಗಿದೆ. ಸರಿಯಾಗಿ ಕಾಣುತ್ತಲೇ ಇಲ್ಲ. ವಿಸ್ತೀರ್ಣವಾದ ಸೈನ್ಯವನ್ನು ಒಟ್ಟಿಗೆ ಎಲ್ಲಿ ಹೇಗೆ ನೋಡಬಹುದು ಎಂದು ಹೇಳಿ.'

೪೬ "ಇಲ್ಲಿಂದ ಯೋಜನ ದೂರದಲ್ಲಿ ಕಲಾಪವೆಂಬ ಗ್ರಾಮವಿದೆ. ಅಲ್ಲಿರುವ ಪ್ರದೇಶ ವಿಸ್ತೀರ್ಣವಾಗಿದೆ. ಅಲ್ಲಿ ಹೋಗಿ ನೋಡಬಹುದು' ಎಂದು ಆ ಮುನಿಯು ಹೇಳಲಾಗಿ ಸುಮೇರುವಿನೊಡನೆ ಇತರರೂ ಸೇರಿ ತಮ್ಮ ತಮ್ಮ ಸೈನ್ಯಗಳೊಡನೆ ಕಲಾಪ ಗ್ರಾಮಕ್ಕೆ ಹೊರಟರು.

೪೮ ಅಲ್ಲಿ ಎಲ್ಲರೂ ಅಸುರರ ಹಾಗೂ ರಾಜರ ಸೈನ್ಯಗಳನ್ನು ಬೇರೆ ಬೇರೆ ಬೀಡು ಬಿಡಿಸಿ ಎತ್ತರವಾದ ಸ್ಥಾನದಲ್ಲಿ ನಿಂತು ನೋಡಿದರು.

೪೯. ಆಗ ಸುಮೇರುವು ಇಂತೆಂದನು. ""ಶ್ರುತಶರ್ಮನ ಸೈನ್ಯ ದೊಡ್ಡದಿದೆ. ಅಲ್ಲಿ ವಿದ್ಯಾಧರಾಧೀಶರೇ ನೂರೊಂದು ಸಂಖ್ಯೆಯಲ್ಲಿದ್ದಾರೆ.

೫೦. ಅವರಲ್ಲಿ ಮೂವತ್ತೆರಡು ರಾಜರಿಗೆ ಒಬ್ಬ ಮುಖ್ಯಸ್ಥನಿದ್ದಾನೆ. ಅವರಲ್ಲಿ ಕೆಲವರನ್ನು ಭೇದೋಪಾಯದಿಂದ ಬೇರ್ಪಡಿಸಿ ನಿಮ್ಮ ಕೂಡ ಸೇರಿಸುತ್ತೇನೆ.

೫೧. ನಾಳೆ ಬೆಳಿಗ್ಗೆ ವಲ್ಮೀಕವೆಂಬ ಜಾಗಕ್ಕೆ ಹೋಗೋಣ (ಏಕೆಂದರೆ) ನಾಳೆ ಫಾಲ್ಗುಣಮಾಸ– ಕೃಷ್ಣ ಪಕ್ಷದ ಅಷ್ಟಮೀ ತಿಥಿ.

---

ವಿಕ್ಷಿಪ್ತಮೇತತ್ ಭಗವನ್ ಸೈನ್ಯಂ ನೇಹೋಪಲಕ್ಷ್ಯತೇ ।
ತದ್ಬ್ರೂಹಿ ಕುತ್ರ ವಿಸ್ತೀರ್ಣಂ ಯುಗಪದ್ದೃಶ್ಯತಾಮಿತಿ ॥ ೪೫
ಇತೋ ಯೋಜನಮಾತ್ರೇಽಸ್ತಿ ಕಲಾಪಗ್ರಾಮಸಂಜ್ಞಕಃ ।
ಪ್ರದೇಶಸ್ತತ್ರ ವಿಸ್ತೀರ್ಣೋ ಗತ್ವೈತತ್ ಪ್ರವಿಲೋಕ್ಯತಾಂ ॥ ೪೬
ಇತ್ಯುಕ್ತೇ ತೇನ ಮುನಿನಾ ತದ್ಯುಕ್ತಾಃ ಸಸುಮೇರುಕಾಃ ।
ಯಯುಃ ಕಲಾಪಗ್ರಾಮಂ ತಂ ಸರ್ವೇ ತೇ ಸ್ವಬಲೈಃ ಸಹ ॥ ೪೭
ತತ್ರೋನ್ನತಸ್ಥಾನಗತಾ ದದೃಶುಸ್ತೇ ಪೃಥಕ್ ಪೃಥಕ್ ।
ಸನ್ನಿವೇಶ್ಯಾಸುರಾಣಾಂ ಚ ನೃಪಾಣಾಂ ಚ ವರೂಥಿನೀ ಃ ॥ ೪೮
ತತಃ ಸುಮೇರುರಾಹ ಸ್ಮ ಶ್ರುತಶರ್ಮಾ ಬಲಾಧಿಕಃ ।
ಸಂತಿ ವಿದ್ಯಾಧರಾಧೀಶಾಸ್ತಸ್ಯ ಹ್ಯೇಕೋತ್ತರಂ ಶತಂ ॥ ೪೯
ತೇಷಾಂ ಚ ಪೃಥಗೇಕೈಕೋ ರಾಜ್ಞಾಂ ದ್ವಾತ್ರಿಂಶತಃ ಪತಿಃ ।
ತದಸ್ತು ಭಿತ್ವಾ ಕಾಂಶ್ಚಿತ್ತಾನ್ ಮೇಲಯಿಷ್ಯಾಮ್ಯಹಂ ತವ ॥ ೫೦
ತತ್ ಪ್ರಾತರೇತದ್ಗಚ್ಛಾಮಃ ಸ್ಥಾನಂ ವಲ್ಮೀಕಸಂಜ್ಞಿತಂ ।
ಫಾಲ್ಗುನಸ್ಯಾಸಿತಾ ಪ್ರಾತರಷ್ಟಮೀ ಹಿ ಮಹಾತಿಥಿಃ ॥ ೫೧

೫೨. ಈ ತಿಥಿಯಲ್ಲಿ ಚಕ್ರವರ್ತಿ ಲಕ್ಷಣಗಳು ತೋರುವುವು. ವಿದ್ಯಾಧರರೂ ಅದೇ ಕಾರಣದಿಂದ ಅಲ್ಲಿಗೆ ಬಂದು ಸೇರುತ್ತಾರೆ."

೫೩. ಹೀಗೆ ಸುಮೇರುವು ಹೇಳಲು ಅಂದಿನ ದಿನವನ್ನು ಸೈನ್ಯದ ವ್ಯೂಹ ರಚನೆಯಲ್ಲೇ ಕಳೆದು ಮರುದಿನ ರಥಗಳಲ್ಲಿ ಸೇನಾಸಹಿತರಾಗಿ ವಲ್ಮೀಕಸ್ಥಾನಕ್ಕೆ ಹೋದರು.

೫೪. ಅಲ್ಲಿ ಹಿಮಾದ್ರಿಯ ದಕ್ಷಿಣ ಶಿಖರಗಳಲ್ಲಿ ಸೈನ್ಯಗಳ ತುಮುಲಧ್ವನಿಯು ಕೇಳಿಸಿತು. ಆ ವೇಳೆಗಾಗಲೇ ಅನೇಕ ವಿದ್ಯಾಧರ ಮುಖ್ಯರು ಬಂದು ಬೀಡುಬಿಟ್ಟಿದ್ದರು.

೫೫. ಆ ವಿದ್ಯಾಧರರು ಕುಂಡಗಳಲ್ಲಿ ಅಗ್ನಿಯನ್ನು ಬೆಳಗಿಸಿ ಹೋಮ ಮಾಡುತ್ತಿದ್ದರು. ಕೆಲವರು ಜಪಗಳಲ್ಲಿಯೂ ತೊಡಗಿದ್ದರು.

೫೬. ನಂತರ ಸೂರ್ಯಪ್ರಭನು ಒಂದು ದೊಡ್ಡ ಅಗ್ನಿ ಕುಂಡವನ್ನು ಸ್ಥಾಪಿಸಿದನು. ಅವನ ವಿದ್ಯಾಪ್ರಭಾವದಿಂದ ಅಲ್ಲಿ ಅಗ್ನಿಯು ತಾನೇ ಜ್ವಲಿಸಿತು.

೫೭. ಅದನ್ನು ಕಂಡು ಸುಮೇರುವಿಗೆ ಆನಂದವೂ, ವಿದ್ಯಾಧರರಿಗೆ ಮತ್ಸರವೂ ಉಂಟಾಯಿತು. ಅವರಲ್ಲಿ ಒಬ್ಬನು ಸುಮೇರುವನ್ನು ಕುರಿತು ಹೀಗೆಂದನು.

೫೮. 'ಸುಮೇರೋ, ನಿನಗೆ ಧಿಕ್ಕಾರ, ವಿದ್ಯಾಧರೇಂದ್ರನಾಗಿದ್ದು ನೀನು ಭೂಮಿಯ ಮೇಲೆ ಹುಟ್ಟಿರುವ ಸೂರ್ಯಪ್ರಭನನ್ನು ಅದು ಹೇಗೆ ಬೆಂಬಲಿಸುತ್ತಿರುವೆ ?'

---

ತಸ್ಯಾಂ ಚೋತ್ಪದ್ಯತೇ ತತ್ರ ಲಕ್ಷಣಂ ಚಕ್ರವರ್ತಿನಃ ।
ತೂರ್ಣಂ ವಿದ್ಯಾಧರಾ ಯಾಂತಿ ತತ್ಕೃತೇ ಚಾತ್ರ ತಾಂ ತಿಥಿಮ್ ॥ ೫೨

ಏವಂ ಸುಮೇರುಣಾ ಪ್ರೋಕ್ತೇ ಸೈನ್ಯಸಂವಿಧಿನಾ ದಿನಂ ।
ನೀತ್ವಾ ಪ್ರಾತರ್ಯಯುಸ್ತೇ ವಲ್ಮೀಕಂ ಸಬಲಾ ರಥೈಃ ॥ ೫೩

ತತ್ರ ತೇ ದಕ್ಷಿಣೇ ಸಾನೌ ಹಿಮಾದ್ರೇರ್ನಿನದದ್ಬಲಾಃ ।
ನಿವಿಷ್ಟಾ ದದೃಶುಃ ಪ್ರಾಪ್ತಾನ್ ಬಹೂನ್ ವಿದ್ಯಾಧರಾಧಿಪಾನ್ ॥ ೫೪

ತೇ ಚ ವಿದ್ಯಾಧರಾಸ್ತತ್ರ ಕುಂಡೇಷ್ವಾದೀಪಿತಾನಲಾಃ ।
ಹೋಮಪ್ರವೃತ್ತಾ ಅಭವನ್ ಜಪವ್ಯಗ್ರಾಶ್ಚ ಕೇಚನ ॥ ೫೫

ತತಃ ಸೂರ್ಯಪ್ರಭೋಽಪ್ಯತ್ರ ವಹ್ನಿಕುಂಡಂ ಮಹದ್ವ್ಯಧಾತ್ ।
ಸ್ವಯಂ ಜಜ್ವಾಲ ತತ್ರಾಗ್ನಿಸ್ತಸ್ಯ ವಿದ್ಯಾಪ್ರಭಾವತಃ ॥ ೫೬

ತದ್ದೃಷ್ಟ್ವಾ ತುಷ್ಟಿರುತ್ಪೇದೇ ಸುಮೇರೋರ್ಮತ್ಸರಃ ಪುನಃ ।
ವಿದ್ಯಾಧರಾಣಾಮುದಭೂತ್ತದೈಕಸ್ತಮಭಾಷತ ॥ ೫೭

ವಿದ್ಯಾಧರೇಂದ್ರತಾಂ ತ್ಯಕ್ತ್ವಾ ಧಿಕ್ ಸುಮೇರೋಽನುವರ್ತಸೇ ।
ಸೂರ್ಯಪ್ರಭಾಭಿಧಮಿಮಂ ಕಥಂ ಧರಣಿಗೋಚರಮ್ ॥ ೫೮

೫೯. ಅದನ್ನು ಕೇಳಿದ ಸುಮೇರುವು ಕೋಪದಿಂದ ಗದರಿಕೊಂಡನು. ಸೂರ್ಯಪ್ರಭನ ಹೆಸರು ಹೇಳಿ ನಿಂದಿಸುತ್ತಿರುವವನನ್ನು ಕುರಿತು ಹೇಳಿದನು.

೬೦. "ಭೀಮನೆಂಬ ಹೆಸರುಳ್ಳ ವಿದ್ಯಾಧರನಿದ್ದಾನೆ. ಆತನ ಮಡದಿಯನ್ನು ಸ್ವಯಂ ಬ್ರಹ್ಮನೇ ಮೋಹಿಸಿದನು. ಅವನಿಂದಲೇ ಇವನು ಹುಟ್ಟಿದ್ದಾನೆ.

೬೧. ಬ್ರಹ್ಮನಿಗೆ ಗುಪ್ತವಾಗಿ ಹುಟ್ಟಿದ್ದರಿಂದ ಇವನಿಗೆ "ಬ್ರಹ್ಮಗುಪ್ತ' ಎಂಬ ಹೆಸರು ಬಂದಿದೆ. ಇವನು ತನ್ನ ಹುಟ್ಟಿಗೆ ತಕ್ಕ ಮಾತನ್ನೇ ಆಡುತ್ತಿದ್ದಾನೆ.'

೬೨. ಎಂದು ಹೇಳುತ್ತಾ ಸುಮೇರುವೂ ಕೂಡ ಒಂದು ಅಗ್ನಿ ಕುಂಡವನ್ನು ಉತ್ಪಾದಿಸಿದನು. ಬಳಿಕ ಸೂರ್ಯಪ್ರಭನೂ ಅದರಲ್ಲಿ ಅವನೊಡನೆ ಹೋಮಮಾಡಿದನು.

೬೩. ಒಮ್ಮೆಲೆ ಭೂಮಿಯಲ್ಲಿ ಒಂದು ಬಿರುಕು ಕಾಣಿಸಿಕೊಂಡು ಅಲ್ಲಿಂದ ಅತಿಭೀಷಣವಾದ ಅಜಗರವೊಂದು ಮೇಲೆದ್ದಿತು.*

೬೪. ಆ ಅಜಗರವನ್ನು ಹಿಡಿಯಲು ಸುಮೇರುವನ್ನು ನಿಂದಿಸಿದ್ದ ಬ್ರಹ್ಮಗುಪ್ತನೆಂಬ ಆ ವಿದ್ಯಾಧರಾಧಿಪತಿಯು ಮದದಿಂದ ಮುನ್ನುಗ್ಗಿದನು.

೬೫. ಆದರೂ ಅಜಗರವು ಅವನನ್ನು ಹಿಡಿದು ತನ್ನ ಫೂತ್ಕಾರದ ಗಾಳಿಯಿಂದಲೇ ಒಯ್ದು ನೂರು ಅಡಿ ದೂರಕ್ಕೆ ಎಸೆಯಿತು. ಬ್ರಹ್ಮಗುಪ್ತನು ತರಗೆಲೆಯಂತೆ ನೆಲಕ್ಕೆ ಒರಗಿದನು.

---

ತಚ್ಛ್ರುತ್ವಾ ಸ ಸುಮೇರುಸ್ತಂ ಸಕೋಪಂ ನಿರಭರ್ತ್ಸಯತ್ ।
ಸೂರ್ಯಪ್ರಭಂ ಚ ತನ್ನಾಮ ಪೃಚ್ಛಂತಮಿದಮಬ್ರವೀತ್ ॥ ೫೯
ಅಸ್ತಿ ವಿದ್ಯಾಧರೋ ಭೀಮನಾಮಾ ತಸ್ಯ ಚ ಗೇಹಿನೀಮ್ ।
ಬ್ರಹ್ಮಾಕಾಮಯತ ಸ್ವೈರಂ ತತ ಏಷೋಽಭ್ಯಜಾಯತ ॥ ೬೦
ಗುಪ್ತಂ ಯದ್ಬ್ರಹ್ಮಣೋ ಜಾತೋ ಬ್ರಹ್ಮಗುಪ್ತಸ್ತದುಚ್ಯತೇ ।
ಅತ ಏವೈತದೇತಸ್ಯ ಸ್ವಜನ್ಮಸದೃಶಂ ವಚಃ ॥ ೬೧
ಇತ್ಯುಕ್ತ್ವಾ ಕಾರಿತೇನಾಪಿ ವಹ್ನಿಕುಂಡಂ ಸುಮೇರುಣಾ ।
ತತಃ ಸೂರ್ಯಪ್ರಭಸ್ತೇನ ಸಹಾಹೌಕ್ಷೀದ್ಧುತಾಶನಮ್ ॥ ೬೨
ಕ್ಷಣಾಚ್ಚ ಭೂಮಿವಿವರಾದುಜ್ಜಗಾಮಾತಿಭೀಷಣಃ ।
.....ಕಸ್ಮಾದಜಗರೋ ಮಹಾನ್ ॥ ೬೩
ತಂ ಗ್ರಹೀತುಮಧಾವತ್ಸ ವಿದ್ಯಾಧರಪತಿರ್ಮದಾತ್ ।
ಬ್ರಹ್ಮಗುಪ್ತಾಭಿಧಾನೋಽಥ ಸುಮೇರುರ್ಯೇನ ಗರ್ಹಿತಃ ॥ ೬೪
ಸ ತೇನಾಜಗರೇಣಾತ್ರ ಮುಖಫೂತ್ಕಾರವಾಯುನಾ ।
ನೀತ್ವಾ ಹಸ್ತಶತೇ ಕ್ಷಿಪ್ತೋ ನ್ಯಪತಜ್ಜೀರ್ಣಪರ್ಣವತ್ ॥ ೬೫

*. ಇಲ್ಲಿ ಶ್ಲೋಕದ ಮೂರನೆಯ ಪಾದ ಈ ಆವೃತ್ತಿಯಲ್ಲಿ ಖಿಲವಾಗಿದೆ.

೬೬. ಬಳಿಕ ತೇಜಃಪ್ರಭ ಎಂಬುವನು ಆ ಸರ್ಪವನ್ನು ಕೊಲ್ಲಲು ಬಂದನು. ಅವನನ್ನು ಕೂಡ ವಿದ್ಯಾಧರಾಧೀಶನಾದ ಸುಮೇರುವು ಅಜಗರನ ಮೂಲಕ ಎತ್ತಿ ಬಿಸಾಡುವಂತೆ ಮಾಡಿದನು.

೬೭. ನಂತರ ದುಷ್ಟದಮನನೆಂಬ ವಿದ್ಯಾಧರೇಶ್ವರನು ಬಂದನು. ಅವನನ್ನೂ ಕೂಡ ಮೊದಲಿನಂತೆಯೇ ಆ ಅಜಗರನು ನಿಶ್ವಾಸವಾಯುವಿನಿಂದಲೇ ಎಸೆದನು.

೬೮. ಬಳಿಕ ವಿರೂಪಶಕ್ತಿಯೆಂಬ ಖೇಚರೇಂದ್ರನು ಬಂದನು. ಅವನನ್ನು ಕೂಡ ಹುಲ್ಲು ಕಡ್ಡಿಯನ್ನೆತ್ತುವಂತೆ ಶ್ವಾಸ ಮಾತ್ರದಿಂದಲೇ ನಿವಾರಿಸಲಾಯಿತು.

೬೯. ಆಗ, ಅಂಗಾರಕ, ವಿಜೃಂಭಕ ಎಂಬುವರಿಬ್ಬರು ಅದನ್ನು ಎದುರಿಸಲು ಸಿದ್ಧರಾದರು. ಆ ಇಬ್ಬರು ರಾಜರನ್ನೂ ಅಜಗರನು ದೂರದಿಂದಲೇ ಫೂತ್ಕರಿಸಿ ಏಕಕಾಲದಲ್ಲಿ ಎಸೆದನು.

೭೦. ಈ ರೀತಿಯಾಗಿ ಎಲ್ಲ ವಿದ್ಯಾಧರಾಧೀಶರೂ ಅವನಿಂದ ಒಗೆಯಲ್ಪಟ್ಟು ಕಲ್ಲುಬಂಡೆಯ ಮೇಲೆ ಬಿದ್ದಿದ್ದರಿಂದ ಮೈಕೈಗಳು ಪುಡಿಪುಡಿಯಾಗಿ ಬಹು ಪ್ರಯಾಸದಿಂದ ಮೆಲ್ಲಗೆ ಮೇಲೆದ್ದು ನಿಂತರು.

೭೧. ಆಗ ದರ್ಪದಿಂದ ಶ್ರುತಶರ್ಮನು ಅಜಗರವನ್ನು ಕೊಲ್ಲಲು ಮುನ್ನುಗ್ಗಿದನು. ಅವನನ್ನು ಕೂಡ ಆ ಅಜಗರನು ಶ್ವಾಸಮಾರುತದಿಂದ ಎತ್ತಿ ಒಗೆದನು.

---

ತತಸ್ತೇಜಃಪ್ರಭೋ ನಾಮ ತಂ ಜಿಘಾಂಸುರುಪಾಗಮತ್ ।
ಸರ್ಪಂ ವಿದ್ಯಾಧರಾಧೀಶಃ ಸೋऽಪ್ಯಕ್ಷೇಪಿ ತಥಾಮುನಾ ॥ ೬೬
ತತಸ್ತು ದುಷ್ಟದಮನೋ ನಾಮ ವಿದ್ಯಾಧರೇಶ್ವರಃ ।
ಉಪಾಗಾತ್ ಸೋಽಪಿ ನಿಃಶ್ವಾಸೇನಾನ್ಯವತ್ತೇನ ಚಿಕ್ಷಿಪೇ ॥ ೬೭
ತತೋ ವಿರೂಪಶಕ್ತ್ಯಾಖ್ಯಃ ಖೇಚರೇಂದ್ರಸ್ತಮಭ್ಯಗಾತ್ ।
ಸೋऽಪಿ ತೇನ ತಥೈವಾಸ್ತಃ ಶ್ವಾಸೇನ ತೃಣಹೇಲಯಾ ॥ ೬೮
ಅಥಾಭ್ಯಧಾವತಾಂ ತದ್ವದಂಗಾರಕವಿಜೃಂಭಕೌ ।
ರಾಜಾನೌ ಯುಗಪತ್ತೌ ಚ ದೂರೇ ಶ್ವಾಸೇನ ಸೋऽಕ್ಷಿಪತ್ ॥ ೬೯
ಏವಂ ವಿದ್ಯಾಧರಾಧೀಶಾಃ ಕ್ರಮಾತ್ ಸರ್ವೇऽಪಿ ತೇನ ತೇ ।
ಕ್ಷಿಪ್ತಾಃ ಕಥಂಚಿದುತ್ತಸ್ಥುಃ ಅಂಗೈರಶ್ಮಾವಚೂರ್ಣಿತೈಃ ॥ ೭೦
ತತೋ ದರ್ಪೇಣ ತಂ ಸರ್ಪಂ ಶ್ರುತಶರ್ಮಾಭ್ಯುಪೇಯಿವಾನ್ ।
ಜಿಘಾಂಸುಃ ಸೋऽಪಿ ತೇನಾತ್ರ ಚಿಕ್ಷೇಪೇ ಶ್ವಾಸಮಾರುತೈಃ ॥ ೭೧

೭೨. ಹತ್ತಿರದಲ್ಲೇ ಬಿದ್ದ ಅವನು ಮತ್ತೆ ಎದ್ದು ಓಡಿಬಂದನು. ಆಗ ಅಜಗರನು ಅವನನ್ನು ಇನ್ನೂ ದೂರಕ್ಕೆ ಎಸೆದನು.

೭೩. ಅಂಗಾಂಗಗಳು ಮುರಿದರೂ ಅದನ್ನು ಲೆಕ್ಕಿಸದೆ ಮತ್ತೆ ಶ್ರುತಶರ್ಮನು ಮೇಲೇಳಲು, ಸುಮೇರುವು ಸರ್ಪವನ್ನು ಹಿಡಿಯಲು ಸೂರ್ಯಪ್ರಭನನ್ನು ಕಳುಹಿಸಿದನು.

೭೪–೭೫. 'ನೋಡಿ, ಅಜಗರನನ್ನು ಹಿಡಿಯಲು ಹೊರಟಿದ್ದಾನೆ. ಈ ಮನುಷ್ಯರಿಗೆ ಬುದ್ಧಿ ಏನಾದರೂ ಇದೆಯೆ ? ಶುದ್ಧ ಮಂಗಗಳು. ಅನ್ಯರು ಮಾಡಿದ್ದನ್ನು ಕಂಡು ಅದನ್ನೇ ಅನುಸರಿಸುತ್ತಾರೆ.' ಎಂದು ಹೇಳಿಕೊಂಡು ವಿದ್ಯಾಧರರೆಲ್ಲ ಸೂರ್ಯಪ್ರಭನನ್ನು ನೋಡಿ ಅಪಹಾಸ್ಯದಿಂದ ನಕ್ಕರು.

೭೬. ಅವರೆಲ್ಲ ಹಾಗೆ ನಗುತ್ತಿರುವಾಗಲೇ ಸೂರ್ಯಪ್ರಭನು ಮುಂದುವರಿದು ಅಜಗರದ ಬಾಯನ್ನು ಬಿಗಿಯಾಗಿ ಅದುಮಿ ಹಿಡಿದು ಬಿಲದಿಂದ ಎಳೆದನು.

೭೭. ಆಗ ಆ ಸರ್ಪವು ಸೂರ್ಯಪ್ರಭನ ಶ್ರೇಷ್ಠಬತ್ತಳಿಕೆಯಾಗಿ ಮಾರ್ಪಟ್ಟಿತು. ದೇವಲೋಕದಿಂದ ಅವನ ಮೇಲೆ ಪುಷ್ಪವೃಷ್ಟಿಯಾಯಿತು.

೭೮. 'ಸೂರ್ಯಪ್ರಭನೆ, ಈ ಅಕ್ಷಯವಾದ ಶ್ರೇಷ್ಠ ಬತ್ತಳಿಕೆ ನಿನಗೆ ಸಹಜವಾಗಿ ಸಿದ್ಧಿಸಿದೆ. ಇದನ್ನು ಧರಿಸಿಕೋ' ಎಂಬ ದಿವ್ಯವಾದ ಆಶರೀರವಾಣಿಯೂ ಮೊಳಗಿತು.

---

ಅದೂರಪತಿತಃ ಸೋಽಥ ಪುನರುತ್ಥಾಯ ಧಾವಿತಃ ।
ತೇನ ದೂರತರಂ ನೀತ್ವಾ ಶ್ವಾಸೇನಾಕ್ಷೇಪಿ ಭೂತಲೇ ॥ ೭೨
ವಿಲಕ್ಷೇ ಚೂರ್ಣಿತಾಂಗೇಽಸ್ಮಿನ್ನುತ್ಥಿತೇ ಶ್ರುತಶರ್ಮಣಿ ।
ಸೂರ್ಯಪ್ರಭೋಽಹಿಗ್ರಹಣೇ ಪ್ರೇಷಿತೋಽಭೂತ್ ಸುಮೇರುಣಾ ॥ ೭೩
ಪಶ್ಯತೈಷೋಽಪ್ಯಜಗರಂ ಗ್ರಹೀತುಮಿಮಮುತ್ಥಿತಃ ।
ಅಹೋ ಇಮೇ ನಿರ್ವಿಚಾರಾ ಮರ್ಕಟಾ ಇವ ಮಾನುಷಾಃ ॥ ೭೪
ಅನ್ಯೇನ ಕ್ರಿಯಮಾಣಂ ಯತ್ ಪಶ್ಯಂತ್ಯನುಹರಂತಿ ತತ್ ।
ಇತಿ ವಿದ್ಯಾಧರಾಃ ಸೂರ್ಯಪ್ರಭಂ ತೇ ಜಹಸುಸ್ತದಾ ॥ ೭೫
ತೇಷಾಂ ಪ್ರಹಸತಾಮೇವ ಗತ್ವಾ ಸೂರ್ಯಪ್ರಭೇಣ ಸಃ ।
ಸ್ತಿಮಿತಾಸ್ಯೋ ಗೃಹೀತಶ್ಚ ಕೃಷ್ಟಶ್ಚಾಜಗರೋ ಬಿಲಾತ್ ॥ ೭೬
ತತ್ಕ್ಷಣಂ ಪ್ರತಿಪೇದೇ ಸ ಭುಜಗಸ್ತೂಣರತ್ನತಾಂ ।
ಮೂರ್ಧ್ನಿ ಸೂರ್ಯಪ್ರಭಸ್ಯಾಪಿ ಪುಷ್ಪವೃಷ್ಟಿರ್ದಿವೋಽಪತತ್ ॥ ೭೭
ಸೂರ್ಯಪ್ರಭಾಕ್ಷಯಂ ತೂಣರತ್ನಂ ಸಿದ್ಧಮಿದಂ ತವ ।
ತದ್ಗೃಹಾಣೈತದಿತ್ಯುಚ್ಚೈರ್ದಿವ್ಯಾ ವಾಗುದಭೂತ್ತದಾ ॥ ೭೮

೭೯. ನಂತರ ವಿದ್ಯಾಧರರೆಲ್ಲರೂ ಕಳೆಗುಂದಿದವರಾದರು. ಸೂರ್ಯಪ್ರಭನು ತೂಣವನ್ನು (ಬತ್ತಳಿಕೆ) ಧರಿಸಿಕೊಂಡನು. ಮಯಸುನೀಥರೂ ಬಹು ಸಂತೋಷಗೊಂಡರು.

೮೦. ಬಳಿಕ ವಿದ್ಯಾಧರ ಸೈನ್ಯದೊಡನೆ ಶ್ರುತಶರ್ಮನು ಅಲ್ಲಿಂದ ಹೋದಮೇಲೆ ಅವನ ದೂತನೊಬ್ಬನು ಬಂದು ಈ ಮಾತನ್ನು ಹೇಳಿದನು.

೮೧. "ನಮ್ಮ ಪ್ರಭು ಶ್ರೀಮಾನ್ ಶ್ರುತಶರ್ಮನು ನಿನಗೆ ಹೇಳಿಕಳಿಸಿರುವುದೇನೆಂದರೆ ಜೀವದಿಂದ ಇರುವ ಆಸೆಯೇನಾದರೂ ಇದ್ದರೆ ನಿನ್ನ ತೂಣರತ್ನವನ್ನು ನನಗೆ ಸಮರ್ಪಿಸು.'

೮೨. ಇದನ್ನು ಕೇಳಿ ಸೂರ್ಯಪ್ರಭನು ಉತ್ತರಿಸಿದನು. "ದೂತನೇ! ಹೋಗಿ ನಿಮ್ಮ ದೊರೆಗೆ ಹೇಳು. ಈ ಬತ್ತಳಿಕೆಯು ನನ್ನ ಬಾಣಗಳಿಂದ ಕೂಡಿ ನನ್ನ ದೇಹದಲ್ಲಿಯೇ ಇರುತ್ತದೆ.'

೮೩. ಈ ಉತ್ತರವನ್ನು ಕೇಳಿ ದೂತನು ಹಿಂತಿರುಗಲಾಗಿ ಶ್ರುತಶರ್ಮನ ಜಂಭದ ಮಾತನ್ನು ಕೇಳಿ ಎಲ್ಲರೂ ನಕ್ಕರು.

೮೪–೮೫. ಸೂರ್ಯಪ್ರಭನನ್ನು ಸುಮೇರುವು ಆನಂದದಿಂದ ಆಲಿಂಗಿಸಿ–'ನಮ್ಮ ಭಾಗ್ಯದಿಂದ ಶಂಭುವಿನ ಮಾತು ಫಲಿಸಿದೆ. ಸಂದೇಹವೇ ಇಲ್ಲ. ಈ ತೂಣ ರತ್ನದ ಸಿದ್ಧಿಯಾಗಿರುವಾಗ ನಿನ್ನ ಚಕ್ರವರ್ತಿತ್ವವೂ ಸಿದ್ಧಿಸಿದಂತೆಯೇ. ಸಿದ್ದರಿಂದ ಬಾ ನಿರಾತಂಕದಿಂದ ಶ್ರೇಷ್ಠ ಧನುಸ್ಸನ್ನೂ ಸಾಧಿಸಿಕೋ' ಎಂದನು.

---

ತತೋ ವಿದ್ಯಾಧರಾ ಮ್ಲಾನಿಂ ಯಯುಃ ಸೂರ್ಯಪ್ರಭೋಽಗ್ರಹೀತ್ ।
ತೂಣಂ ಮಯಸುನೀಥೌ ಚ ಸುಮೇರುಶ್ಚಾಭಜನ್ ಮುದಮ್ ॥ ೭೯
ಶ್ರುತಶರ್ಮಣಿ ಯಾತೇಽಥ ವಿದ್ಯಾಧರಬಲಾನ್ವಿತೇ ।
ಏತ್ಯ ಸೂರ್ಯಪ್ರಭಂ ದೂತಸ್ತದೀಯ ಇದಮಭ್ಯಧಾತ್ ॥ ೮೦
ತ್ವಾಂ ಸಮಾದಿಶತಿ ಶ್ರೀಮಾನ್ ಶ್ರುತಶರ್ಮಾ ಪ್ರಭುರ್ಯಥಾ ।
ಸಮರ್ಪಯೈತತ್ತೂಣಂ ಮೇ ಕಾರ್ಯಂ ಚೇಜ್ಜೀವಿತೇನ ತೇ ॥ ೮೧
ಸೂರ್ಯಪ್ರಭೋಽಥ ಪ್ರತ್ಯಾಹ ದೂತೇದಂ ಬ್ರೂಹಿ ಗಚ್ಛ ತಮ್ ।
ಸ್ವದೇಹ ಏವ ಭವಿತಾ ತೂಣಸ್ತೇ ಮಚ್ಛರಾವೃತಃ ॥ ೮೨
ಏತತ್ ಪ್ರತಿವಚಃ ಶ್ರುತ್ವಾ ಗತೇ ದೂತೇ ಪರಾಙ್ಮುಖಃ ।
ಪ್ರಾಹಸನ್ರಭಸೋಕ್ತಿಂ ತಾಂ ಸರ್ವೇ ತೇ ಶ್ರುತಶರ್ಮಣಃ ॥ ೮೩
ಸೂರ್ಯಪ್ರಭೋಽಥ ಸಾನಂದಮಾಶ್ಲಿಷ್ಯೋಚೇ ಸುಮೇರುಣಾ ।
ದಿಷ್ಟ್ಯಾದ್ಯ ಶಾಂಭವಂ ವಾಕ್ಯಂ ಫಲಿತಂ ತದಸಂಶಯಮ್ ॥ ೮೪
ತೂಣರತ್ನೇ ಹಿ ಸಿದ್ಧೇಽಸ್ಮಿನ್ ಸಿದ್ಧಾ ತೇ ಚಕ್ರವರ್ತಿತಾ ।
ತದೇಹಿ ಸಾಧಯೇದಾನೀಂ ಧನೂರತ್ನಂ ನಿರಾಕುಲಃ ॥ ೮೫

೮೬. ಸುಮೇರುವಿನ ಈ ಮಾತನ್ನು ಕೇಳಿದ ಸೂರ್ಯ ಪ್ರಭಾದಿಗಳೆಲ್ಲರೂ ಮುಂದೆ ಹೊರಟ ಆತನನ್ನೇ ಅನುಸರಿಸಿ ಹೇಮಕೂಟ ಪರ್ವತಕ್ಕೆ ಬಂದರು.

೮೭. ಅದರ ಬಳಿಯಲ್ಲಿ ಉತ್ತರದಲ್ಲಿ ಮಾನಸವೆಂಬ ಸರೋವರವಿದ್ದಿತು. ಬ್ರಹ್ಮದೇವನು ಸಮುದ್ರ ನಿರ್ಮಾಣಕ್ಕೆ ಮೊದಲು ಮಾಡಿಕೊಂಡ ಸಿದ್ಧತೆಯೋ ಎಂಬಂತಿದ್ದ ಅದರ ಬಳಿ ಬಂದರು.

೮೮. ಅದರ ನೀರಿನೊಳಗೆ ದಿವ್ಯಾಂಗನೆಯರು ಕ್ರೀಡಿಸುತ್ತಿದ್ದರು. ಮೆಲುಗಾಳಿಯಿಂದ ತೂಗುತ್ತಿದ್ದ ಕನಕಾಂಬುಜಗಳು ಅವರ ಮುಖಗಳನ್ನು ಮರೆ ಮಾಚುತ್ತಿದ್ದುವು.

೮೯. ಅವರೆಲ್ಲ ಸರಸ್ಸಿನ ಸೌಂದರ್ಯವನ್ನು ಆಸ್ವಾದಿಸುತ್ತಿರುವಂತೆಯೇ ಶ್ರುತಶರ್ಮನೇ ಮೊದಲಾದ ಎಲ್ಲ ವಿದ್ಯಾಧರರೂ ಅಲ್ಲಿಗೆ ಬಂದರು.

೯೦. ನಂತರ ಸೂರ್ಯ ಪ್ರಭನೂ ಅವರೂ ತುಪ್ಪ ಮತ್ತು ಕಮಲಪುಷ್ಪಗಳ ಹವಿಸ್ಸಿನಿಂದ ಹೋಮ ಮಾಡಿದರು. ಕ್ಷಣ ಮಾತ್ರದಲ್ಲಿ ಆ ಸರೋವರದಿಂದ ಘೋರವಾದ ಮೇಘವೊಂದು ಮೇಲೆದ್ದಿತು.

೯೧. ಆ ಮೋಡವು ಆಕಾಶವನ್ನೆಲ್ಲ ವ್ಯಾಪಿಸಿಕೊಂಡು ಮಹಾವೃಷ್ಟಿಯನ್ನೇ ಸುರಿಸಿತು. ನಂತರ ಅದರ ನಡುವಿನಿಂದ ಒಂದು ನಾಗವು ಕೆಳಗೆ ಬಿದ್ದಿತು.

೯೨. ಸುಮೇರು ಹೇಳಿದಂತೆ ಸೂರ್ಯಪ್ರಭನು ಎದ್ದು ದೊಡ್ಡದಾಗುತ್ತಿದ್ದ ಅದನ್ನು ಗಟ್ಟಿಯಾಗಿ ಹಿಡಿದುಕೊಂಡಾಗ ಅದು ಬಿಲ್ಲಾಗಿ ಮಾರ್ಪಟ್ಟಿತು.

---

ಏತತ್ ಸುಮೇರೋಃ ಶ್ರುತ್ವಾ ತೇ ತಸ್ಮಿನ್ನೇವಾಗ್ರಯಾಯಿನಿ ।
ಸೂರ್ಯಪ್ರಭಾದಯೋ ಜಗ್ಮುರ್ಹೇಮಕೂಟಾಚಲಂ ತತಃ ॥ ೮೬
ಪಾರ್ಶ್ವೇ ತಸ್ಯೋತ್ತರೇ ತೇ ಚ ಮಾನಸಾಖ್ಯಂ ಸರೋವರಂ ।
ಪ್ರಾಪುಃ ಸಮುದ್ರನಿರ್ಮಾಣೇ ವಿಧಾತುರಿವ ವರ್ಣಕಮ್ । । ೮೭
ಮುಖಾನಿ ದಿವ್ಯನಾರೀಣಾಂ ಕ್ರೀಡಂತೀನಾಂ ಜಲಾಂತರೇ ।
ನಿಹ್ನುವಾನಂ ಮರುದ್ಧೂತೈರುತ್ಫುಲ್ಲೈಃ ಕನಕಾಂಬುಜೈಃ ॥ ೮೮
ಆಲೋಕಯಂತಿ ಯಾವಚ್ಚ ಸರಸಸ್ತಸ್ಯ ತೇ ಶ್ರಿಯಮ್ ।
ತಾವತ್ತತ್ರಾಯಯುಃ ಸರ್ವೇ ಶ್ರುತಶರ್ಮಾದಯೋಽಪಿ ತೇ ॥ ೮೯
ತತಃ ಸೂರ್ಯಪ್ರಭಸ್ತೇ ಚ ಹೋಮಂ ಚಕ್ರುರ್ಘೃತಾಂಬುಜೈಃ ।
ಕ್ಷಣಾಚ್ಚಾತ್ರೋದಗಾದ್ಘೋರೋ ಮೇಘಸ್ತಸ್ಮಾತ್ ಸರೋವರಾತ್ ॥ ೯೦
ಸ ವ್ಯಾಪ್ಯ ಗಗನಂ ಮೇಘೋ ಮಹದ್ವರ್ಷಮವಾಸೃಜತ್ ।
ತನ್ಮಧ್ಯೇಚ ಪಪಾತೈಕೋ ನಾಗಃ ಕಾಲೋಽಂಬುದಾತ್ತತಃ ॥ ೯೧
ಸುಮೇರುವಾಕ್ಯಾಚ್ಚೋತ್ಥಾಯ ಗಾಢಂ ಸೂರ್ಯಪ್ರಭೇಣ ಯತ್ ।
ಗೃಹೀತೋ ವರ್ಧಮಾನೋಽಪಿ ತತ್ಸ ನಾಗೋಽಭವದ್ಧನುಃ ॥ ೯೨

೯೩. ನಾಗನು ಬಿಲ್ಲಾಗಿ ತೋರುತ್ತಿದ್ದಂತೆಯೇ ಮತ್ತೊಬ್ಬ ನಾಗನು ತನ್ನ ವಿಷಾಗ್ನಿಯ ಫೂತ್ಕಾರದಿಂದ ವಿದ್ಯಾಧರರನ್ನೆಲ್ಲ ಬೆದರಿಸುತ್ತಾ ಆಕಾಶದಿಂದ ಕೆಳಕ್ಕೆ ಬಿದ್ದನು.

೯೪. ಮೊದಲಿನಂತೆ ಸೂರ್ಯಪ್ರಭನು ಅದನ್ನೂ ಹಿಡಿದನು. ಅದು ಬಿಲ್ಲಿನ ಹುರಿಯಾಗಿ ಮಾರ್ಪಟ್ಟಾಗ ಮೇಘವು ಕಾಣದಾಯಿತು.

೯೫. "ಸೂರ್ಯಪ್ರಭನೇ! ಇದು ಅಪಾರ ಬಲವುಳ್ಳ ಧನುಸ್ಸು. ನಿನಗೆ ಇದು ಸಿದ್ಧಿಸಿದೆ. ಕತ್ತರಿಸಲಾಗದ ಹುರಿಯಿದು, ಈ ರತ್ನಗಳನ್ನು ಸ್ವೀಕರಿಸು.'

೯೬. ಹೀಗೆಂಬುದಾಗಿ ದಿವ್ಯವಾದ ವಾಣಿಯೊಂದು ಕೇಳಿಸಿತು. ಇದಕ್ಕೂ ಮೊದಲು ಹೂಮಳೆ ಸುರಿಯಿತು. ಸೂರ್ಯಪ್ರಭನು ಹುರಿಯಿಂದ ಕೂಡಿದ ಆ ಶ್ರೇಷ್ಠ ಬಿಲ್ಲನ್ನು ಪಡೆದುಕೊಂಡನು.

೯೭. ದುರ್ಮನಗೊಂಡ ಶ್ರುತಶರ್ಮನು ತನ್ನ ಎಲ್ಲ ಹಿಂಬಾಲಕರೊಡನೆ ತಪೋವನಕ್ಕೆ ಹೋದನು. ಮಯಾದಿ ಅಸುರರೂ ಸೂರ್ಯಪ್ರಭನೂ ಹರ್ಷಗೊಂಡರು.

೯೮–೯೯. ಧನುಸ್ಸಿನ ಉತ್ಪತ್ತಿಯನ್ನು ಕುರಿತು ಕೇಳಲಾಗಿ ಸುಮೇರುವು ಇಂತೆಂದನು. ಇಲ್ಲಿ ಕೀಚಕವೆಂಬ ಒಂದು ವಿಶೇಷ ಬಿದಿರಿನಿಂದ ಕೂಡಿದ ದಿವ್ಯವಾದ ಮಹಾವನವಿದೆ ಸರೋವರದಲ್ಲಿ ಕತ್ತರಿಸಿ ಎಸೆಯಲ್ಪಟ್ಟ ಕೀಚಕಗಳೆಲ್ಲ ಈ ರೀತಿಯ ದಿವ್ಯವಾದ ಮಹಾಧನುಸ್ಸುಗಳಾಗುತ್ತವೆ.

---

ತಸ್ಮಿನ್ ಧನುಷ್ಟ್ವಮಾಪನ್ನೇ ದ್ವಿತೀಯೋಽಭ್ರಾತ್ತತೋಽಪತತ್ ।
ನಾಗೋ ವಿಷಾಗ್ನಿವಿತ್ರಾಸನಸ್ತನ್ನಿಃಶೇಷಖೇಚರಃ ॥ ೯೩
ಸೋಽಪಿ ಸೂರ್ಯಪ್ರಭೇಣಾತ್ರ ಗೃಹೀತಸ್ತೇನ ಪೂರ್ವವತ್ ।
ಧನುರ್ಗುಣತ್ವಂ ಸಂಪ್ರಾಪ ಮೇಘಶ್ಚಾಶು ನನಾಶ ಸಃ ॥ ೯೪
ಸೂರ್ಯಪ್ರಭಾಮಿತಬಲಂ ಸಿದ್ಧಮೇತದ್ಧನುಸ್ತವ ।
ಅಚ್ಛೇದ್ಯಶ್ಚ ಗುಣೋಽಪ್ಯೇಷ ರತ್ನೇ ಏತೇ ಗೃಹಾಣ ತತ್ ॥ ೯೫
ಇತ್ಯಶ್ರಾವಿ ಚ ವಾಗ್ದಿವ್ಯಾ ಪುಷ್ಪವೃಷ್ಟಿಪುರಃಸರಾ ।
ಸೂರ್ಯಪ್ರಭಶ್ಚ ಸಗುಣಂ ಧನೂರತ್ನಂ ತದಗ್ರಹೀತ್ ॥ ೯೬
ಶ್ರುತಶರ್ಮಾಪ್ಯಗಾದ್ವಿಗ್ನಃ ಸಾನುಗಃ ಸ ತಪೋವನಂ ।
ಸೂರ್ಯಪ್ರಭೋಽಥ ಸರ್ವೇ ಚ ಹರ್ಷಮಾಪುರ್ಮಯಾದಯಃ ॥ ೯೭
ಪೃಷ್ಟೋಽಥ ಧನುರುತ್ಪತ್ತಿಂ ತೈಃ ಸುಮೇರುರುವಾಚ ಸಃ ।
ಇಹ ಕೀಚಕವೇಣೂನಾಂ ದಿವ್ಯಮಸ್ತಿ ವನಂ ಮಹತ್ ॥ ೯೮
ತತೋ ಯೇ ಕೀಚಕಾಶ್ಛಿತ್ವಾ ಕ್ಷಿಪ್ಯಾಂತೇಽತ್ರ ಸರೋವರೇ ।
ಮಹಾಂತ್ಯೇತಾನಿ ದಿವ್ಯಾನಿ ಸಂಪದ್ಯಂತೇ ಧನೂಂಷಿ ತೇ ॥ ೯೯

೧೦೦. ಹಿಂದೆ ದೇವತೆಗಳು, ಅಸುರರು, ಗಂಧರ್ವರು, ವಿದ್ಯಾಧರರು ಇವರೆಲ್ಲ ತಮಗಾಗಿ ಈ ದಿವ್ಯ ಧನುಸ್ಸುಗಳನ್ನೇ ಪಡೆದುಕೊಂಡರು.

೧೦೧. ಇವುಗಳಿಗೆಲ್ಲ ಹೆಸರುಗಳು ಬೇರೆ ಬೇರೆಯಾಗಿದೆ. ಅಮೃತಬಲ ಎಂಬ ಹೆಸರಿನ ಚಕ್ರವರ್ತಿ ಧನುಸ್ಸುಗಳನ್ನು ದೇವತೆಗಳು ಹಿಂದೆ ಇಲ್ಲಿ ಅಡಗಿಸಿಟ್ಟಿದ್ದರು.

೧೦೨. ಪುಣ್ಯವಂತರಾದ ಕೆಲವರಿಗೆ ಮಾತ್ರ ಅದೂ ಬಹುಕ್ಲೇಶದಿಂದ ಒದಗಿ ಬರುವಂತಹವು ಇವು. ಈಶ್ವರೇಚ್ಛೆಯಿಂದ ಚಕ್ರವರ್ತಿಗಳಿಗೆ ಪ್ರಾಪ್ತವಾಗುತ್ತವೆ.

೧೦೩. ಇಂದು ಸೂರ್ಯಪ್ರಭನಿಗೆ ಈ ಮಹಾಧನುಸ್ಸು ಸಿದ್ಧಿಸಿದೆಯಷ್ಟೆ. ಈತನ ಸ್ನೇಹಿತರಾದ ನೀವುಗಳು ನಿಮಗೆ ಒಪ್ಪುವ ಧನುಸ್ಸುಗಳನ್ನು ಪಡೆದು ಧನ್ಯರಾಗಿರಿ.

೧೦೪. ವಿದ್ಯೆಯನ್ನು ಸಿದ್ಧಿಸಿಕೊಂಡಿರುವ ಭವ್ಯರಾದ ಯಾವ ಯಾವ ವೀರರಿದ್ದಾರೋ ಅವರಿಗೆಲ್ಲ ಅವರ ಯೋಗ್ಯತಾನುಸಾರವಾಗಿ ಬಿಲ್ಲುಗಳು ಲಭಿಸುತ್ತವೆ.

೧೦೫. ಸುಮೇರುವಿನ ಈ ಮಾತನ್ನು ಕೇಳಿ ಸೂರ್ಯಪ್ರಭನ ಮಿತ್ರರಾದ ಪ್ರಭಾಸಾದಿಗಳು ಕೀಚಕವನಕ್ಕೆ ಹೊರಟರು.

೧೦೬. ಅಲ್ಲಿ ಕಾಡಿನ ರಕ್ಷಕನಾದ ರಾಜಾ ಚಂಡ ದಂಡನನ್ನು ಜಯಿಸಿ ಬಿದಿರನ್ನು ತಂದು ಆ ಕೊಳದಲ್ಲಿ ಮುಳುಗಿಸಿದರು.

---

ಸಾಧಿತಾನಿ ಚ ತಾನ್ಯೇವ ದೇವೈಸ್ತೈಸ್ತೈಃ ಪುರಾತ್ಮನಃ ।
ಅಸುರೈರಥ ಗಂಧರ್ವೈಸ್ತಥಾ ವಿದ್ಯಾಧರೋತ್ತಮೈಃ ॥ ೧೦೦
ಭಿನ್ನಾನಿ ತೇಷಾಂ ನಾಮಾನಿ ಚಕ್ರವರ್ತಿಧನೂಂಷಿ ತು ।
ಅತ್ರಾಮೃತಬಲಾಖ್ಯಾನಿ ನಿಕ್ಷಿಪ್ತಾನಿ ಪುರಾಸುರೈಃ ॥ ೧೦೧
ತಾನಿ ಚೈತೈಃ ಪರಿಕ್ಲೇಶೈಃ ಸಿಧ್ಯಂತಿ ಶುಭಕರ್ಮಣಾಂ ।
ಕೇಷಾಂಚಿದೀಶ್ವರೇಚ್ಛಾತೋ ಭವಿಷ್ಯಚ್ಚಕ್ರವರ್ತಿನಾಮ್ ॥ ೧೦೨
ತಚ್ಚ ಸೂರ್ಯಪ್ರಭೇಣೈತತ್ ಸಿದ್ಧಮದ್ಯ ಮಹದ್ಧನುಃ ।
ಸ್ವೋಚಿತಾನಿ ವಯಸ್ಯಾಸ್ತತ್ಸಾಧಯಂತ್ವಸ್ಯ ತಾನ್ಯಮೀ ॥ ೧೦೩
ಯೇಷಾಂ ಹಿ ಸಿದ್ಧವಿದ್ಯಾನಾಂ ವೀರಾಣಾಮಸ್ತಿ ಯೋಗ್ಯತಾ ।
ಯಥಾನುರೂಪಂ ಭವ್ಯಾನಾಂ ಸಿಧ್ಯಂತ್ಯದ್ಯಾಪಿ ತಾನಿ ಹಿ ॥ ೧೦೪
ಏತತ್ ಸುಮೇರುವಚನಂ ಶ್ರುತ್ವಾ ಸೂರ್ಯಪ್ರಭಸ್ಯ ತೇ ।
ವಯಸ್ಯಾಃ ಕೀಚಕವನಂ ತತ್ ಪ್ರಭಾಸಾದಯೋ ಯಯುಃ ॥ ೧೦೫
ತದ್ರಕ್ಷಕಂ ಚ ರಾಜಾನಂ ಚಂಡದಂಡಂ ವಿಜಿತ್ಯ ತೇ ।
ಆನೀಯ ಕೀಚಕಾನ್ಸ್ತತ್ರ ನಿದಧುಃ ಸರಸೋಽಂತರೇ ॥ ೧೦೬

೧೦೭. ನಂತರ ಮಿಂದು ಮಡಿಯುಟ್ಟು ಅದರ ತೀರದಲ್ಲಿ ಜಪತಪಾದಿ ನೇಮದಲ್ಲಿ ತೊಡಗಿದರು. ಒಂದು ವಾರ ಕಾಲದಲ್ಲೇ ಅವರಿಗೆಲ್ಲ ಸೂಕ್ತವಾದ ಬಿಲ್ಲುಗಳು ಪ್ರಾಪ್ತವಾದವು.

೧೦೮. ಈ ವೃತ್ತಾಂತವನ್ನು ಅವರು ಮಯ ಮುಂತಾದವರಿಗೆಲ್ಲ ತಿಳಿಸಿದ ಮೇಲೆ ಸೂರ್ಯಪ್ರಭನೊಡನೆ ಸುಮೇರುವಿನ ತಪೋವನಕ್ಕೆ ಬಂದರು.

೧೦೯. ಸುಮೇರುವು ಸೂರ್ಯಪ್ರಭನಿಗೆ "ಅಜೇಯನಾದ ವೇಣುವನದ ಅಧಿಪತಿ ಚಂಡ ದಂಡನನ್ನು ನಿನ್ನ ಗೆಳೆಯರೆಲ್ಲ ಸೇರಿ ಗೆದ್ದಿದ್ದಾರೆ. ಇದು ಅದ್ಭುತವೇ ಸರಿ.

೧೧೦. ಅವನಲ್ಲಿ "ಮೋಹಿನೀ' ಎಂಬ ವಿದ್ಯೆಯಿದೆ. ಅದರಿಂದಲೇ ಅವನು ಅಜೇಯನಾಗಿದ್ದಾನೆ. ನಿಶ್ಚಯವಾಗಿಯೂ ಅವನು ತನ್ನ ಈ ವಿದ್ಯೆಯನ್ನು ಪ್ರಮುಖನಾದ ಶತ್ರುವಿನ ಸಂಹಾರಕ್ಕೆಂದು ಮೀಸಲಾಗಿಟ್ಟಿರಬೇಕು.

೧೧೧. ಆದ್ದರಿಂದಲೇ ಅವನು ಇದನ್ನು ನಿನ್ನ ಗೆಳೆಯರ ಮೇಲೆ ಈಗ ಪ್ರಯೋಗ ಮಾಡಿಲ್ಲವೆಂದು ತೋರುತ್ತದೆ. ಅದು ಒಮ್ಮೆ ಮಾತ್ರ ಫಲಿಸುವ ವಿದ್ಯೆ. ಮತ್ತೆ ಮತ್ತೆ ಅದನ್ನು ಬಳಸುವಂತಿಲ್ಲ.

೧೧೨. ಇವನು ಆ ವಿದ್ಯೆಯನ್ನು ಹೇಳಿಕೊಟ್ಟ ಗುರುವಿನ ಮೇಲೆ ಅದರ ಪ್ರಭಾವವನ್ನು ಪರೀಕ್ಷಿಸಲು ಪ್ರಯೋಗಿಸಿಬಿಟ್ಟಿದ್ದ. ಇದರಿಂದ ಸಿಟ್ಟಿಗೆದ್ದ ಗುರುವು ಈ ರೀತಿ ಒಮ್ಮೆ ಮಾತ್ರ ಫಲಿಸುವಂತೆ ಶಾಪವಿತ್ತಿದ್ದಾನೆ.

---

ತತ್ತೀರೋಪೋಷಿತಾನಾಂ ಚ ಜಪತಾಂ ಜುಹ್ವತಾಂ ತಥಾ ।
ಸಿಧ್ಯಂತಿ ಸ್ಮ ಧನೂಂಷ್ಯೇಷಾಂ ಸಪ್ತಾಹಾತ್ಸತ್ತ್ವಶಾಲಿನಾಮ್ ॥ ೧೦೭

ಪ್ರಾಪ್ತೈ ಸ್ತೈರುಕ್ತವೃತ್ತಾಂತೈರ್ಮಯಾದ್ಯೈಶ್ಚ ಸಹಾಥ ಸಃ ।
ಆಗಾತ್ ಸೂರ್ಯಪ್ರಭಸ್ತಾವತ್ ತತ್ಸುಮೇರೋಸ್ತಪೋವನಮ್ ॥ ೧೦೮

ತತ್ರೋವಾಚ ಸುಮೇರುಸ್ತಂ ಜಿತೋ ವೇಣುವನೇಶ್ವರಃ ।
ತ್ವನ್ಮಿತ್ರೈಶ್ಚಂಡದಂಡೋ ಯದಜೇಯೋಽಪಿ ತದದ್ಭುತಮ್ ॥ ೧೦೯

ತಸ್ಯಾಸ್ತಿ ಮೋಹಿನೀ ನಾಮ ವಿದ್ಯಾ ತೇನ ಸ ದುರ್ಜಯಃ ।
ನೂನಂ ಸಾ ಸ್ಥಾಪಿತಾ ತೇನ ಪ್ರಧಾನಸ್ಯ ರಿಪೋಃ ಕೃತೇ ॥ ೧೧೦

ಅತಃ ಪ್ರಯುಕ್ತಾ ನೈತೇಷು ತ್ವದ್ವಯಸ್ಯೇಷು ಸಂಪ್ರತಿ ।
ಸಕೃದೇವ ಹಿ ಸಾ ತಸ್ಯ ಫಲದಾ ನ ಪುನಃ ಪುನಃ ॥ ೧೧೧

ಗುರಾವೇವ ಹಿ ಸಾ ತೇನ ಪ್ರಭಾವಾವೇಕ್ಷಣಾಯ ಭೋಃ ।
ಪ್ರಯುಕ್ತಾಭೂದತಃ ಶಾಪಸ್ತೇನ ದತ್ತೋಽಸ್ಯ ತಾದೃಶಃ ॥ ೧೧೨

೧೧೩. ಇದನ್ನೆಲ್ಲ ಸರಿಯಾಗಿ ಆಲೋಚಿಸಬೇಕು. ವಿದ್ಯೆಗಳ ಪ್ರಭಾವವನ್ನು ಸಿದ್ಧಿಸಿಕೊಳ್ಳುವುದು ಅಷ್ಟೇನೂ ಸುಲಭವಲ್ಲ. ಆದ್ದರಿಂದ ನೀವುಗಳು ಈ ವಿಚಾರವಾಗಿ ಪೂಜ್ಯನಾದ ಮಯನನ್ನು ಕೇಳಿರಿ.

೧೧೪. (ಏಕೆಂದರೆ) ಮಯನ ಮುಂದೆ ನಾನಾರು ? ಸೂರ್ಯನ ಮುಂದೆ ಕಿರುಸೊಡರೆ ?' ಹೀಗೆಂದು ಸುಮೇರುವು ಸೂರ್ಯಪ್ರಭನಿಗೆ ಹೇಳಲು ಮಯನು ಹೀಗೆಂದನು.

೧೧೫. "ಸುಮೇರು ಹೇಳಿದ್ದು ಸತ್ಯ. ನಾನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಶಕ್ತಿಗಳು, ಅನುಶಕ್ತಿಗಳು–ಇವೆಲ್ಲ ಅವ್ಯಕ್ತದಿಂದ ಹುಟ್ಟುತ್ತವೆ.

೧೧೬. ಅಲ್ಲಿ ಪ್ರಾಣಶಕ್ತಿಯಿಂದ ನಾದವು ಉತ್ಪತ್ತಿಯಾಗುತ್ತದೆ. ಆ ನಾದವು ಬಿಂದು ಪಥವನ್ನು ಆಶ್ರಯಿಸಿದೆ. ಇದೇ ಪರತತ್ತ್ವದ ಅಂಶದಿಂದ ಕೂಡಿ ವಿದ್ಯೆಗಳನ್ನು ಸಿದ್ಧಿಸಿಕೊಡುವ ಮಂತ್ರಗಳಾಗುತ್ತವೆ.

೧೧೭. ಜ್ಞಾನದಿಂದಾಗಲಿ, ತಪಸ್ಸಿನಿಂದಾಗಲಿ, ಸಿದ್ಧಪುರುಷರ ಆಜ್ಞೆಯಿಂದಾಗಲಿ ಪಡೆದ ಆ ಮಂತ್ರವಿದ್ಯೆಗಳ ಪ್ರಭಾವವು ಅನುಲ್ಲಂಘನೀಯವಾಗಿರುತ್ತದೆ.

೧೧೮. ಆದ್ದರಿಂದ ಮಗು, ಈಗಾಗಲೇ ಎಲ್ಲ ವಿದ್ಯೆಗಳೂ ನಿನಗೆ ಸಿದ್ಧಿಸಿವೆ. ಉಳಿದಿರುವುದು ಎರಡೇ. ಮೋಹಿನೀ ಮತ್ತು ಪರಿವರ್ತಿನೀ ಎಂಬ ಆ ಎರಡು ವಿದ್ಯೆಗಳನ್ನು ನೀನಿನ್ನೂ ಸಾಧಿಸಿಲ್ಲ.

---

ತಚ್ಚಿಂತ್ಯಮೇತದ್ವಿದ್ಯಾನಾಂ ಪ್ರಭಾವೋ ಹಿ ದುರಾಸದಃ ।
ತತ್ಕಾರಣಂ ಚ ಭವತಾ ಪೃಚ್ಛ್ಯತಾಂ ಭಗವಾನ್ ಮಯಃ ॥ ೧೧೩
ಅಸ್ಯಾಗ್ರೇ ಕಿಮಹಂ ವಚ್ಮಿ ಕಃ ಪ್ರದೀಪೋ ರವೇಃ ಪುರಃ ।
ಏವಂ ಸುಮೇರುಣಾ ಸೂರ್ಯಪ್ರಭಸ್ಯೋಕ್ತೇ ಮಯೋಽಬ್ರವೀತ್ ॥ ೧೧೪
ಸತ್ಯಂ ಸುಮೇರುಣೋಕ್ತಂ ತೇ ಸಂಕ್ಷೇಪಾತ್ ಶೃಣು ವಚ್ಮ್ಯತಃ ।
ಅವ್ಯಕ್ತಾತ್ ಪ್ರಭವಂತೀಹ ತಾಸ್ತಾಃ ಶಕ್ತ್ಯನುಶಕ್ತಯಃ ॥ ೧೧೫
ತತ್ರೋದ್ಗತಃ ಪ್ರಾಣಶಕ್ತೇರ್ನಾದೋ ಬಿಂದುಪಥಾಶ್ರಿತಃ ।
ವಿದ್ಯಾದಿಮಂತ್ರತಾಮೇತಿ ಪರತತ್ತ್ವಕಲಾನ್ವಿತಃ ॥ ೧೧೬
ತಾಸಾಂ ಚ ಮಂತ್ರವಿದ್ಯಾನಾಂ ಜ್ಞಾನೇನ ತಪಸಾಪಿ ವಾ ।
ಸಿದ್ಧಾಜ್ಞಯಾ ವಾ ಸಿದ್ಧಾನಾಂ ಪ್ರಭಾವೋ ದುರತಿಕ್ರಮಃ ॥ ೧೧೭
ತತ್ಪುತ್ರ ಸರ್ವವಿದ್ಯಾಸ್ತೇ ಸಿದ್ಧಾ ದ್ವಾಭ್ಯಾಂ ತು ಹೀಯಸೇ ।
ಮೋಹಿನೀಪರಿವರ್ತಿನ್ಯೌ ನ ವಿದ್ಯೇ ಸಾಧಿತೇ ತ್ವಯಾ ॥ ೧೧೮

೧೯. ಯಾಜ್ಞವಲ್ಕ್ಯನು ನಿನ್ನನ್ನು ಬಲ್ಲವನಾಗಿದ್ದಾನೆ. ಹೋಗು, ಆತನನ್ನು ಪ್ರಾರ್ಥಿಸಿಕೊ' ಎಂಬ ಮಯಾಸುರನ ಮಾತಿನಂತೆ ಸೂರ್ಯಪ್ರಭನು ಆ ಋಷಿಯ ಬಳಿ ಸಾರಿದನು.

೨೦. ಆ ಮುನಿಯು ಅವನನ್ನು ಏಳು ದಿನಗಳ ಕಾಲ ಸರ್ಪಕೊಳದಲ್ಲಿ ವಾಸ ಮಾಡಿಸಿದನು; ಬೆಂಕಿಯ ನಡುವೆ ಮೂರು ದಿನಗಳು ತಪಸ್ಸು ಮಾಡಿಸಿದನು.

೨೧. ಸರ್ಪದಂಶನವನ್ನು ಸಹಿಸಿಕೊಂಡಾದ ಮೇಲೆ ಸಪ್ತಾಹಕಾಲದಲ್ಲಿ ಮೋಹಿನೀ ವಿದ್ಯೆಯನ್ನು, ಅಗ್ನಿಯನ್ನು ಭರಿಸಿದ ಮೇಲೆ ಮೂರು ದಿನಗಳ ನಂತರ ಪರಿವರ್ತಿನೀ ವಿದ್ಯೆಯನ್ನು ಹೇಳಿಕೊಟ್ಟನು.

೨೨. ವಿದ್ಯೆಗಳನ್ನು ಪಡೆದ ನಂತರ ಮತ್ತೆ "ವಹ್ನಿಕುಂಡವನ್ನು ಪ್ರವೇಶಿಸು' ಎಂದು ಮುನಿಯು ಆದೇಶಿಸಲಾಗಿ ಹಾಗೆಯೇ ಆಗಲೆಂದು ಆದೇಶವನ್ನು ಪಾಲಿಸಿದನು.

೨೩. ಆ ಕ್ಷಣದಲ್ಲಿ ಬೇಕಾದ ಕಡೆಗೆ ಹೋಗಬಹುದಾದ ಮಹಾಪದ್ಮ ಎಂಬ ಆಕಾಶಗಾಮಿಯಾದ ವಿಮಾನವು ಸೂರ್ಯಪ್ರಭನ ಬಳಿಗೆ ಬಂದಿತು.

೨೪. ಆ ವಿಮಾನವು ಹದಿನೆಂಟು ದಳಗಳಿಂದಲೂ ನೂರು ಪುರಗಳಿಂದಲೂ ಅಲಂಕೃತವಾಗಿತ್ತು. ನಾನಾ ರೂಪವುಳ್ಳ ಮಹಾರತ್ನಗಳಿಂದ ಅದನ್ನು ನಿರ್ಮಿಸಲಾಗಿತ್ತು

---

ಯಾಜ್ಞವಲ್ಕ್ಯಶ್ಚ ತೇ ವೇತ್ತಿ ತದ್ಗಚ್ಛ ಪ್ರಾರ್ಥಯಸ್ವ ತಮ್ ।
ಏವಂ ಮಯೋಕ್ತ್ಯಾ ತಸ್ಯರ್ಷೇರ್ಯಯೌ ಸೂರ್ಯಪ್ರಭೋಽಂತಿಕಮ್ ॥ ೧೯

ಸ ಮುನಿಸ್ತಂ ಚ ಸಪ್ತಾಹಂ ನಿವಾಸ್ಯ ಭುಜಗಹ್ರದೇ ।
ಅಗ್ನಿಮಧ್ಯೇ ತ್ರ್ಯಹಂ ಚೈವ ತಪಶ್ಚರ್ಯಾಮಕಾರಯತ್ ॥ ೨೦
ದದೌ ಸೋಢಾಹಿದಂಶಸ್ಯ ಸಪ್ತಾಹಾಚ್ಚಾಸ್ಯ ಮೋಹಿನೀಮ್ ।
ವಿದ್ಯಾಂ ವಿಸೋಢವಹ್ನೇಶ್ಚ ತ್ರ್ಯಹಾದ್ವಿಪರಿವರ್ತಿನೀಮ್ ॥ ೨೧
ಪ್ರಾಪ್ತವಿದ್ಯಸ್ಯ ಭೂಯೋಽಪಿ ವಹ್ನಿಕುಂಡಪ್ರವೇಶನಮ್ ।
ತಸ್ಯಾದಿದೇಶ ಸ ಮುನಿಃ ಸ ತಥೇತ್ಯಕರೋಚ್ಚ ತತ್ ॥ ೨೨
ತತ್ಕ್ಷಣಂ ಚ ಮಹಾಪದ್ಮವಿಮಾನಂ ತಸ್ಯ ಕಾಮಗಂ ।
ಅಭೂದುಪನತಂ ಸೂರ್ಯಪ್ರಭಸ್ಯ ಗಗನೇಚರಮ್ ॥ ೨೩
ಅಷ್ಟೋತ್ತರೇಣ ಪತ್ರಾಣಾಂ ಪುರಾಣಾಂ ಚ ಶತೇನ ಯತ್ ।
ಅಲಂಕೃತಂ ಮಹಾರತ್ನೈರ್ನಾನಾರೂಪೈರ್ವಿನಿರ್ಮಿತಮ್ ॥ ೨೪

೧೨೫. ಆಗ "ಇದು ಚಕ್ರವರ್ತಿ ವಿಮಾನ. ನಿನಗೆ ಪ್ರಾಪ್ತವಾಗಿದೆ. ನಗರಗಳಲ್ಲಿ ಅಂತಃಪುರಗಳಲ್ಲೂ ಎಲ್ಲಿ ಬೇಕಾದರೂ ಇದನ್ನು ನೆಲೆಗೊಳಿಸಬಹುದು.

೧೨೬. ಇದರಿಂದ ಅವು (ನಗರ, ಅಂತಃಪುರಗಳು) ಶತ್ರುಗಳ ದಾಳಿಗೆ ಸಿಲುಕುವುದಿಲ್ಲ' ಎಂದು ಅಶರೀರವಾಣಿಯೊಂದು ಅಂತರಿಕ್ಷದಿಂದಲೇ ಆ ವೀರನನ್ನು ಕುರಿತು ಹೇಳಿತು.

೧೨೭. ಬಳಿಕ, ಅವನು ಗುರುವಾದ ಯಾಜ್ಞವಲ್ಕ್ಯನನ್ನು ವಿನಯದಿಂದ ವಿಜ್ಞಾಪಿಸಿಕೊಂಡನು. 'ಗುರುದಕ್ಷಿಣೆ ಏನು ಕೊಡಬೇಕೆಂದು ಆಜ್ಞಾಪಿಸಿರಿ' ಎಂದು.

೧೨೮. "ನಿನ್ನ ಅಭಿಷೇಕದ ಸಂದರ್ಭದಲ್ಲಿ ನನ್ನನ್ನು ನೆನಪಿಸಿಕೊ. ಇದೇ ಗುರುದಕ್ಷಿಣೆ. ಹೊರಡು, ನಿನ್ನ ಸೈನ್ಯವನ್ನು ಸೇರಿಕೊ' ಎಂದು ಮುನಿಯು ಹೇಳಿದನು.

೧೨೯. ಮುನಿಯನ್ನು ನಮಿಸಿ ಸೂರ್ಯಪ್ರಭನು ವಿಮಾನವನ್ನೇರಿ ಸುಮೇರು ನಿವಾಸದ ಬಳಿಯಿದ್ದ ಸೈನ್ಯದ ಬೀಡಿಗೆ ಬಂದನು.

೧೩೦. ಅಲ್ಲಿ ಸುನೀಥ, ಸುಮೇರು, ಮಯಾಸುರರಿಗೆ ತನ್ನ ವೃತ್ತಾಂತವನ್ನು ಹೇಳಿದಾಗ ವಿದ್ಯಾವಿಮಾನವನ್ನೂ ಸಿದ್ಧಿಸಿಕೊಂಡಿದ್ದ ಸೂರ್ಯಪ್ರಭನನ್ನು ಅವರೆಲ್ಲರೂ ಅಭಿನಂದಿಸಿದರು.

೧೩೧. ನಂತರ ಸುನೀಥನು ಸುವಾಸಕುಮಾರನನ್ನು ಸ್ಮರಿಸಿಕೊಂಡನು. ಅವನು ಬಂದು ಮಯಾದಿಗಳಿದ್ದ ರಾಜಮಂಡಲದಲ್ಲಿ ಹೀಗೆಂದು ನಿವೇದಿಸಿಕೊಂಡನು.

---

ಚಕ್ರವರ್ತಿವಿಮಾನಂ ತೇ ಸಿದ್ಧಮೇತದಮುಷ್ಯ ಚ ।
ಪುರೇಷ್ವಂತಃಪುರಾಣ್ಯೇಷು ಸರ್ವೇಷು ಸ್ಥಾಪಯಿಷ್ಯಸಿ ॥ ೧೨೫
ಯೇನ ತಾನ್ಯಪ್ರಧೃಷ್ಯಾಣಿ ಭವಿಷ್ಯಂತಿ ಭವದ್ವಿಷಾಮ್ ।
ಇತ್ಯಂತರಿಕ್ಷಾದ್ಧೀರಂ ತಮುವಾಚಾಥ ಸರಸ್ವತೀ ॥ ೧೨೬
ತತಃ ಸ ಯಾಜ್ಞವಲ್ಕ್ಯಂ ತಂ ಗುರುಂ ಪ್ರಹ್ವೋ ವ್ಯಜಿಜ್ಞಪತ್ ।
ಆದಿಶ್ಯತಾಂ ಪ್ರಯಚ್ಛಾಮಿ ಕೀದೃಶೀಂ ದಕ್ಷಿಣಾಮಿತಿ ॥ ೧೨೭
ನಿಜಾಭಿಷೇಕಕಾಲೇ ಮಾಂ ಸ್ಮರೇರೇಷೈವ ದಕ್ಷಿಣಾ ।
ಗಚ್ಛ ತಾವತ್ಸ್ವಕಂ ಸೈನ್ಯಮಿತಿ ತಂ ಸೋಽಬ್ರವೀನ್ಮುನಿಃ ॥ ೧೨೮
ನತ್ವಾ ತತಸ್ತಂ ಸ ಮುನಿಂ ವಿಮಾನಂ ಚಾಧಿರುಹ್ಯ ತತ್ ।
ತತ್ಸುಮೇರುನಿವಾಸಸ್ಥಂ ಸೈನ್ಯಂ ಸೂರ್ಯಪ್ರಭೋ ಯಯೌ ॥ ೧೨೯
ತತ್ರಾಖ್ಯಾತಸ್ವವೃತ್ತಾಂತಂ ಸಸುನೀಥಸುಮೇರವಃ ।
ಸಿದ್ಧವಿದ್ಯಾವಿಮಾನಂ ತಮಭ್ಯನಂದನ್ಮಯಾದಯಃ ॥ ೧೩೦
ತತಃ ಸುನೀಥಃ ಸಸ್ಮಾರ ತಂ ಸುವಾಸಕುಮಾರಕಮ್ ।
ಸ ಚಾಗತ್ಯ ಮಯಾದೀನ್‌ತಾನ್ ಜಗಾದೈವಂ ಸರಾಜಕಮ್ ॥ ೧೩೧

೧೩೨. "ಸೂರ್ಯಪ್ರಭನಿಗೆ ವಿಮಾನ, ವಿದ್ಯೆಗಳು ಎಲ್ಲವೂ ಸಿದ್ಧಿಸಿವೆ. ಇನ್ನೂ ಏಕೆ ಉದಾಸೀನ ಮಾಡಬೇಕು ? ಶತ್ರುಗಳನ್ನು ಜಯಿಸಲು ಹೊರಡೋಣ'

೧೩೩ ಅದನ್ನು ಕೇಳಿ ಮಯನು, "ಭಗವಂತನು ಹೇಳಿದ್ದು ಸರಿ. ಆದರೆ ಮೊದಲು ದೂತನನ್ನು ಕಳಿಸಿ; ರಾಜನೀತಿಯನ್ನು ಅನುಸರಿಸಿ' ಎಂದನು.

೧೩೪. ಮಯಾಸುರನು ಹೀಗೆನ್ನಲಾಗಿ ಮುನಿಪುತ್ರನು ಇಂತೆಂದನು. "ಹಾಗೆಯೇ ಆಗಲಿ. ಇದರಿಂದ ಯಾವ ಹಾನಿಯೂ ಇಲ್ಲ. ಪ್ರಹಸ್ತನನ್ನು (ದೂತನಾಗಿ) ಕಳಿಸಿ. ಇವನು ಪ್ರತಿಭಾಶಾಲಿಯಾದ ವಾಗ್ಮಿ.

೧೩೫ ಕಾರ್ಯ ಕಾಲಗಳ ಗತಿಯನ್ನು ಬಲ್ಲವನು. ಸಮಯ ಬಂದರೆ ಕರ್ಕಶನೂ ಆಗಬಲ್ಲ. ಸಹನಶೀಲನೂ ಹೌದು. ಒಟ್ಟಿನಲ್ಲಿ ದೂತನಲ್ಲಿರಬೇಕಾದ ಸಕಲ ಗುಣಗಳೂ ಇವನಲ್ಲಿವೆ'

೧೩೬ ಆತನ ಮಾತಿನಲ್ಲಿ ಶ್ರದ್ಧೆಯಿರಿಸಿದ ಅವರೆಲ್ಲರೂ ಸಂದೇಶದ ಮಾತುಗಳನ್ನು ಹೇಳಿ ಪ್ರಹಸ್ತನನ್ನು ಶ್ರುತಶರ್ಮನ ಬಳಿಗೆ ಸಂದೇಶವಾಹಕನನ್ನಾಗಿ ಕಳಿಸಿದರು.

೧೩೭ ಆತನು ಹೋದ ಬಳಿಕ ಸೂರ್ಯಪ್ರಭನು ಅಲ್ಲಿದ್ದ ತನ್ನವರನ್ನೆಲ್ಲ ಕುರಿತು, "ನಾನು ಸ್ವಪ್ನದಲ್ಲಿ ಕಂಡ ಅಪೂರ್ವವಾದ ಕೌತುಕದ ಸಂಗತಿಯನ್ನು ಕೇಳಿರಿ' ಎಂದನು.

---

ಸಿದ್ಧಂ ವಿಮಾನಂ ವಿದ್ಯಾಶ್ಚ ಸರ್ವಾಃ ಸೂರ್ಯಪ್ರಭಸ್ಯ ತತ್ ।
ಉದಾಸೀನಾಃ ಕಿಮದ್ಯಾಪಿ ಸ್ಥಿತಾಃ ಸ್ಥ ರಿಪುನಿರ್ಜಯೇ ॥ ೧೩೨
ತಚ್ಛ್ರುತ್ವಾ ಸಮಯೋಽವಾದೀದ್ಯುಕ್ತಂ ಭಗವತೋದಿತಮ್ ।
ಕಿಂತು ಪ್ರಾಕ್ ಪ್ರೇಷ್ಯತಾಂ ದೂತೋ ನೀತಿಸ್ತಾವತ್ ಪ್ರಯುಜ್ಯತಾಂ ॥ ೧೩೩
ಏವಂ ಮಹಾಸುರೇಣೋಕ್ತೇ ಸೋಽಬ್ರವೀನ್ಮುನಿಪುತ್ರಕಃ ।
ಅಸ್ತ್ವೇವಂ ಕಾ ಕ್ಷತಿಸ್ತರ್ಹಿ ಪ್ರಹಸ್ತಃ ಪ್ರೇಷ್ಯತಾಮಯಮ್ ॥ ೧೩೪
ಏಷ ಸಪ್ರತಿಭೋ ವಾಗ್ಮೀ ಗತಿಜ್ಞಃ ಕಾರ್ಯಕಾಲಯೋಃ ।
ಕರ್ಕಶಶ್ಚ ಸಹಿಷ್ಣುಶ್ಚ ಸರ್ವದೂತಗುಣಾನ್ವಿತಃ ॥ ೧೩೫
ಇತಿ ತದ್ವಚನಂ ಸರ್ವೇ ಶ್ರದ್ಧಾಯ ವ್ಯಸೃಜಂಸ್ತತಃ ।
ಪ್ರಹಸ್ತಂ ದತ್ತಸಂದೇಶಂ ದೌತ್ಯಾಯ ಶ್ರುತಶರ್ಮಣೇ ॥ ೧೩೬
ತಸ್ಮಿನ್ ಗತೇಽಬ್ರವೀತ್ ಸೂರ್ಯಪ್ರಭಸ್ತಾನ್ನಿಖಿಲಾನ್ನಿಜಾನ್ ।
ಶ್ರೂಯತಾಂ ಯನ್ಮಯಾ ದೃಷ್ಟಮಪೂರ್ವಂ ಸ್ವಪ್ನಕೌತುಕಮ್ ॥ ೧೩೭

೧೩೮–೧೩೯. "ಬೆಳಗಿನ ಜಾವದಲ್ಲಿ, ನಾವೆಲ್ಲರೂ ಮಹಾ ಜಲಪ್ರವಾಹದಲ್ಲಿ ಸಿಲುಕಿದ್ದೆವು. ಆದರೂ ಅದು ಹೇಗೋ ತಿಳಿಯದು, ಯಾರೂ ಮುಳುಗಲಿಲ್ಲ, ಎಲ್ಲರೂ ಸಂತೋಷದಿಂದ ನರ್ತಿಸುತ್ತಿದ್ದೆವು. ಅಷ್ಟರಲ್ಲಿ ಎದುರುಗಾಳಿ ಬೀಸಿ ಪ್ರವಾಹದ ವೇಗವು ತಗ್ಗಿ ಹೋಯಿತು.

೧೪೦. ನಂತರ ತೇಜಶ್ಶಾಲಿಯಾದ ಪುರುಷನೊಬ್ಬನು ಬಂದು ನಮ್ಮನ್ನೆಲ್ಲ ಎತ್ತಿ ಬೆಂಕಿಗೆ ಹಾಕಿದ. ಆದರೆ ಯಾರಿಗೂ ಸುಟ್ಟಗಾಯಗಳಾಗಲಿಲ್ಲ.

೧೪೧. ಬಳಿಕ ಒಂದು ಮೋಡವು ಉದಿಸಿ ರಕ್ತದ ಮಳೆಯನ್ನೇ ಸುರಿಸಿತು. ಅದರಿಂದ ದಿಕ್ಕುಗಳೆಲ್ಲ (ರಕ್ತದಿಂದ) ಕೆಂಪಾದುವು. ಅಷ್ಟರಲ್ಲಿ ಬೆಳಗಾಯಿತು. ನನ್ನ ನಿದ್ದೆಯೂ ಕಳೆಯಿತು'

೧೪೨. ಸೂರ್ಯಪ್ರಭನ ಈ ಮಾತನ್ನು ಕೇಳಿ ಸುವಾಸಕುಮಾರನು ಹೀಗೆಂದನು. "ಏಳ್ಗೆಯೆಂಬುದು ಕಷ್ಟದಿಂದ ಮಾತ್ರ ಲಭಿಸತಕ್ಕದ್ದು' ಎಂಬುದು ಈ ಸ್ವಪ್ನದಿಂದ ತೋರುತ್ತಿದೆ.

೧೪೩. ನೀನು ಕಂಡ ನೀರಿನ ಪ್ರವಾಹವೆಂಬುದು ಸಂಗ್ರಾಮ. ಅದರಲ್ಲಿ ಮುಳುಗದೆ ಇದ್ದುದು ನಿಮ್ಮ ಧೈರ್ಯವನ್ನು ಹೇಳುತ್ತದೆ. ನೀರಿನಲ್ಲಿ ಕೊಚ್ಚಿ ಹೋಗುತ್ತಿದ್ದರೂ ನೃತ್ಯಮಾಡುತ್ತಿದ್ದುದು ಬದಲಾವಣೆಯನ್ನು ತೋರುತ್ತದೆ.

---

ಜಾನೇಽದ್ಯ ಕ್ಷೀಯಮಾಣಾಯಾಂ ಪಶ್ಯಾಮಿ ರಜನಾವಹಮ್ ।
ಯಾವನ್ಮಹಾಜಲೌಘೇನ ವಯಂ ಸರ್ವೇ ಹ್ರಿಯಾಮಹೇ ॥ ೧೩೮
ಹ್ರಿಯಮಾಣಾಶ್ಚ ನೃತ್ಯಾಮೋ ನ ಮಜ್ಜಾಮಃ ಕಥಂಚನ ।
ಅಥೌಘಃ ಸ ಪರಾವೃತ್ತಃ ಪ್ರತಿಕೂಲೇನ ವಾಯುನಾ ॥ ೧೩೯
ತತಃ ತೇನಾಪಿ ಪುರುಷೇಣೈತ್ಯ ಜ್ವಲಿತತೇಜಸಾ ।
ಉದ್ಧೃತ್ಯ ವಹ್ನೌ ಕ್ಷಿಪ್ತಾಃ ಸ್ಮೋ ನ ಚ ದಹ್ಯಾಮಹೇಽಗ್ನಿನಾ ॥ ೧೪೦
ಏತ್ಯಾಥ ಮೇಘೋ ರಕ್ತೌಘಂ ಪ್ರವೃಷ್ಟೋನ ಚಾಸೃಜಾ ।
ವ್ಯಾಪ್ತಾ ದಿಶಸ್ತತೋ ನಿದ್ರಾ ನಷ್ಟಾ ಮೇ ನಿಶಯಾ ಸಹ ॥ ೧೪೧
ಇತ್ಯುಕ್ತವಂತಂ ತಂ ಸ್ಮಾಹ ಸ ಸುವಾಸಕುಮಾರಕಃ ।
ಆಯಾಸಪೂರ್ವೋಽಭ್ಯುದಯಃ ಸ್ವಪ್ನೇನಾನೇನ ಸೂಚಿತಃ ॥ ೧೪೨
ಯೋ ಜಲೌಘಃ ಸಸಂಗ್ರಾಮೋ ಧೈರ್ಯಂ ತದ್ಯದಮಜ್ಜನಮ್ ।
ನೃತ್ಯತಾಂ ಹ್ರಿಯಮಾಣಾನಾಂ ಜಲೈಸ್ತತ್ ಪರಿವರ್ತಕಃ ॥ ೧೪೩

೧೫೪. ನಂತರ ಬಂದ ಗಾಳಿ ಯಾರೋ ಬಂದು ನಿಮ್ಮನ್ನು ರಕ್ಷಿಸುವ ಸೂಚನೆ. ತೇಜಶ್ಶಾಲಿಯಾದ ಪುರುಷನು ನಿಮ್ಮನ್ನು ಮೇಲಕ್ಕೆತ್ತಿದ ಎಂದೆಯಲ್ಲ, ಅದು ಮತ್ಯಾರೂ ಅಲ್ಲ, ಸಾಕ್ಷಾತ್ ಶಂಕರನೇ.

೧೫೫. ಬೆಂಕಿಯಲ್ಲಿ ಬಿದ್ದದ್ದು ಎಂಬುದು ಮಹಾಯುದ್ಧ ಮಾಡಬೇಕಾದುದರ ಮುಂಗಾಣ್ಕೆ ಮೇಘೋದಯವಾಗುವುದು ಮತ್ತೆ ಭಯಹುಟ್ಟಿಸುವ ಸೂಚನೆ.

೧೫೬. ರಕ್ತಧಾರೆ ಸುರಿಯುವುದು ಭಯ ನಿವಾರಣೆಯ ಸೂಚಕವಾಗಿದೆ. ದಿಕ್ಕುಗಳು ರಕ್ತದಿಂದ ತುಂಬುವುದು ನೀವು ಪಡೆಯಲಿರುವ ಅಪಾರ ಏಳ್ಗೆಯ ಸಂಕೇತವಾಗಿದೆ.

೧೫೭. ಸ್ವಪ್ನವೆಂಬುದು ಅನೇಕ ಬಾರಿ ಅನ್ಯಾರ್ಥವನ್ನೂ, ಸತ್ಯವನ್ನೂ, ಅಪಾರ್ಥವನ್ನೂ ಹೇಳುತ್ತದೆ. ಇಂದು ನಿನಗೆ ಬಿದ್ದ ಕನಸನ್ನು ಅನ್ಯಾರ್ಥಸೂಚಕ ಎನ್ನಬಹುದು.

೧೫೮. ಪ್ರಸನ್ನರಾದ ದೇವತೆಗಳು ವರವನ್ನು ಕೊಡುವಂತೆ ಆಗುವ ಕನಸು ಯಥಾರ್ಥವಾದುದು. ಗಾಢವಾದ ಅನುಭವ, ಚಿಂತೆ ಇತ್ಯಾದಿಗಳು ಕನಸಿನಲ್ಲಿ ತೋರಿದರೆ ಅಂಥಹ ಕನಸು ಅಪಾರ್ಥಕವಾಗಿರುತ್ತದೆ.

೧೫೯. ಬಾಹ್ಯಾರ್ಥದಿಂದ ವಿಮುಖವಾದರೂ ರಜೋಗುಣದಿಂದ ಕೂಡಿದ ಮನಸ್ಸಿನಿಂದ ಪ್ರಾಣಿಯು ನಿದ್ರೆಯಲ್ಲಿ ಆಯಾ ಕಾರಣಗಳಿಂದಲೇ ಕನಸನ್ನು ಕಾಣುತ್ತಾನೆ.

---

ಯೋ ಯುಷ್ಮಾಕಂ ಮರುತ್ ಸೋಽಪಿ ಶರಣ್ಯಃ ಕೋಽಪಿ ರಕ್ಷಿತಾ ।
ಯಶ್ಚೋದ್ಧರ್ತಾ ಜ್ವಲತ್ತೇಜಾಃ ಪುಮಾನ್ ಸಾಕ್ಷಾತ್ಸ ಶಂಕರಃ ॥ ೧೫೪
ಕ್ಷಿಪ್ತಾಃ ಸ್ಥಾಗ್ನೌ ಚ ಯತ್ತೇನ ತನ್ನ್ಯಸ್ತಾಃ ಸ್ಥ ಮಹಾಮೃಧೇ ।
ಮೇಘೋದಯಸ್ತತೋ ಯಚ್ಚ ಸ ಭೂಯೋಽಪಿ ಭಯಾಗಮಃ ॥ ೧೫೫
ರಕ್ತೌಘವರ್ಷಣಂ ಯಚ್ಚ ತದ್ಭಯಸ್ಯ ವಿನಾಶನಮ್ ।
ದಿಶಾಂ ಯದ್ರಕ್ತಪೂರ್ಣತ್ವಮೃದ್ಧಿಃ ಸಾ ಮಹತೀ ಚ ವಃ ॥ ೧೫೬
ಸ್ವಪ್ನಶ್ಚಾನೇಕಧಾನ್ಯಾರ್ಥೋ ಯಥಾರ್ಥೋಽಪಾರ್ಥ ಏವ ಚ ।
ಯಃ ಸದ್ಯಃ ಸೂಚಯತ್ಯರ್ಥಮನ್ಯಾರ್ಥಃ ಸೋಽಭಿಧೀಯತೇ ॥ ೧೫೭
ಪ್ರಸನ್ನದೇವತಾದೇಶರೂಪಃ ಸ್ವಪ್ನೋ ಯಥಾರ್ಥಕಂ ।
ಗಾಢಾನುಭವಚಿಂತಾದಿಕೃತಮಾಹುರಪಾರ್ಥಕಮ್ ॥ ೧೫೮
ರಜೋ ಮೂಢೇನ ಮನಸಾ ಬಾಹ್ಯಾರ್ಥವಿಮುಖೇನ ಹಿ ।
ಜಂತುರ್ನಿದ್ರಾವಶಃ ಸ್ವಪ್ನಂ ತೈಸ್ತೈಃ ಪಶ್ಯತಿ ಕಾರಣೈಃ ॥ ೧೫೯

೧೫೦. ಆ ಕನಸಿನ ಕಾಲವಿಶೇಷಕ್ಕೆ ತಕ್ಕಂತೆ ಅದರ ಫಲವು ಶೀಘ್ರವಾಗಿಯೋ ನಿಧಾನವಾಗಿಯೋ ಲಭಿಸುತ್ತದೆ. ಆದರೆ ಬೆಳಗಿನ ಜಾವದಲ್ಲಿ ಕಂಡ ಕನಸು ಬೇಗನೆ ಫಲಕಾರಿಯಾಗುತ್ತದೆ.

೧೫೧. ಮುನಿಕುಮಾರನಿಂದ ಇದೆಲ್ಲವನ್ನು ಕೇಳಿ ಅದರಿಂದ ಹಗುರಾಗಿ ಸೂರ್ಯಪ್ರಭಾದಿಗಳು ಎದ್ದು ನಿತ್ಯಕರ್ತವ್ಯದಲ್ಲಿ ತೊಡಗಿಕೊಂಡರು.

೧೫೨. ಅಷ್ಟರಲ್ಲಿ ಶ್ರುತಶರ್ಮನ ಕಡೆಯಿಂದ ಪ್ರಹಸ್ತನು ಹಿಂತಿರುಗಿದನು. ಮಯಾಸುರನೇ ಮುಂತಾದವರೆಲ್ಲ (ಏನಾಯಿತೆಂದು) ಕೇಳಲಾಗಿ ಅಲ್ಲಿ ನಡೆದದ್ದನ್ನು ಹೇಳಿದನು.

೧೫೩. 'ನಾನು ಇಲ್ಲಿಂದ ಹೊರಟು ಬೇಗನೆ ತ್ರಿಕೂಟಾಚಲದಲ್ಲಿರುವ ತ್ರಿಕೂಟಪತಾಕಾ ಎಂಬ ಸ್ವರ್ಣನಿರ್ಮಿತವಾದ ನಗರಿಯನ್ನು ಸೇರಿದೆ.

೧೫೪. ಅಲ್ಲಿ ಸಭಾ ನಿರ್ವಾಹಕನು (ಕ್ಷತ್ತಾ) ಒಳಗೆ ನಿವೇದಿಸಿಕೊಂಡಮೇಲೆ ಶ್ರುತಶರ್ಮನನ್ನು ಕಂಡೆ. ಅವನು ಅನೇಕ ವಿದ್ಯಾಧರ ರಾಜರ ಸಂಗಡ ಕುಳಿತಿದ್ದನು.

೧೫೫. ಅವನ ತಂದೆಯಾದ ತ್ರಿಕೂಟಸೇನ, ವಿಕ್ರಮಶಕ್ತಿ, ದುರಂಧರ, ದಾಮೋದರ ಮುಂತಾದ ಅನೇಕ ಶೂರರು ಅವನೊಡನಿದ್ದರು.

---

ಚಿರಶೀಘ್ರಫಲತ್ವಂ ಚ ತಸ್ಯ ಕಾಲವಿಶೇಷತಃ ।
ಏಷ ರಾತ್ರ್ಯಂತದೃಷ್ಟಸ್ತು ಸ್ವಪ್ನಃ ಶೀಘ್ರಫಲಪ್ರದಃ ॥ ೧೫೦
ಏತನ್ಮುನಿಕುಮಾರಾತ್ತೇ ಶ್ರುತ್ವಾ ತಸ್ಮಾತ್ಸುನಿರ್ವೃತಾಃ ।
ಉತ್ಥಾಯ ದಿನಕರ್ತವ್ಯಂ ವ್ಯಧುಃ ಸೂರ್ಯಪ್ರಭಾದಯಃ ॥ ೧೫೧
ತಾವತ್ ಪ್ರಹಸ್ತಃ ಪ್ರತ್ಯಾಗಾತ್ ಶ್ರುತಶರ್ಮಸಕಾಶತಃ ।
ಪೃಷ್ಟೋ ಮಯಾದಿಭಿಶ್ಚೈವಂ ಯಥಾವೃತ್ತಮವರ್ಣಯತ್ ॥ ೧೫೨
ಇತೋ ಗತೋಽಹಂ ತರಸಾ ತ್ರಿಕೂಟಾಚಲವರ್ತಿನೀಂ ।
ತಾಂ ತ್ರಿಕೂಟಪತಾಕಾಖ್ಯಾಂ ನಗರೀಂ ಹೇಮನಿರ್ಮಿತಾಮ್ ॥ ೧೫೩
ತಸ್ಯಾಂ ಪ್ರವಿಶ್ಯ ಚಾಪಶ್ಯಮಹಂ ಕ್ಷತ್ತ್ರನಿವೇದಿತಃ ।
ವೃತಂ ತಂ ಶ್ರುತಶರ್ಮಾಣಂ ತೈಸ್ತೈರ್ವಿದ್ಯಾಧರಾಧಿಪೈಃ ॥ ೧೫೪
ಪಿತ್ರಾ ತ್ರಿಕೂಟಸೇನೇನ ತಥಾ ವಿಕ್ರಮಶಕ್ತಿನಾ ।
ಧುರಂಧರೇಣ ಚಾನ್ಯೈಶ್ಚ ಶೂರೈರ್ದಾಮೋದರಾದಿಭಿಃ ॥ ೧೫೫

೧೫೬-೧೫೭-೧೫೮. ಆಸನದಲ್ಲಿ ಕುಳಿತ ನಾನು ಶ್ರುತಶರ್ಮನಿಗೆ ಹೇಳಿದೆ. "ಶ್ರೀಮನ್, ಸೂರ್ಯಪ್ರಭನು ನನ್ನನ್ನು ನಿನ್ನಲ್ಲಿಗೆ ಕಳಿಸಿದ್ದಾನೆ. ಆತನ ಸಂದೇಶ ಹೀಗಿದೆ. "ಧೂರ್ಜಟಿಯ ಅನುಗ್ರಹದಿಂದ ವಿದ್ಯೆಗಳನ್ನೂ, ರತ್ನಗಳನ್ನೂ, ಪ್ರಿಯಪತ್ನಿಯರನ್ನೂ ಸ್ನೇಹಿತರನ್ನೂ ಪಡೆದಿದ್ದೇನೆ. ನೀನು ನನ್ನ ಸೈನ್ಯದೊಡನೆ ಸೇರು ಬಾ. ನಾನು ನನ್ನ ಎದುರಾಳಿಗಳನ್ನು ಕೊಲ್ಲುವವನೂ ಬಾಗಿದವರನ್ನು ಕಾಪಾಡುವವನೂ ಆಗಿದ್ದೇನೆ.

೧೫೯. ಸುನೀಥನ ಪುತ್ರಿಯಾದ ಕಾಮ ಚೂಡಾಮಣಿಯೆಂಬ ಕನ್ಯೆಯನ್ನು ನೀನು ಅಪಹರಿಸಿದ್ದೀಯೆ. ಅದು ನಿನ್ನ ಅಜ್ಞಾನವನ್ನು ತೋರಿಸುತ್ತದೆ. ಅಗಮ್ಯಳಾದ ಆಕೆಯನ್ನು ಬಿಡು. ಇಲ್ಲದಿದ್ದರೆ ನಿನಗೆ ಅಶುಭ ಕಾದಿದೆ'.

೧೬೦-೧೬೧. ಎಂದು ನಾನು ಹೇಳಲಾಗಿ ಅವರೆಲ್ಲ ಕ್ರೋಧಾವಿಷ್ಟರಾಗಿ ಹೀಗೆಲ್ಲ ಕೂಗಾಡಿದರು. "ಯಾರವನು ನಮಗೆ ಇಂತಹ ಸಂದೇಶ ಕಳಿಸುವವನು ? ಮನುಷ್ಯರಿಗೆ ಇಂತಹ ಸಂದೇಶವನ್ನು ಬೇಕಾದರೆ ಕಳಿಸಲಿ. ಹುಲುಮಾನವನಾಗಿ ವಿದ್ಯಾಧರರಿಗೆ ಈ ರೀತಿಯ ದರ್ಪದ ಮಾತನ್ನು ಹೇಳಿದರೆ ಅವನು ನಾಶವಾಗುತ್ತಾನೆ'

೧೬೨. ಅದನ್ನು ಕೇಳಿ ನಾನು ಏನು ಹೇಳಿದೆನೆಂಬುದನ್ನೂ ಹೇಳುತ್ತೇನೆ ಕೇಳಿ. "ಸೂರ್ಯಪ್ರಭನನ್ನು ಸಾಕ್ಷಾತ್ ಹರನೇ ನಿಮ್ಮ ಚಕ್ರವರ್ತಿಯೆಂದು ನೇಮಿಸಿದ್ದಾನೆ. ಆತನು ಮಾನವನೇ ಆಗಿದ್ದರೂ ದೇವತ್ವವನ್ನು ಸಾಧಿಸಿದ್ದಾನೆ.

---

ಉಪವಿಶ್ಯಾಥ ತಮಹಂ ಶ್ರುತಶರ್ಮಾಣಮಭ್ಯಧಾಮ್ ।
ಶ್ರೀಮತಾ ಪ್ರಹಿತಃ ಸೂರ್ಯಪ್ರಭೇಣಾಹಂ ತ್ವದಂತಿಕಮ್ ॥ ೧೫೬
ಸಂದಿಷ್ಟಂ ತೇನ ಚೇದಂ ತೇ ಪ್ರಸಾದಾದ್ಧೂರ್ಜಟೇರ್ಮಯಾ ।
ವಿದ್ಯಾರತ್ನಾನಿ ಭಾರ್ಯಾಶ್ಚ ಸಹಾಯಾಶ್ಚೈವ ಸಾಧಿತಾಃ ॥ ೧೫೭
ತದೇಹಿ ಮಿಲ ಸೈನ್ಯೇ ಮೇ ಸಹೈತೈಃ ಖೇಚರೇಶ್ವರೈಃ ।
ನಿಹಂತಾಹಂ ವಿರುದ್ಧಾನಾಂ ರಕ್ಷಿತಾ ನಮತಾಂ ಪುನಃ ॥ ೧೫೮
ಯಾಚಾಗಮ್ಯಾ ಹೃತಾಜ್ಞಾತೇ ಸುನೀಥತನಯಾ ತ್ವಯಾ ।
ಕಾಮಚೂಡಾಮಣಿಃ ಕನ್ಯಾ ಮುಂಚ ತಾಮಶುಭಂ ಹಿ ತತ್ ॥ ೧೫೯
ಏವಂ ಮಯೋಕ್ತೇ ಸರ್ವೇ ತೇ ಕ್ರುದ್ಧಾಸ್ತತ್ರೈವಮಭ್ಯಧುಃ ।
ಕೋ ನಾಮ ಸ ಯದಸ್ಮಾಸು ದರ್ಪಾತ್ ಸಂದಿಶತೀದೃಶಮ್ ॥ ೧೬೦
ಮರ್ತ್ಯೇಷು ಸಂದಿಶತ್ವೇವಂ ಕಸ್ತು ವಿದ್ಯಾಧರೇಷು ಸಃ ।
ವರಾಕೋ ಮಾನುಷೋ ಭೂತ್ವಾಪ್ಯೇವಂ ದೃಪ್ಯನ್ ವಿನಂಕ್ಷ್ಯತಿ ॥ ೧೬೧
ತಚ್ಛ್ರುತ್ವೋಕ್ತಂ ಮಯಾ ಕಿಂ ಕಿಂ ಕೋ ನಾಮ ಸ ನಿಶಮ್ಯತಾಮ್ ।
ಸ ಹರೇಣೇಹ ಯುಷ್ಮಾಕಂ ಚಕ್ರವರ್ತೀ ವಿನಿರ್ಮಿತಃ ॥ ೧೬೨

೧೬೩–೧೬೪. ವಿದ್ಯಾಧರರಾದ ನೀವುಗಳು ಮಾನವನಾದ ಅವನ ಪರಾಕ್ರಮ ಎಂತಹುದೆಂಬುದನ್ನು ಕಂಡೇ ಇದ್ದೀರಿ. ಆತನು ಇಲ್ಲಿ ಬಂದದ್ದೇ ಆದರೆ ನಿಮ್ಮ ನಾಶ ನಿಶ್ಚಿತ' ಎಂದು ನಾನು ಹೇಳಿದಾಗ ಇಡೀ ಸಭೆಯೇ ಕ್ರೋಧದಿಂದ ಕುದಿದು ಹೋಯಿತು.

೧೬೫. ನನ್ನನ್ನು ಮುಗಿಸಿಬಿಡಲು ಶ್ರುತಶರ್ಮ ಮತ್ತು ಧುರಂಧರರು ನುಗ್ಗಿ ಬಂದರು. ಆದರೆ ನಾನೂ ಕೂಡ "ಬನ್ನಿ ನಿಮ್ಮ ಶೌರ್ಯವನ್ನು ನೋಡಿಯೇ ಬಿಡುತ್ತೇನೆ' ಎಂದೆ

೧೬೬–೧೬೭. ಆಗ ದಾಮೋದರನು ಎದ್ದು ಅವರಿಬ್ಬರನ್ನೂ ತಡೆದು, "ಶಾಂತಿಯಿರಲಿ; ದೂತನನ್ನೂ ಬ್ರಾಹ್ಮಣನನ್ನೂ ಕೊಲ್ಲಬಾರದು' ಎಂದನು. ಆಗ ವಿಕ್ರಮಶಕ್ತಿಯು "ದೂತನೆ, ನೀನು ಇಲ್ಲಿಂದ ಹೊರಡು, ನಿನ್ನ ಸ್ವಾಮಿಯಂತೆ ನಾವೂ ಈಶ್ವರನಿಂದಲೇ ನಿರ್ಮಿತರಾದವರು.

೧೬೮. ಆದ್ದರಿಂದ ಅವನು ಬರಲಿ. ನಾವೂ ಒಂದು ಕೈ ನೋಡಿಯೇ ಬಿಡುತ್ತೇವೆ. ಅವನಿಗೆ ಆತಿಥ್ಯ ಮಾಡಲು ನಮಗೂ ಗೊತ್ತು' ಎಂದು ಜಂಭದ ಮಾತನ್ನಾಡಿದಾಗ, ನಾನು ನಕ್ಕು ಹೀಗೆಂದೆ.

೧೬೯. "ಆಕಾಶವನ್ನೆಲ್ಲ ಹರಡಿಕೊಂಡ ಮೇಘವನ್ನು ನೋಡುವವರೆಗೆ ಪದ್ಮವನದಲ್ಲಿ ಕುಳಿತ ಹಂಸಗಳು ಇಂಪಾಗಿ ಶಬ್ದಮಾಡುತ್ತವೆ.'

---

ಮರ್ತ್ಯೋ ವಾ ಯದಿ ತನ್ಮರ್ತ್ಯೈರ್ದೇವತ್ವಮಪಿ ಸಾಧಿತಮ್ ।
ವಿದ್ಯಾಧರೈಶ್ಚ ಮರ್ತ್ಯಸ್ಯ ತಸ್ಯ ದೃಷ್ಟಃ ಪರಾಕ್ರಮಃ ॥ ೧೬೩
ನಾಶಶ್ಚೇಹಾಗತೇ ತಸ್ಮಿನ್ ಕದಾಚಿದ್ವೋ ಹಿ ದೃಶ್ಯತೇ ।
ಇತ್ಯೇವೋಕ್ತೇ ಮಯಾ ಕ್ರುದ್ಧಾ ಸಾ ಸಭಾ ಕ್ಷೋಭಮಾಯಯೌ ॥ ೧೬೪
ಅಧಾವತಾಂ ಚ ಹಂತುಂ ಮಾಂ ಶ್ರುತಶರ್ಮಧುರಂಧರೌ ।
ಏವಂ ಪಶ್ಯಾಮಿ ಶೌರ್ಯಂ ವಾಮಿತ್ಯವೋಚಮಹಂ ಚ ತೌ ॥ ೧೬೫
ತತೋ ದಾಮೋದರೇಣೈತಾವುತ್ಥಾಯ ವಿನಿವಾರಿತೌ ।
ಶಾಂತಂ ದೂತಶ್ಚ ವಿಪ್ರಶ್ಚ ನ ವಧ್ಯ ಇತಿ ಜಲ್ಪತಾ ॥ ೧೬೬
ತತೋ ವಿಕ್ರಮಶಕ್ತಿರ್ಮಾಮವಾದೀದ್ಗಚ್ಛ ದೂತ ಭೋಃ ।
ತ್ವತ್ಸ್ವಾಮೀವ ಹಿ ಸರ್ವೇಽಪಿ ವಯಮೀಶ್ವರನಿರ್ಮಿತಾಃ ॥ ೧೬೭
ತದಾಯಾತು ಸ ಪಶ್ಯಾಮಸ್ತಸ್ಯಾತಿಥ್ಯಕ್ಷಮಾ ವಯಮ್ ।
ಏವಂ ಸಗರ್ವಂ ತೇನೋಕ್ತೇ ವಿಹಸನ್ನಹಮಬ್ರವಮ್ ॥ ೧೬೮
ಹಂಸಾಃ ಪದ್ಮವನೇ ತಾವನ್ನಾದಂ ಕುರ್ವಂತಿ ಸುಸ್ಥಿತಾಃ ।
ಯಾವತ್ಪಶ್ಯಂತಿ ನಾಯಾಂತಂ ಮೇಘಮಾಚ್ಛಾದಿತಾಂಬರಮ್ ॥ ೧೬೯

೧೭೦. ಎಂದು ನಾನು ತಿರಸ್ಕಾರದಿಂದ ಎದ್ದು ಇತ್ತ ಹೊರಟೆ. ಪ್ರಹಸ್ತನ ಈ ಮಾತನ್ನು ಕೇಳಿ ಮಯಾದಿಗಳಿಗೆ ಸಂತೋಷ, ಸಮಾಧಾನಗಳುಂಟಾದುವು.

೧೭೧. ಸಮರ ಮಾಡಲೇಬೇಕೆಂಬ ನಿಶ್ಚಯಿಸಿ ಸೂರ್ಯಪ್ರಭಾದಿಗಳೆಲ್ಲ ಸೇರಿ ರಣಾಗ್ರಣಿಯಾದ ಪ್ರಭಾಸನನ್ನು ಸೇನಾಪತಿಯನ್ನಾಗಿಸಿದರು.

೧೭೨. ಎಲ್ಲರೂ ಸುವಾಸಕುಮಾರನಿಂದ ರಣದೀಕ್ಷೆಯ ನಿರ್ದೇಶವನ್ನು ಪಡೆದವರಾಗಿ ಅಂದು ನೇಮ ನಿಷ್ಠೆಗಳನ್ನಾಚರಿಸಿದರು.

೧೭೩. ರಾತ್ರಿಯಲ್ಲಿ ಸೂರ್ಯಪ್ರಭನು ವ್ರತನಿಷ್ಠೆಯಲ್ಲಿ ಮಲಗಿದ್ದನು. ಇನ್ನೂ ನಿದ್ದೆ ಹತ್ತಿರಲಿಲ್ಲ. ಆಗ ಆ ಮನೆಯನ್ನು ಅಪೂರ್ವ ಸುಂದರಿಯೋರ್ವಳು ಪ್ರವೇಶಿಸಿದ್ದನ್ನು ಕಂಡನು.

೧೭೪. ನಿದ್ದೆ ಬಂದಂತೆ ಮಲಗಿದ್ದ ಸೂರ್ಯಪ್ರಭನ ಮತ್ತು ನಿದ್ದೆ ಮಾಡುತ್ತಿದ್ದ ಅವನ ಸಚಿವನ ಬಳಿ ಧೈರ್ಯದಿಂದ ಅವಳು ಬಂದು ನಿಂತು ಜತೆಯಲ್ಲಿದ್ದ ಸಖಿಯನ್ನು ಕುರಿತು ಹೀಗೆಂದಳು.

೧೭೫. ಸಖಿ, ನಿದ್ದೆ ಮಾಡಿದವನ ವಿಶ್ರಾಂತವಿಲಾಸವೇ ಹೀಗಿರುವಾಗ, ಎದ್ದಿರುವಾಗ ಈತನ ರೂಪಶೋಭೆ ಹೇಗಿದ್ದೀತು ?

---

ಇತ್ಯುಕ್ತ್ವೋತ್ಥಾಯ ಸಾವಜ್ಞಂ ನಿರ್ಗತ್ಯಾಹಮಿಹಾಗತಃ ।
ಏತತ್ ಪ್ರಹಸ್ತಾತ್ ಶ್ರುತ್ವಾ ತೈಸ್ತುಷ್ಟಿಃ ಪ್ರಾಪಿ ಮಯಾದಿಭಿಃ ॥ ೧೭೦
ನಿಶ್ಚಿತ್ಯ ಚಾಹವೋದ್ಯೋಗಂ ಸರ್ವೇ ಸೇನಾಪತಿಂ ವ್ಯಧುಃ ।
ಪ್ರಭಾಸಮಥ ತೇ ಸೂರ್ಯಪ್ರಭಾದ್ಯಾ ರಣದುರ್ಮದಮ್ ॥ ೧೭೧
ಸರ್ವೇ ಚ ರಣದೀಕ್ಷಾಯಾಂ ತೇ ಸುವಾಸಕುಮಾರತಃ ।
ನಿದೇಶಂ ಪ್ರಾಪ್ಯ ತದಹಃ ಪ್ರಾವಿಶನ್ನಿಯತವ್ರತಾಃ ॥ ೧೭೨
ರಾತ್ರೌ ಸೂರ್ಯಪ್ರಭಶ್ಚಾತ್ರ ವ್ರತಶಯ್ಯಾಗೃಹಾಂತರಮ್ ।
ಪ್ರವಿಷ್ಟಾಮೈಕ್ಷತಾಪೂರ್ವಾಮನಿದ್ರೋ ವರಕನ್ಯಕಾಮ್ ॥ ೧೭೩
ಸಾ ತಸ್ಯ ವ್ಯಾಜಸುಪ್ತಸ್ಯ ಪ್ರಸುಪ್ತಸಚಿವಸ್ಯ ಚ ।
ಸ್ವೈರಂ ನಿಕಟಮಾಗತ್ಯ ಸಖೀಮಾಹ ಸಹಸ್ಥಿತಾಮ್ ॥ ೧೭೪
ಯದಿ ಸುಪ್ತಸ್ಯ ವಿಶ್ರಾಂತವಿಲಾಸಾಪೀಯಮೀದೃಶೀ ।
ರೂಪಶೋಭಾಸ್ಯ ತತ್‌ಕೀದೃಕ್ ಪ್ರಬುದ್ಧಸ್ಯ ಭವೇತ್‌ಸಖಿ ॥ ೧೭೫

೧೭೬. ಹೇಗಾದರೂ ಇರಲಿ. ಇವನನ್ನು ಎಚ್ಚರಗೊಳಿಸುವುದು ಬೇಡ. ನನ್ನ ಕಣ್ಣುಗಳ ಕೌತುಕ ತೀರಿತು. ಈತನನ್ನು ಕುರಿತು ಮನಸ್ಸಿಗೆ ಹಚ್ಚಿಕೊಳ್ಳುವುದರಿಂದ ನನಗೇನಾಗಬೇಕು ?

೧೭೭. ಶ್ರುತಶರ್ಮನೊಡನೆ ಇವನಿಗೆ ಕಾಳಗ ನಡೆಯಲಿದೆ. ಆಗ ಯಾರಿಗೆ ಏನಾಗುತ್ತದೆಂದು ಹೇಳುವವರಾರು ?

೧೭೮. ಶೂರರ ಪ್ರಾಣಹರಣಕ್ಕಾಗಿಯೇ ಯುದ್ಧಗಳು ನಡೆಯುತ್ತವೆ. ಇವನಿಗೆ ಮಂಗಳವಾಗಲಿ ಎಂದುಕೊಳ್ಳೋಣ. ಮುಂದಿನದು ಆಮೇಲೆ ತಿಳಿಯುತ್ತದಷ್ಟೆ

೧೭೯. ವ್ಯೋಮಚಾರಿಯಾದ ಇವನು ಕಾಮಚೂಡಾಮಣಿಯನ್ನೇ ಕಂಡಿರುವನೆಂದ ಮೇಲೆ ನನ್ನಂಥವಳು ಇವನ ಮನವನ್ನು ರಂಜಿಸಲು ಸಾಧ್ಯವೇ ?

೧೮೦. ಹೀಗೆ ಹೇಳಿದಾಗ ಅವಳನ್ನು ಕುರಿತು ಸಖಿಯು,–"ಏನು ಹೇಳುತ್ತಿದ್ದೀಯೆ ? ಚಂಡಿ, ನಿನ್ನ ಹೃದಯವು ಇವನಲ್ಲಿ ನಾಟಿಲ್ಲವೆ ?

೧೮೧. ಇವನನ್ನು ಕಂಡ ಕ್ಷಣದಿಂದ ಕಾಮಚೂಡಾಮಣಿಯ ಹೃದಯವೇ ಇವನ ವಶವಾಗಿದೆ. ಅಂದಮೇಲೆ ಮತ್ತಾವಳ ಮನವನ್ನು ತಾನೆ ಇವನು ಕದಿಯಲಾರ ? ಅವಳು ಸಾಕ್ಷಾತ್ ಅರುಂಧತಿಯಾದರೂ ಸರಿಯೇ.

---

ತದಸ್ತು ನ ಪ್ರಬೋಧ್ಯೋಽಸೌ ಪೂರಿತಂ ಕೌತುಕಂ ದೃಶೋಃ ।
ಅಧಿಕಂ ಹಿ ನಿಬದ್ಧೇನ ಕಿಮತ್ರ ಹೃದಯೇನ ಮೇ ॥ ೧೭೬
ಭವಿಷ್ಯತ್ಯಸ್ಯ ಸಂಗ್ರಾಮಃ ಸಮಂ ಹಿ ಶ್ರುತಶರ್ಮಣಾ ।
ತತ್ತತ್ರ ಕೋ ವಿಜಾನಾತಿ ಭವಿತಾ ಕಿಲ ಕಸ್ಯ ಕಿಮ್ ॥ ೧೭೭
ಪ್ರಾಣವ್ಯಯಾಯ ಶೂರಾಣಾಂ ಜಾಯತೇ ಹಿ ರಣೋತ್ಸವಃ ।
ತತ್ರಾಸ್ಯಾಸ್ತು ಶಿವಂ ತಾವತ್ತತೋ ಜ್ಞಾಸ್ಯಾಮಹೇ ಪುನಃ ॥ ೧೭೮
ಕಾಮಚೂಡಾಮಣಿರ್ಯೇನ ಕಿಂ ಚ ವ್ಯೋಮವಿಹಾರಿಣಾ ।
ದೃಷ್ಟಾ ತಸ್ಯಾಥ ಹೃದಯಂ ಮಾದೃಶೀ ಕಾನುರಂಜಯೇತ್ ॥ ೧೭೯
ಏವಂ ತಯೋಕ್ತೇ ಸಾವಾದೀತ್ತತ್ಸಖೀ ಕಿಂ ಬ್ರವೀಷ್ಯದಃ ।
ಅಸಂಗೋ ಹೃದಯಸ್ಯಾಸ್ಮಿನ್ನಾಯತ್ತಶ್ಚಂಡಿ ಕಿಂ ತವ ॥ ೧೮೦
ಯೇನ ದೃಷ್ಟೇನ ಹೃದಯಂ ಕಾಮಚೂಡಾಮಣೇರ್ಹೃತಮ್ ।
ಸೋಽನ್ಯಸ್ಯಾ ನ ಹರೇತ್ ಕನ್ಯಾ ಯದಿ ಸಾಕ್ಷಾದರುಂಧತೀ ॥ ೧೮೧

೧೮೨. ವಿದ್ಯಾಬಲದಿಂದ ಕೂಡಿರುವ ಇವನಿಗೆ ಕಾಳಗದಲ್ಲಿ ಮಂಗಳವಾಗುವುದನ್ನು ಕಾಣೆಯಾ ? ಚಕ್ರವರ್ತಿಯಾದ ಈತನ ಭಾರ್ಯೆಯರು ಯಾರಾಗುತ್ತಾರೆಂಬುದನ್ನೂ ಸಿದ್ಧರು ಈಗಾಗಲೇ ಹೇಳಿದ್ದಾರೆ.

೧೮೩. ಕಾಮಚೂಡಾಮಣಿ, ನೀವು ಮತ್ತು ಸುಪ್ರಭೆಯರು ಒಂದೇ ಗೋತ್ರದವರಾಗಿದ್ದೀರಿ. ಈಗಾಗಲೆ ಸುಪ್ರಭೆಯೊಡನೆ ಈತನ ವಿವಾಹ ಆಗಿದೆ.

೧೮೪. ಈತನಿಗೆ ಯುದ್ಧದಲ್ಲಿ ಅಮಂಗಳವೆಲ್ಲಿಯದು ? ಸಿದ್ಧರ ಮಾತು ಸುಳ್ಳಾಗುವುದಿಲ್ಲ. ಸುಪ್ರಭೆಯು ಈತನ ಮನವನ್ನು ಗೆದ್ದಿದ್ದರೆ ತಾನೆ ಏನು ?

೧೮೫. ನೀನು ಗೆಲ್ಲಲಾರೆಯಾ ? ಅನಘೆ, ನೀನೆ ಅವಳಿಗಿಂತ ಅಧಿಕ ರೂಪವತಿ. ಬಂಧುಗಳು ಏನಾದರೂ ಹೇಳಿಯಾರೆಂದು ಸಂಶಯ ನಿನ್ನ ಮನದಲ್ಲಿದ್ದರೆ ಅದೂ ಸರಿಯಲ್ಲ.

೧೮೬. ಸತಿಯರಿಗೆ ಪತಿಯನ್ನು ಬಿಟ್ಟು ಬೇರೆ ಬಾಂಧವರೇ ಇಲ್ಲ ಎಂಬ ಸಖಿಯ ಮಾತನ್ನು ಕೇಳಿ ಆ ಅಪೂರ್ವಸುಂದರಿಯಾದ ಕನ್ನಿಕೆ ಮತ್ತೆ ಹೇಳಿದಳು.

೧೮೭. "ಗೆಳತಿ, ನೀನು ಹೇಳುವುದು ನಿಜ. ಅನ್ಯಬಾಂಧವರಿಂದ ನನಗೇನಾಗಬೇಕಾಗಿದೆ ? ನನ್ನ ವಿದ್ಯೆಯಿಂದ ಈ ನನ್ನ ಪತಿಗೆ ಜಯವಾಗುವುದನ್ನು ತಿಳಿದಿದ್ದೇನೆ.

೧೮೮. ಈತನಿಗೆ ರತ್ನಗಳು ಸಿದ್ಧಿಸಿವೆ. ವಿದ್ಯೆಗಳು ವಶವಾಗಿವೆ. ಆದರೇನು ? ಇವನಿಗೆ ಓಷಧಿಗಳು ಇನ್ನೂ ಲಭಿಸಿಲ್ಲ. ಅದಕ್ಕಾಗಿ ನನ್ನ ಮನಸ್ಸು ಹೊಯ್ದಾಡುತ್ತಿದೆ.

---

ವಿದ್ಯಾವಶಾಚ್ಚ ಕಲ್ಯಾಣಂ ವೇತ್ಸಿ ಕಿಂ ನಾಸ್ಯ ಸಂಗರೇ ।
ಏತಸ್ಯ ಭಾರ್ಯಾಶ್ಚೋಕ್ತಾಃ ಸ್ಥ ಸಿದ್ಧೈಃ ಸಚ್ಚಕ್ರವರ್ತಿನಃ ॥ ೧೮೨
ಕಾಮಚೂಡಾಮಣಿಸ್ತ್ವಂ ಚ ಸುಪ್ರಭಾ ಚೈಕಗೋತ್ರಜಾ ।
ಏಷ್ವೇವ ಪರಿಣೀತಾ ಚ ದಿನೇಷ್ವೇತೇನ ಸುಪ್ರಭಾ ॥ ೧೮೩
ತತ್ಕಿಮಸ್ಯಾಶಿವಂ ಯುದ್ಧೇ ನ ಹಿ ಸಿದ್ಧವಚೋ ಮೃಷಾ ।
ಕಿಂ ಚಾಹೃತಂ ಸುಪ್ರಭಯಾ ಚಿತ್ತಂ ಯಸ್ಯಾಸ್ಯ ತಸ್ಯ ಕಿಮ್ ॥ ೧೮೪
ನಾಹರೇದ್ಭವತೀ ತ್ವಂ ಹಿ ರೂಪೇಣಾಭ್ಯಧಿಕಾನಘೇ ।
ಬಾಂಧವಾಪೇಕ್ಷಯಾ ವಾ ತೇ ವಿಕಲ್ಪೋ ಯದಿ ತನ್ನ ಸತ್ ॥ ೧೮೫
ಭರ್ತಾರಂ ಹಿ ವಿನಾ ನಾನ್ಯಃ ಸತೀನಾಮಸ್ತಿ ಬಾಂಧವಃ ।
ಏತತ್ ಸಖೀವಚಃ ಶ್ರುತ್ವಾ ಸಾವೋಚದ್ವರಕನ್ಯಕಾ ॥ ೧೮೬
ಸತ್ಯಂ ಸಖಿ ತ್ವಯಾ ಪ್ರೋಕ್ತಂ ನ ಕಾರ್ಯಂ ಮೇಽನ್ಯಬಂಧುಭಿಃ ।
ಸಂಖ್ಯೇ ಚಾಸ್ಯಾರ್ಯಪುತ್ರಸ್ಯ ಜಯಂ ಜಾನೇ ಸ್ವವಿದ್ಯಯಾ ॥ ೧೮೭
ಸಿದ್ಧಾನಿ ಚಾಸ್ಯ ರತ್ನಾನಿ ವಿದ್ಯಾಶ್ಚಾದ್ಯಾಪಿ ಕಿಂ ಪುನಃ ।
ನೈತಸ್ಯೌಷಧಯಃ ಸಿದ್ಧಾಸ್ತೇನ ಮೇ ದೂಯತೇ ಮನಃ ॥ ೧೮೮

೧೯. ಚಂದ್ರ ಪಾದಗಿರಿಯ ಗುಹೆಯಲ್ಲಿ ಎಲ್ಲ ಔಷಧಿಗಳೂ ಇವೆ. ಅವು ಪುಣ್ಯಶಾಲಿಗಳಿಗೂ ಚಕ್ರವರ್ತಿಯಾಗುವವರಿಗೂ ಮಾತ್ರ ಒಲಿಯುತ್ತವೆ.

೯೦. ಈತನು ಇಂದೇ ಹೋಗಿ ಅವುಗಳನ್ನು ಸಾಧಿಸಿದ್ದೇ ಆದರೆ ಈತನಿಗೆ ಒಳ್ಳೆಯದಾಗುತ್ತದೆ. ಏಕೆಂದರೆ ಬೆಳಗಾದರೆ ಮಹಾಯುದ್ಧ ನಡೆಯಲಿದೆ.

೯೧. ಇದನ್ನೆಲ್ಲ ಕೇಳಿದ ಸೂರ್ಯಪ್ರಭನು ನಿದ್ರೆಯ ಸೋಗನ್ನು ಕಳಚಿ ಎದ್ದು ನಿಂತನು. ವಿನಯದಿಂದಲೇ ಆ ಕನ್ನಿಕೆಯನ್ನು ಮಾತನಾಡಿಸಿದನು.

೯೨. "ಮುಗ್ಧಾಕ್ಷಿ, ನನ್ನ ವಿಚಾರದಲ್ಲಿ ತುಂಬ ಪಕ್ಷಪಾತವನ್ನೇ ತೋರಿರುವೆ. ಈಗಲೇ ನೀನು ಹೇಳಿದ ಜಾಗಕ್ಕೆ ಹೋಗುವೆ. ಮೊದಲು ನೀನು ಯಾರೆಂದು ಹೇಳು'

೯೩. ಈ ಮಾತನ್ನು ಕೇಳಿ ಇವನು ಕೇಳಬೇಕಾದ್ದನ್ನೆಲ್ಲ ಕೇಳಿಸಿಕೊಂಡಾಯಿತೆಂದುಕೊಂಡ ಅವಳು ನಾಚಿಕೆಯಿಂದ ತಲೆ ತಗ್ಗಿಸಿ ಸುಮ್ಮನೆ ನಿಂತಳು. ಆಗ ಅವಳ ಸಖಿಯು ಹೇಳಿದಳು.

೯೪. "ಇವಳು ವಿದ್ಯಾಧರೇಂದ್ರನಾದ ಸುಮೇರುವಿನ ತಮ್ಮನ ಮಗಳು. ಹೆಸರು ವಿಲಾಸಿನಿ. ಮದುವೆಯಾಗಿಲ್ಲ. ನಿನ್ನನ್ನು ನೋಡುವ ಕುತೂಹಲ ಇವಳಿಗೆ.'

೯೫. ಇಷ್ಟು ಹೇಳಿದ ಸಖಿಯನ್ನು "ಇನ್ನು ಸಾಕು, ಬಾ ನಾವೀಗ ಹೋಗೋಣ' ಎಂದು ಹೇಳಿ ವಿಲಾಸಿನಿಯು ಅವಳೊಡನೆ ಹೊರಟೇಬಿಟ್ಟಳು.

---

ಚಂದ್ರಪಾದಗಿರೌ ತಾಶ್ಚ ಸರ್ವಾಃ ಸಂತಿ ಗುಹಾಂತರೇ ।
ಸಿಧ್ಯಂತಿ ಪುಣ್ಯಭಾಜಶ್ಚ ಚಕ್ರವರ್ತಿನ ಏವ ತಾಃ ॥ ೧೯
ತದೇಷ ಸಾಧಯೇದ್ಗತ್ವಾ ತತ್ರ ಸರ್ವೌಷಧೀರ್ಯದಿ ।
ಭದ್ರಂ ತತ್ಸ್ಯಾದ್ಯದಾಸನ್ನಃ ಪ್ರಾತರಸ್ಯ ಮಹಾಹವಃ ॥ ೯೦
ಏತಚ್ಛ್ರುತ್ವಾಖಿಲಂ ತ್ಯಕ್ತ್ವಾ ವ್ಯಾಜನಿದ್ರಾಂ ಸ ಉತ್ಥಿತಃ ।
ಸೂರ್ಯಪ್ರಭಃ ಸವಿನಯಂ ತಾಮುವಾಚಾತ್ರ ಕನ್ಯಕಾಂ ॥ ೯೧
ದರ್ಶಿತೋಽತೀವ ಮುಗ್ಧಾಕ್ಷಿ ಪಕ್ಷಪಾತೋ ಮಯಿ ತ್ವಯಾ ।
ತದೇಷ ತತ್ರ ಗಚ್ಛಾಮಿ ಕಾಸಿ ತ್ವಮಿತಿ ಶಂಸ ಮೇ ॥ ೯೨
ಏತತ್ಶ್ರುತ್ವಾ ಶ್ರುತಂ ಸರ್ವಮನೇನೇತಿ ತ್ರಪಾನತಾ ।
ತೂಷ್ಣೀಂ ಬಭೂವ ಸಾ ಕನ್ಯಾ ತತ್ಸಖೀ ತು ಜಗಾದ ಸಾ ॥ ೯೩
ಏಷಾ ವಿದ್ಯಾಧರೇಂದ್ರಸ್ಯ ಸುಮೇರೋರನುಜಾತ್ಮಜಾ ।
ಕನ್ಯಾ ವಿಲಾಸಿನೀ ನಾಮ ತ್ವದ್ದರ್ಶನಸಕೌತುಕಾ ॥ ೯೪
ಏವಮುಕ್ತವತೀಮೇವ ತಾಂ ಸಖೀಂ ಸಾ ವಿಲಾಸಿನೀ ।
ಏಹಿ ಸಂಪ್ರತಿ ಗಚ್ಛಾವ ಇತ್ಯುಕ್ತ್ವಾ ಪ್ರಯಯೌ ತತಃ ॥ ೯೫

೧೯೬. ನಂತರ ಸೂರ್ಯಪ್ರಭನು ಪ್ರಭಾಸಾದಿ ತನ್ನ ಮಂತ್ರಿಗಳೆಲ್ಲರನ್ನೂ ಎಚ್ಚರಿಸಿ ಅವಳು ಹೇಳಿದ್ದನ್ನೆಲ್ಲ ಅವರಿಗೆ ತಿಳಿಸಿ ಓಷಧೀಸಾಧನೆ ಮಾಡಬೇಕಾದ್ದನ್ನೂ ಹೇಳಿದನು.

೧೯೭. ಪ್ರಹಸ್ತನೇ ಆ ಕೆಲಸಕ್ಕೆ ಯೋಗ್ಯನೆಂದು ಭಾವಿಸಿ ಈ ವಿಚಾರವನ್ನು ತಿಳಿಸಲು ಸುನೀಥ, ಸುಮೇರು ಮತ್ತು ಮಯಾಸುರರ ಬಳಿಗೆ ಅವನನ್ನು ಕಳಿಸಿದನು.

೧೯೮. ಅದನ್ನು ಕೇಳಿ ಶ್ರದ್ಧಾಳುಗಳಾದ ಅವರೆಲ್ಲ ಅಲ್ಲಿಗೆ ಬರಲು ಸಚಿವರಿಂದ ಕೂಡಿದವನಾಗಿ ಅಂದು ರಾತ್ರಿಯೇ ಔಷಧಿಗಳನ್ನು ಸಿದ್ಧಿಸಿಕೊಳ್ಳಲು ಚಂದ್ರಪಾದ ಬೆಟ್ಟಕ್ಕೆ ಹೋದನು.

೧೯೯. ಅವರು ಹೋಗುತ್ತಿದ್ದ ದಾರಿಯಲ್ಲಿ ಯಕ್ಷರು, ಗುಹ್ಯಕರು, ಕೂಷ್ಮಾಂಡರು ನಾನಾ ವಿಧವಾದ ಆಯುಧಗಳನ್ನು ಹಿಡಿದು ಒಬ್ಬರಾದ ಮೇಲೊಬ್ಬರು ಅಡ್ಡಗಟ್ಟಿದರು.

೨೦೦. ಕೆಲವರನ್ನು ಅಸ್ತ್ರಗಳಿಂದ ಮೋಹಗೊಳಿಸಿ, ಮತ್ತೆ ಕೆಲವರನ್ನು ವಿದ್ಯೆಗಳಿಂದ ಸ್ತಂಭನಗೊಳಿಸಿ ಸೂರ್ಯ ಪ್ರಭಾದಿಗಳು (ವಿಘ್ನಗಳನ್ನು ನಿವಾರಿಸಿಕೊಂಡು) ಅಂತೂ ಚಂದ್ರಪಾದ ಪರ್ವತವನ್ನು ತಲುಪಿದರು.

೨೦೧. ಅಲ್ಲಿ ಗುಹೆಯ ದ್ವಾರಕ್ಕೆ ಬಂದಾಗ, ವಿಚಿತ್ರವೂ, ವಿಕೃತವೂ ಆದ ಮುಖಗಳಿಂದ ಕೂಡಿದ ಶಾಂಕರ ಗಣಗಳು ಅವರನ್ನು ತಡೆದವು.

೨೦೨. "ಇವರೊಡನೆ ಯುದ್ಧಬೇಡ. ಭಗವಾನ್ ಶಂಕರನು ಕೋಪಿಸಿಕೊಳ್ಳಬಹುದು. ಆದ್ದರಿಂದ ಎಂಟುಸಾವಿರ ನಾಮಗಳಿಂದ ಆ ವರಪ್ರದಾಯಕನನ್ನೇ ಸ್ತುತಿಸೋಣ.

---

ತತಃ ಪ್ರಭಾಸಾದಿಭ್ಯಸ್ತ ತ್ ಪ್ರಬೋಧ್ಯ ತದುದೀರಿತಮ್ ।
ಸೂರ್ಯಪ್ರಭಂ ಸ್ವಮಂತ್ರಿಭ್ಯಃ ಶಶಂಸೌಷಧಿಸಾಧನಮ್ ॥ ೧೯೬
ವಿಸಸರ್ಜ ಪ್ರಹಸ್ತಂ ಚ ಯೋಗ್ಯಂ ತತ್ ಸಾಧನಾಯ ಸಃ ।
ತದಾಖ್ಯಾತುಂ ಸುನೀಥಸ್ಯ ಸುಮೇರೋಶ್ಚ ಮಯಸ್ಯ ಚ ॥ ೧೯೭
ತೈರಾಗತೈಃ ಶ್ರದ್ಧಧಾನೈಃ ಸಮಂ ಸ ಸಚಿವಾನ್ವಿತಃ ।
ನಿಶಿ ಸೂರ್ಯಪ್ರಭಃ ಪ್ರಾಯಾಚ್ಚಂದ್ರಪಾದಾಚಲಂ ಪ್ರತಿ ॥ ೧೯೮
ಗಚ್ಛತಾಂ ಚ ಕ್ರಮಾತ್ತೇಷಾಮುತ್ತಸ್ಥುರ್ಮಾರ್ಗರೋಧಿನಃ ।
ಯಕ್ಷಗುಹ್ಯಕಕೂಷ್ಮಾಂಡಾ ವಿಘ್ನಾ ನಾನಾಯುಧೋದ್ಯತಾಃ ॥ ೧೯೯
ಕಾಂಶ್ಚಿದಸ್ತ್ರೈರ್ವಿಮೋಹ್ಯೈ ತಾನ್ ಕಾಂಶ್ಚಿತ್ ಸಂಸ್ತಭ್ಯ ವಿದ್ಯಯಾ ।
ಚಂದ್ರಪಾದಗಿರಿಂ ತಂ ತೇ ಪ್ರಾಪುಃ ಸೂರ್ಯಪ್ರಭಾದಯಃ ॥ ೨೦೦
ತತ್ರೈಷಾಂ ತದ್ಗುಹಾದ್ವಾರಪ್ರಾಪ್ತಾನಾಂ ಶಾಂಕರಾ ಗಣಾಃ ।
ಏತ್ಯ ಪ್ರವೇಶಂ ರುರುಧುರ್ವಿಚಿತ್ರವಿಕೃತಾನನಾಃ ॥ ೨೦೧
ಏತೈಃ ಸಹ ನ ಯೋದ್ಧವ್ಯಂ ಕುಪ್ಯೇದ್ಧಿ ಭಗವಾನ್‌ಹರಃ ।
ತನ್ನಾಮಾಷ್ಟಸಹಸ್ರೇಣ ತಮೇವ ವರದಂ ಸ್ತುಮಃ ॥ ೨೦೨

೨೦೩. ಅದರಿಂದಲೇ ಆತನ ಗಣಗಳು ಪ್ರಸನ್ನರಾಗುತ್ತಾರೆ' ಎಂದು ಸುವಾಸಕುಮಾರನು ಸೂರ್ಯಪ್ರಭಾದಿಗಳಿಗೆ ಹೇಳಿದನು.

೨೦೪. ಆಗಲೆಂದು ಒಪ್ಪಿದ ಅವರೆಲ್ಲರೂ ಹರನನ್ನು ಭಜಿಸಿದರು. ತಮ್ಮ ಸ್ವಾಮಿಯ ಸ್ತುತಿಯಿಂದ ಪ್ರಸನ್ನರಾದ ಆ ಗಣಗಳು ಅವರಿಗೆ ಹೀಗೆಂದರು.

೨೦೫. "ಈ ಗುಹೆಯನ್ನು ನಿಮ್ಮ ಪ್ರವೇಶಕ್ಕಾಗಿ ತೆರೆದಿಡುತ್ತೇವೆ. ನೀವುಗಳು ಇದರಲ್ಲಿನ ಮಹೌಷಧಿಗಳನ್ನು ಪಡೆದುಕೊಳ್ಳಬಹುದು. ಆದರೆ, ಸೂರ್ಯಪ್ರಭನು ಮಾತ್ರ ಒಳಗೆ ಹೋಗಕೂಡದು.

೨೦೬. ಪ್ರಭಾಸನು ಪ್ರವೇಶಿಸಲಿ. ಅವನಿಗೆ ಇದರೊಳಗೆ ಹೋಗುವುದು ಸುಲಭ' ಎಂದು ಗಣಗಳು ಹೇಳಿದಾಗ ಎಲ್ಲರೂ ಅವುಗಳ ಮಾತನ್ನು ಒಪ್ಪಿದರು.

೨೦೭. ನಂತರ ಪ್ರಭಾಸನು ಒಳಗೆ ಹೋದನು. ಅಲ್ಲಿ ದಟ್ಟಕತ್ತಲೆಯಿದ್ದರೂ ಎಂಥದೋ ಒಂದು ಸುಪ್ರಕಾಶವುಂಟಾಯಿತು.

೨೦೮. ಆಗ ಮಹಾಘೋರರೂಪಿಗಳಾದ ನಾಲ್ಕು ಜನ ರಾಕ್ಷಸ ಸೇವಕರು ಕಾಣಿಸಿಕೊಂಡು ನಮಸ್ಕರಿಸಿ "ಒಳಗೆ ಬನ್ನಿ' ಎಂದು ಕರೆದರು.

೨೦೯. ನಂತರ ಅವನು ಒಳ ಹೊಕ್ಕು ಏಳು ದಿವ್ಯವಾದ ಔಷಧಿಗಳನ್ನು ತೆಗೆದುಕೊಂಡು ಹೊರಬಂದು ಎಲ್ಲವನ್ನೂ ಸೂರ್ಯಪ್ರಭನಿಗೆ ಕೊಟ್ಟನು.

---

ತೇನೈವ ತೇ ಪ್ರಸೀದಂತಿ ತದ್ಗಣಾ ಇತ್ಯವೋಚತ ।
ಸ ಸುವಾಸಕುಮಾರಸ್ತಾನಥ ಸೂರ್ಯಪ್ರಭಾದಿಕಾನ್ ॥ ೨೦೩
ತತಸ್ತಥೇತಿ ಸರ್ವೇ ತೇ ತಥೈವ ಹರಮಸ್ತುವನ್ ।
ಸ್ವಾಮಿಸ್ತುತಿಪ್ರಸನ್ನಾಶ್ಚ ತಾನ್‌ವದಂತಿ ಸ್ಮ ತೇ ಗಣಾಃ ॥ ೨೦೪
ಮುಕ್ತೇಯಂ ವೋ ಗುಹಾಸ್ಮಾಭಿಃ ಗೃಹ್ಣೀತಾಸ್ಯಾಂ ಮಹೌಷಧೀಃ ।
ಸೂರ್ಯಪ್ರಭೇಣ ತ್ವೇತಸ್ಯಾಂ ನಪ್ರವೇಷ್ಟವ್ಯಮಾತ್ಮನಾ ॥ ೨೦೫
ಪ್ರಭಾಸಃ ಪ್ರವಿಶತ್ವೇತಾಮೇತಸ್ಯ ಸುಗಮಾ ಹ್ಯಸೌ ।
ಏತದ್ಗಣವಚಃ ಸರ್ವೇ ತೇ ತಥೇತ್ಯನುಮೇನಿರೇ ॥ ೨೦೬
ತತಃ ಪ್ರವಿಶತಸ್ತಸ್ಯ ಪ್ರಭಾಸಸ್ಯ ತದೈವ ಸಾ ।
ಗುಹಾ ಬದ್ಧಾಂಧಕಾರಾಪಿ ಸುಪ್ರಕಾಶಾ ಕಿಮಪ್ಯಭೂತ್ ॥ ೨೦೭
ಉತ್ಥಾಯ ಚ ಮಹಾಘೋರರೂಪಾ ಅಪ್ಯತ್ರ ರಾಕ್ಷಸಾಃ ।
ಚತ್ವಾರಃ ಕಿಂಕರಾ ಊಚುಃ ಪ್ರಣತಾಃ ಪ್ರವಿಶೇತಿ ತಮ್ ॥ ೨೦೮
ಅಥ ಪ್ರವಿಶ್ಯ ಸಂಗೃಹ್ಯ ದಿವ್ಯಾಃ ಸಪ್ತೌಷಧೀಃ ಸ ತಾಃ ।
ಪ್ರಭಾಸೋ ನಿರ್ಗತಃ ಸೂರ್ಯಪ್ರಭಾಯ ನಿಖಿಲಾ ದದೌ ॥ ೨೦೯

೨೧೦. ಆಗ, "ಸೂರ್ಯಪ್ರಭ, ಮಹಾಪ್ರಭಾವಶಾಲಿಗಳಾದ ಏಳು ಔಷಧಿಗಳು ನಿನಗಿಂದು ಸಿದ್ಧಿಸಿವೆ' ಎಂಬ ಆಕಾಶವಾಣಿಯು ಮೊಳಗಿತು.

೨೧೧. ಅದನ್ನು ಕೇಳಿ ಸಂತೋಷದಿಂದ ಕೂಡಿದ ಸೂರ್ಯಪ್ರಭಾದಿಗಳೆಲ್ಲರೂ ಬೇಗನೆ ಸುಮೇರುವಿನ ಆಶ್ರಮಕ್ಕೆ ಬಂದು ತಮ್ಮ ಸೈನ್ಯವನ್ನು ಸೇರಿಕೊಂಡರು.

೨೧೨-೨೧೩. ಅಲ್ಲಿ ಸುನೀಥನು ಸುವಾಸ ಕುಮಾರನನ್ನು ಕೇಳಿದನು. "ಮುನಿಯೆ, ಸೂರ್ಯ ಪ್ರಭನನ್ನು ಬಿಟ್ಟು ಪ್ರಭಾಸನನ್ನೇಕೆ ಕಳಿಸಿದಿರಿ ? ಗುಹೆಯಲ್ಲಿ ರಾಕ್ಷಸಗಣಗಳೂ ಇವನನ್ನು ಸತ್ಕರಿಸಿದ ಕಾರಣವೇನು ?' ಆಗ ಮುನಿಯು ಎಲ್ಲರಿಗೂ ಹೀಗೆ ಹೇಳಿದನು.

೨೧೪. "ನಾನು ಹೇಳುವ ಮಾತನ್ನು ಕೇಳಿ. ಪ್ರಭಾಸನು ಪರಮಹಿತಕಾರಿ. ಸೂರ್ಯಪ್ರಭನ ಆತ್ಮದಂತಿರುವವನು. ಇವರಿಬ್ಬರಿಗೂ ಯಾವ ಭೇದವೂ ಇಲ್ಲ.

೨೧೫. ಅಲ್ಲದೆ ಪ್ರಭಾಸನಿಗೆ ಸಮನಾದ ಶೌರ್ಯವುಳ್ಳವನೂ ಪ್ರಭಾವಶಾಲಿಯೂ ಮತ್ತೋರ್ವನಿಲ್ಲ. ಹೇಳಬೇಕೆಂದರೆ ಪೂರ್ವಜನ್ಮ ಸಂಸ್ಕಾರದಿಂದ ಈ ಗುಹೆ ಪ್ರಭಾಸನಿಗೆ ಸೇರಿದೆ.

೨೧೬. ಇವನು ಯಾರು, ಹಿಂದೆ ಹೇಗಿದ್ದ ಎಂಬುದನ್ನು ಹೇಳುತ್ತೇನೆ ಕೇಳಿ. ಬಹಳ ಹಿಂದೆ ನಮುಚಿಯೆಂಬ ದಾನವ ಶ್ರೇಷ್ಠನಿದ್ದನು.

---

ಮಹಾಪ್ರಭಾವಾಃ ಸಪ್ತೈತಾಃ ಸಿದ್ಧಾಃ ಸೂರ್ಯಪ್ರಭಾದ್ಯ ತೇ ।
ಓಷಧ್ಯ ಇತಿ ತತ್ಕಾಲಂ ಗಗನಾದುದಗಾದ್ವಚಃ ॥ ೨೧೦
ತಚ್ಛ್ರುತ್ವಾ ಮುದಿತಾಃ ಸೂರ್ಯಪ್ರಭಾದ್ಯಾಃ ಸರ್ವ ಏವ ತೇ ।
ಸ್ವಸೈನ್ಯಮಾಯಯುಃ ಕ್ಷಿಪ್ರಂ ಸುಮೇರ್ವಾಸ್ಪದಮಾಶ್ರಿತಮ್ ॥ ೨೧೧
ತತ್ರಾಪೃಚ್ಛತ್ ಸುನೀಥೋಥ ತಂ ಸುವಾಸಕುಮಾರಕಮ್ ।
ಮುನೇ ಸೂರ್ಯಪ್ರಭಂ ಹಿತ್ವಾ ಪ್ರಭಾಸಃ ಕಿಂ ಪ್ರವೇಶಿತಃ ॥ ೨೧೨
ಗಣೈರ್ಗುಹಾಯಾಂ ಕಿಂ ಚೈಷ ಕಿಂಕರೈರಪಿ ಸತ್ಕೃತಃ ।
ಏತಚ್ಛ್ರುತ್ವಾ ಸ ಸರ್ವೇಷು ಶೃಣ್ವತ್ಸು ಮುನಿರಭ್ಯಧಾತ್ ॥ ೨೧೩
ಶ್ರೂಯ ತಾಂ ಕಥಯಾಮ್ಯೇತತ್ ಪ್ರಭಾಸೋ ಹಿತಕೃತ್ ಪರಮ್ ।
ಸೂರ್ಯಪ್ರಭಸ್ಯಾತ್ಮಭೂತೋ ನ ಭೇದೋಽಸ್ತ್ಯನಯೋರ್ದ್ವಯೋಃ ॥ ೨೧೪
ಕಿಂ ಚ ಪ್ರಭಾಸೇನ ಸಮೋ ನಾನ್ಯಃ ಶೌರ್ಯಪ್ರಭಾವವಿತ್ ।
ಅಸ್ತಿ ಪ್ರಾಗ್ಜನ್ಮಸುಕೃತೈರೇತದೀಯಾ ಚ ಸಾ ಗುಹಾ ॥ ೨೧೫
ಯೋಽಯಂ ಯಾದೃಕ್ ಪುರಾ ಚಾಭೂತ್ತದಿದಂ ಕಥಯಾಮಿ ವಃ ।
ಬಭೂವ ನಮುಚಿರ್ನಾಮ ಪೂರ್ವಂ ದಾನವಸತ್ತಮಃ ॥ ೨೧೬

೨೧೭. ದಾನಶೂರನೂ ಮಹಾವೀರನೂ ಆದ ಇವನಿಗೆ, ಶತ್ರುವೇ ಬಂದು ಕೇಳಿದರೂ ಕೊಡಬಾರದು ಎಂಬುದು ಯಾವುದೂ ಇರಲಿಲ್ಲ.

೨೧೮. ಆ ದಾನವನು ಹತ್ತು ಸಹಸ್ರವರ್ಷಗಳ ಕಾಲ ತಪಸ್ಸನ್ನಾಚರಿಸಿ ಬ್ರಹ್ಮನಿಂದ ಲೋಹ, ಕಲ್ಲು, ಕಟ್ಟಿಗೆಯಿಂದ ಸಾವು ಬಾರದಂತೆ ವರವನ್ನು ಪಡೆದನು.

೨೧೯. ಬಳಿಕ ಅನೇಕ ಬಾರಿ ಇಂದ್ರನನ್ನು ಸೋಲಿಸಿ ಅವನಿಗೆ ಮಂಕು ಬರಿಸಿದನು. ನಂತರ ಕಶ್ಯಪಮಹರ್ಷಿಯು ಆ ದಾನವನನ್ನು ಕೇಳಿಕೊಂಡು ದೇವತೆಗಳೊಡನೆ (ಅವನ ಸಂಮತಿಯ ಮೇರೆಗೆ) ಸಂಧಿಮಾಡಿಸಿದನು.

೨೨೦. ನಂತರ ವೈರ ಕಳೆದ ದೇವತೆಗಳೂ ಅಸುರರೂ ಕ್ಷೀರಸಾಗರಕ್ಕೆ ಬಂದು ಮಂದರಾದ್ರಿಯಿಂದ ಅದನ್ನು ಕಡೆದರು.

೨೨೧. ಬಳಿಕ ಅಚ್ಯುತನೂ ಅವನ ಶತ್ರುಗಳೂ ಕಡಲಲ್ಲಿ ಹುಟ್ಟಿದ ಲಕ್ಷ್ಮಿ ಮುಂತಾದ ರತ್ನಗಳನ್ನು ಭಾಗಮಾಡಿಕೊಂಡರು. ಆಗ ನಮುಚಿಯು ಉಚ್ಚೈಃ ಶ್ರವಸ್ ಎಂಬ ಕುದುರೆಯನ್ನು ಪಡೆದನು.

೨೨೨. ಹಾಗೆಯೇ ಇತರ ದೇವಾಸುರರೂ ಕೂಡ ಕಡೆಯಲ್ಪಡುತ್ತಿದ್ದ ಕಡಲಿನಿಂದ ಮೇಲೆದ್ದು ಬಂದ, ಬ್ರಹ್ಮದೇವನ ಪ್ರಭಾವದಿಂದಲೇ ಕಾಣಿಸಿಕೊಂಡ ವಿವಿಧ ವಸ್ತುಗಳನ್ನು ಪಡೆದರು.

---

ಯಸ್ಯ ದಾನಪ್ರಸಕ್ತಸ್ಯ ಮಹಾವೀರಸ್ಯ ನಾಭವತ್ ।
ಅದೇಯಮಹಿತಾಯಾಪಿ ಯಾಚಮಾನಾಯ ಕಿಂಚನ ॥ ೨೧೭
ದಶವರ್ಷಸಹಸ್ರಾಣಿ ಸ ತಪ್ತ್ವಾ ಧೂಮಪಸ್ತಪಃ ।
ಲೋಹಾಶ್ಮಕಾಷ್ಠಾವಧ್ಯತ್ವಂ ವಿರಿಂಚಾತ್ ಪ್ರಾಪ್ತವಾನ್‌ವರಮ್ ॥ ೨೧೮
ತತೋಽಸಕೃದ್ವಿಜಿತ್ಯೇಂದ್ರಂ ಕಾಂದಿಶೀಕಂ ಸ ತಂ ವ್ಯಧಾತ್ ।
ತತ್‌ಪ್ರಾರ್ಥ್ಯ ಕಶ್ಯಪರ್ಷಿಸ್ತಂ ದೇವೈಃ ಸಂಧಿಮಕಾರಯತ್ ॥ ೨೧೯
ಅಥ ವಿಶ್ರಾಂತವೈರಾಸ್ತೇ ಸಂಮಂತ್ರೈವ ಸುರಾಸುರಾಃ ।
ದುಗ್ಧಾಂಭೋನಿಧಿಮಭ್ಯೇತ್ಯ ಮಮಂಥುರ್ಮಂದರಾದ್ರಿಣಾ ॥ ೨೨೦
ತತೋಽಚ್ಯುತಾರಯೋ ಭಾಗಾನ್‌ಕಮಲಾಪ್ರಭೃತೀನ್ಯಥಾ ।
ಪ್ರಾಪುಸ್ತಥೋಚ್ಚೈಃಶ್ರವಸಂ ಹಯಂ ನಮುಚಿರಾಪ್ತವಾನ್ ॥ ೨೨೧
ಅನ್ಯೇ ದೇವಾಸುರಾಶ್ಚಾನ್ಯಾನ್ ಪ್ರದಿಷ್ಟಾನ್ ಬ್ರಹ್ಮಣಾ ಪೃಥಕ್ ।
ಲೇಭಿರೇ ವಿವಿಧಾನ್ ಭಾಗಾನ್ ಮಥ್ಯಮಾನಾರ್ಣವೋತ್ಥಿತಾನ್ ॥ ೨೨೨

೨೨೩. ಮಂಥನದ ಕಡೆಯಲ್ಲಿ ಸಿಕ್ಕಿದ ಅಮೃತವನ್ನು ದೇವತೆಗಳು ಅಪಹರಿಸಲಾಗಿ ಅವರಿಗೂ ಮತ್ತು ಅಸುರರಿಗೂ ಮತ್ತೆ ವೈರವುಂಟಾಯಿತು.

೨೨೪. ನಂತರ ನಡೆದ ದೇವಾಸುರ ಯುದ್ಧದಲ್ಲಿ ಸುರರಿಂದ ಯಾವ ಯಾವ ಅಸುರನು ಹತನಾದನೋ ಆಯಾಯಾ ಅಸುರರನ್ನೆಲ್ಲ ಉಚ್ಚೈಃಶ್ರವಸ್ಸು ಮೂಸಿ ನೋಡಿ ಆ ಕ್ಷಣವೇ ಜೀವ ಪಡೆಯುವಂತೆ ಮಾಡಿತು.

೨೨೫. ಅದರಿಂದ ದೈತ್ಯದಾನವರು ದೇವತೆಗಳಿಗೆ ಅಜೇಯರಾದರು. ಬಳಿಕ ವಿಷಣ್ಣನಾದ ಶಕ್ರನನ್ನು ಕುರಿತು ಬೃಹಸ್ಪತಿಯು ಗುಟ್ಟಿನಲ್ಲಿ ಹೇಳಿದನು.

೨೨೬. "ಒಂದು ಉಪಾಯವಿದೆ. ಅದನ್ನು ಆದಷ್ಟು ಬೇಗ ಮಾಡಬೇಕು. ನೀನೇ ಹೋಗಿ ನಮುಚಿಯಿಂದ ಆ ಅಶ್ವಶ್ರೇಷ್ಠವನ್ನು ಯಾಚಿಸು.

೨೨೭. ನೀನು ವಿಪಕ್ಷದಲ್ಲಿದ್ದರೂ ನಿನಗೆ ಕೊಡದೆ ಇರಲಾರ. ಯಾರೂ ಕೂಡ ಹುಟ್ಟಿದಂದಿನಿಂದ ಕೊಡಿಟ್ಟ ದಾನಶೂರನೆಂಬ ಯಶಸ್ಸನ್ನು ಹಾಳುಮಾಡಿ ಕೊಳ್ಳುವುದಿಲ್ಲವಷ್ಟೆ'

೨೨೮. ಹೀಗೆಂದು ದೇವಗುರುವು ಹೇಳಿದಾಗ ಮಹೇಂದ್ರನು ತ್ರಿದಶರೊಡನೆ ಸೇರಿ ನಮುಚಿಯ ಬಳಿಗೆ ಹೋಗಿ ಉಚ್ಚೈಃ ಶ್ರವಸ್ಸನ್ನು ಯಾಚಿಸಿದನು.

---

ಮಂಥಪರ್ಯಂತಲಬ್ಧೇ ಚ ತ್ರಿದಶೈರಮೃತೇ ಹೃತೇ ।
ತೇಷಾಮಥಾ ಸುರಾಣಾಂ ಚ ಪುನರ್ವೈರಮಜಾಯತ ॥ ೨೨೩

ತತೋ ಸೇವಾಸುರರಣೇ ಜಘ್ನೇ ಯೋ ಯೋಽಸುರಃ ಸುರೈಃ ।
ಆಘ್ರಾಯೋಚ್ಚೈಃಶ್ರವಾಸ್ತಂ ತಂ ಜೀವಯಾಮಾಸ ತತ್ಕ್ಷಣಮ್ ॥ ೨೨೪

ಅಜೇಯೋ ಜಜ್ಞಿರೇ ತೇನ ದೇವಾನಾಂ ದೈತ್ಯದಾನವಾಃ ।
ತತೋ ವಿಷಣ್ಣಂ ವಕ್ತಿ ಸ್ಮ ರಹಃ ಶಕ್ರಂ ಬೃಹಸ್ಪತಿಃ ॥ ೨೨೫

ಏಕಸ್ತಾವಾತ್ರೋಪಾಯೋಽಸ್ತಿ ತಂ ಕುರುಷ್ವಾವಲಂಬಿತಮ್ ।
ಸ್ವಯಂ ಯಾಚಸ್ವ ಗತ್ವಾ ತಂ ನಮುಚಿಂ ತಂ ಹಯೋತ್ತಮಮ್ ॥ ೨೨೬

ವಿಪಕ್ಷಾಯಾಪಿ ತುಭ್ಯಂ ತಂ ಸ ಹಯಂ ನ ನ ದಾಸ್ಯತಿ ।
ಖಂಡಯಿಷ್ಯತಿ ನಾಜನ್ಮಸಂಚಿತಂ ದಾತೃತಾಯಶಃ ॥ ೨೨೭

ಇತ್ಯುಕ್ತೋ ದೇವಗುರುಣಾ ಮಹೇಂದ್ರಸ್ತ್ರಿದಶೈಃ ಸಹ ।
ಗತ್ವಾ ಯಯಾಚೇ ನಮುಚಿಂ ತಮುಚ್ಚೈಃ ಶ್ರವಸಂ ಹಯಮ್ ॥ ೨೨೮

೨೨೯. ನನ್ನನ್ನು ಬಂದು ಯಾಚಿಸಿದ ಯಾವನೂ ಸುಮ್ಮನೆ ಹಿಂತಿರುಗಬಾರದು. ಅದರಲ್ಲೂ ಇಂದ್ರನೇ ಬಂದು ಯಾಚಿಸಿದರೆ ನಮುಚಿಯಾದ ನಾನು ಹೇಗೆ ತಾನೆ ಕುದುರೆಯನ್ನು ಕೊಡದಿರಲಿ.

೨೩೦. ಜಗತ್ತಿನಲ್ಲಿ ಮಹಾದಾನಿಯೆಂದು ನಾನು ಸಂಪಾದಿಸಿದ ಕೀರ್ತಿಯು ಮಲಿನವಾದರೆ ಸಂಪತ್ತಿದ್ದು ತಾನೆ ಏನು ? ಜೀವದಿಂದಿದ್ದರೆ ತಾನೆ ಏನು ?

೨೩೧. ಹೀಗೆಂದುಕೊಂಡು ಮಹಾಕೀರ್ತಿ ಶಾಲಿಯಾದ ನಮುಚಿಯು, ಶುಕ್ರಾಚಾರ್ಯನು "ಬೇಡ ಬೇಡ’ ಎಂದು ಹೇಳುತ್ತಿದ್ದರೂ ಶಕ್ರನಿಗೆ ಉಚ್ಚೈಃಶ್ರವಸ್ಸನ್ನು ಕೊಟ್ಟನು.

೨೩೨. ಅಂತೂ ವೃತ್ರ ಹಂತಕನಾದ ಇಂದ್ರನು ವಜ್ರಾಯುಧದಲ್ಲಿರಿಸಿದ ಗಂಗಾ ನದಿಯ ನೊರೆಯಿಂದ, ಶಸ್ತ್ರಾದಿಗಳಿಂದ ಅವಧ್ಯತ್ವವನ್ನು ಹೊಂದಿದ್ದ ಹಾಗೂ ವಿಶ್ವಾಸದಿಂದ ಕುದುರೆಯನ್ನು ದಾನಮಾಡಿದ ನಮುಚಿಯನ್ನೇ ಕೊಂದನು.

೨೩೩. ಅಯ್ಯೋ ಏನನ್ಯಾಯ ! ಈ ಸಂಸಾರದಲ್ಲಿ ಎಂತಹ ದುರಂತಗಳು ತುಂಬಿವೆ. ಭೋಗಲಾಲಸೆಗೆ ಮಾರು ಹೋಗಿರುವ ದೇವತೆಗಳೂ ಕೂಡ ಅನೌಚಿತ್ಯ ದೋಷಕ್ಕಾಗಲಿ, ಅಕೀರ್ತಿಗಾಗಲಿ ಹೆದರುವುದಿಲ್ಲವಲ್ಲ !

೨೩೪. ನಮುಚಿಯ ಮರಣವನ್ನು ತಪೋಬಲದಿಂದ ತಿಳಿದು ದುಃಖ ಸಂತಪ್ತಳಾದ ಅವನ ತಾಯಿಯಾದ ದನುವು ಶೋಕಶಾಂತಿಗಾಗಿ ಸಂಕಲ್ಪ ಮಾಡಿದಳು.

---

ನ ಮೇ ಪರಾಙ್ಮುಖೋ ಗಚ್ಛೇತ್ಯರ್ಥೀ ತತ್ರಾಪಿ ವಾಸವಃ ।
ತದಸ್ಮೈ ನಮುಚಿರ್ಭೂತ್ವಾ ದದ್ಯಾಂ ನಾಹಂ ಕಥಂ ಹಯಮ್ ॥ ೨೨೯
ಜಗತ್ಸು ದಾತೃತಾಕೀರ್ತಿರ್ಯಾ ಮಯಾ ಚಿರಮರ್ಜಿತಾ ।
ಸಾ ಚೇನ್ಮ್ಲಾನಿಂ ಗತಾ ತನ್ಮೇ ಕಿಂ ಶ್ರಿಯಾ ಜೀವಿತೇನ ವಾ ॥ ೨೩೦
ಇತಿ ಸಂಚಿಂತ್ಯ ಶಕ್ರಾಯ ತಮುಚ್ಚೈಃ ಶ್ರವಸಂ ದದೌ ।
ವಾರ್ಯಮಾಣೋಽಪಿ ಶುಕ್ರೇಣ ನಮುಚಿಂ ಸ ಮಹಾಶಯಃ ॥ ೨೩೧
ದತ್ತಾಶ್ವಮಥ ವಿಶ್ವಾಸ್ಯ ತಂ ಗಾಂಗೇನ ಜಘಾನ ಸಃ ।
ಶಸ್ತ್ರಾದ್ಯವಧ್ಯಂ ಫೇನೇನ ವಜ್ರನ್ಯಸ್ತೇನ ವೃತ್ರಹಾ ॥ ೨೩೨
ಅಹೋ ದುರಂತಾ ಸಂಸಾರೇ ಭೋಗತೃಷ್ಣಾ ಯಯಾ ಹೃತಾಃ ।
ಅನೌಚಿತ್ಯಾದಕೀರ್ತೇಶ್ಚ ದೇವಾ ಅಪಿ ನ ಬಿಭ್ಯತಿ ॥ ೨೩೩
ತದ್ಬುಧ್ವಾ ತಸ್ಯ ನಮುಚೇ ರ್ದನುರ್ಮಾತಾ ತಪೋಬಲಾತ್ ।
ಚಕಾರ ದುಃಖಸಂತಪ್ತಾ ಸಂಕಲ್ಪಂ ಶೋಕಶಾಂತಯೇ ॥ ೨೩೪

೨೩೫. "ಆ ನಮುಚಿಯೇ ಮತ್ತೆ ನನ್ನ ಗರ್ಭದಲ್ಲಿ ಬಲಶಾಲಿಯಾಗಿ ಹುಟ್ಟಲಿ. ಯುದ್ಧಗಳಲ್ಲಿ ಎಲ್ಲ ದೇವತೆಗಳಿಗೂ ಅಜೇಯನಾಗಿ ಉಳಿಯಲಿ.'

೨೩೬. ನಂತರ ನಮುಚಿಯೆ ಆಕೆಯ ಗರ್ಭದಲ್ಲಿ ಮತ್ತೆ ಅಸುರನಾಗಿ ಹುಟ್ಟಿದನು. ಸರ್ವರತ್ನಮಯನಾದ ಅವನು ಮಹಾಬಲಯೋಗದಿಂದ ಪ್ರಬಲನೆಂಬ ಹೆಸರುಳ್ಳವನಾದನು.

೨೩೭. ದಾನವೇಶ್ವರನಾದ ಪ್ರಬಲನು ಕೂಡ ತಪಸ್ಸನ್ನು ಮಾಡಿ, ಬೇಡಿದವರನ್ನು ಪ್ರಾಣಕೊಟ್ಟಾದರೂ ಸಂತೋಷಗೊಳಿಸುತ್ತಾ ಶತಯಾಗಗಳನ್ನು ಮಾಡಿ ಇಂದ್ರನನ್ನು ಗೆದ್ದು ಧನ್ಯನಾದನು.

೨೩೮. ಬಳಿಕ ದೇವತೆಗಳು ಮಂತ್ರಾಲೋಚನೆ ಮಾಡಿ ಅವನನ್ನು ಬಳಿಸಾರಿ "ಪುರುಷ ಮೇಧ ಯಜ್ಞಕ್ಕಾಗಿ ನಿನ್ನ ದೇಹವನ್ನು ನೀಡು' ಎಂದು ಬೇಡಿದರು.

೨೩೯. ಅದನ್ನು ಕೇಳಿ ಅವನು ಶತ್ರುಗಳಾದ ಅವರಿಗೆ ತನ್ನ ದೇಹವನ್ನು ಕೊಟ್ಟನು. ಪ್ರಾಣಗಳನ್ನು ಔದಾರ್ಯದಿಂದಲೇ ಬಿಟ್ಟನು. ಬೇಡುವವರನ್ನು ಹಿಮ್ಮೆಟ್ಟಿಸಲಿಲ್ಲ.

೨೪೦. ನಂತರ ಆ ದಾನವನನ್ನು ಖಂಡಶಃ ಕತ್ತರಿಸಲಾಯಿತು. ಅವನೇ ಇಂದು ಮನುಷ್ಯ ಲೋಕದಲ್ಲಿ ಪ್ರಭಾಸನಾಗಿ ಜನಿಸಿದ್ದಾನೆ.

೨೪೧. ಮೊದಲು ನಮುಚಿ, ನಂತರ ಪ್ರಬಲ, ಈಗ ಪ್ರಭಾಸನಾದ ಈತನು ತನ್ನ ಪುಣ್ಯ ಪ್ರಭಾವದಿಂದ ಶತ್ರುಗಳಿಗೆ ಅಜೇಯನಾಗಿ ಉಳಿದಿದ್ದಾನೆ.

---

ಸ ಏವ ಮೇ ಪುನರ್ಗರ್ಭೇ ಸಂಭೂಯಾನ್ನಮುಚಿರ್ಬಲೀ ।
ಭೂಯಾಚ್ಚ ಸರ್ವದೇವಾನಾಮಜೇಯಃ ಸಂಯುಗೇಷ್ವಿತಿ ॥ ೨೩೫

ತತಃ ಸ ತಸ್ಯಾಃ ಸಂಭೂಯ ಗರ್ಭೇ ಜಾತೋಽಸುರಃ ಪುನಃ ।
ಸರ್ವರತ್ನಮಯೋ ನಾಮ್ನಾ ಪ್ರಬಲೋ ಬಲಯೋಗತಃ ॥ ೨೩೬

ಸೋಽಪಿ ತಪ್ತತಪಾಃ ಪ್ರೀಣನ್ ಪ್ರಾಣೈರಪ್ಯರ್ಥಿನಃ ಕೃತೀ ।
ಶತಕೃತ್ವೋ ಜಿಗಾಯೇಂದ್ರಂ ಪ್ರಬಲೋ ದಾನವೇಶ್ವರಃ ॥ ೨೩೭

ತತಃ ಸಂಮಂತ್ರ್ಯ ದೇವಾಸ್ತಮುಪೇತ್ಯೈವಂ ಯಯಾಚಿರೇ ।
ದೇಹಂ ಪುರುಷಮೇಧಾರ್ಥಮಸ್ಮಭ್ಯಂ ದೇಹಿ ಸರ್ವಥಾ ॥ ೨೩೮

ತಚ್ಛ್ರುತ್ವಾ ಸ ರಿಪುಭ್ಯೋಽಪಿ ತೇಭ್ಯೋ ದೇಹಮದಾನ್ನಿಜಮ್ ।
ಪ್ರಾಣಾನುದಾರಾ ವಿಸೃಜಂತ್ಯರ್ಥಿನೋ ನ ಪರಾಙ್ಮುಖಮ್ ॥ ೨೩೯

ತತಃ ಸ ಖಂಡಶೋ ದೇವೈಃ ಕೃತಃ ಪ್ರಬಲದಾನವಃ ।
ಮನುಷ್ಯಲೋಕೇ ಜಾತೋಽದ್ಯ ಪ್ರಭಾಸವಪುಷಾ ಪುನಃ ॥ ೨೪೦

ತದೇವಮಾದೌ ನಮುಚಿಸ್ತತೋಽಭೂತ್ ಪ್ರಬಲಶ್ಚ ಸಃ ।
ಸೈಷ ಪ್ರಭಾಸಸ್ತತ್ಪುಣ್ಯಪ್ರಭಾವಾದ್ದುರ್ಜಯೋಽರಿಭಿಃ ॥ ೨೪೧

೨೪೨. ಆ ಓಷಧೀ ಗುಹೆಯು ಪ್ರಭಾಸನಿಗೆ ಸಂಬಂಧಪಟ್ಟದ್ದೇ ಆಗಿದೆ. ಅದರಿಂದ ಕಿಂಕರ ಸಹಿತವಾಗಿ ಅದು ಇವನಿಗೆ ಆತ್ಮೀಯವಾಗಿದ್ದು ಇವನ ವಶದಲ್ಲಿದೆ.

೨೪೩. ಅದರ ಕೆಳಗಿನ ಪಾತಾಳದಲ್ಲಿ ಪ್ರಬಲನ ಮಂದಿರವಿದೆ. ಅಲ್ಲಿ ಇವನ ಹನ್ನೆರಡು ಜನ ಮುಖ್ಯ ಪತ್ನಿಯರಿದ್ದಾರೆ. ಅವರೆಲ್ಲರೂ ಸರ್ವಾಲಂಕಾರ ಭೂಷಿತೆಯರಾಗಿದ್ದಾರೆ.

೨೪೪. ವಿಧವಿಧವಾದ ರತ್ನಗಳೂ, ಅನೇಕ ಬಗೆಯ ಆಯುಧಗಳೂ, ಚಿಂತಾಮಣಿಯೂ, ಒಂದು ಲಕ್ಷ ಯೋಧರೂ, ಕುದುರೆಗಳೂ ಇವೆ.

೨೪೫. ಇವೆಲ್ಲ ಪ್ರಭಾಸನಿಗೆ ಸೇರಿವೆ. ಇವೆಲ್ಲ ಇವನು ಹಿಂದೆ ಸಂಪಾದಿಸಿದ ವಸ್ತುಗಳು. ಪ್ರಭಾಸನು ಇಂತಹ ವ್ಯಕ್ತಿ. ಈತನಿಗೆ ಇವು ಅದ್ಭುತವಾದದ್ದೇನಲ್ಲ.

೨೪೬. ಹೀಗೆ ಮುನಿ ಕುಮಾರಕನಿಂದ (ಪ್ರಭಾಸನ ಪೂರ್ವ ಕಥೆಯನ್ನು) ಕೇಳಿ, ಸೂರ್ಯಪ್ರಭಾದಿಗಳೂ, ಮಯನೂ, ಪ್ರಭಾಸನೂ ರತ್ನಾದಿ ವಸ್ತುಗಳನ್ನು ಪಡೆಯುವ ಸಲುವಾಗಿ ಪಾತಾಳದಲ್ಲಿರುವ ಪ್ರಬಲನ ಮನೆಗೆ ಹೋಗಲು ಬಿಲವನ್ನು ಪ್ರವೇಶಿಸಿದರು.

---

ಯಾ ಚ ಸಂಬಂಧಿನೀ ತಸ್ಯ ಪ್ರಬಲಸ್ಯೌಷಧೀ ಗುಹಾ ।
ತೇನ ಪ್ರಭಾಸಸ್ಯಾತ್ಮೀಯಾ ವಶ್ಯಾ ಸಾಸ್ಯ ಸಕಿಂಕರಾ ॥ ೨೪೨
ತದಧಶ್ಚಾಸ್ತಿ ಪಾತಾಲೇ ಮಂದಿರಂ ಪ್ರಬಲಸ್ಯ ತತ್ ।
ಯತ್ರ ದ್ವಾದಶ ಸಂತ್ಯಸ್ಯ ಮುಖ್ಯಭಾರ್ಯಾಃ ಸ್ವಲಂಕೃತಾಃ ॥ ೨೪೩
ವಿವಿಧಾನಿ ಚ ರತ್ನಾನಿ ನಾನಾಪ್ರಹರಣಾನಿ ಚ ।
ಚಿಂತಾಮಣಿಶ್ಚ ಲಕ್ಷಂ ಚ ಯೋಧಾನಾಂ ತುರಗಾಸ್ತಥಾ ॥ ೨೪೪
ತತ್ಪ್ರಭಾಸಸ್ಯ ಸಂಬಂಧಿ ಸರ್ವಮಸ್ಯ ಪುರಾರ್ಜಿತಮ್ ।
ತದೀದೃಶಃ ಪ್ರಭಾಸೋಽಯಂ ನಾಸ್ಯೇದಂ ಕಿಂಚಿದದ್ಭುತಮ್ ॥ ೨೪೫
ಏವಂ ತತೋ ಮುನಿಕುಮಾರಕತೋ ನಿಶಮ್ಯ
ಸೂರ್ಯಪ್ರಭಪ್ರಭೃತಯಃ ಸಮಯಪ್ರಭಾಸಾಃ ।
ರತ್ನಾದ್ಯವಾಪ್ತುಮಥ ತತ್ಪ್ರಯಯುಸ್ತದೈವ
ಪಾತಾಲಗಂ ಪ್ರಬಲವೇಶ್ಮಬಿಲಪ್ರವೇಶಮ್ ॥ ೨೪೬

೨೩೭. ಅಲ್ಲಿಂದ ಹೋಗಿ ಪೂರ್ವಪತ್ನಿಯರನ್ನು ಪರಿಗ್ರಹಿಸಿ, ಚಿಂತಾಮಣಿಯನ್ನೂ, ತುರಗಗಳನ್ನೂ, ಅಸುರ ಯೋಧರನ್ನೂ ಪಡೆದುಕೊಂಡು, ಅಲ್ಲಿಂದ ಹೊರಬಂದು, ಅಪಾರ ದ್ರವ್ಯ ಸಂಪತ್ತಿಯಿಂದ ಕೂಡಿದವನಾಗಿ ಪ್ರಭಾಸನು ಸೂರ್ಯಪ್ರಭನಿಗೆ ಸಂತೋಷವುಂಟು ಮಾಡಿದನು.

೨೩೮. ಬಳಿಕ, ಸೂರ್ಯಪ್ರಭನು ಮಯ, ಸುನೀಥ, ಪ್ರಭಾಸ, ಸುಮೇರು ಮೊದಲಾದ ರಾಜರಿಂದಲೂ ಮಂತ್ರಿಗಳಿಂದಲೂ ಕೂಡಿದವನಾಗಿ ಬೇಗನೆ ಅಭೀಷ್ಟಸಿದ್ಧಿಯನ್ನು ಪಡೆದವನಾಗಿ ಮತ್ತೆ ತನ್ನ ಸೇನಾ ನಿವೇಶಕ್ಕೆ ಬಂದು ಸೇರಿದನು.

೨೩೯. ಅಲ್ಲಿ ಅಸುರಾಧಿಪರೂ, ನರಭೂಪಾಲರೂ ತಮ್ಮ ತಮ್ಮ ವಾಸಗೃಹಗಳಿಗೆ ಹೋದಮೇಲೆ ದರ್ಭಾಸನದ ಮೇಲೆ ಮಲಗಿ ಪುನಃ ರಣದೀಕ್ಷಿತನಾದ ಸೂರ್ಯಪ್ರಭನು ಆತ್ಮ ನಿಯಂತ್ರಣದಿಂದ ಆ ರಾತ್ರಿಯನ್ನು ಕಳೆದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ
ಕಥಾಸರಿತ್ಸಾಗರದ
ಸೂರ್ಯಪ್ರಭಲಂಬಕದಲ್ಲಿ ಮೂರನೆಯ ತರಂಗವು ಮಗಿಯಿತು.

---

ತೇನ ಪ್ರವಿಶ್ಯ ಪರಿಗೃಹ್ಯ ಚ ಪೂರ್ವಪತ್ನೀ
ಶ್ಚಿಂತಾಮಣಿಂ ಚ ತುರಗಾನಸುರಾಂಶ್ಚ ಯೋಧಾನ್ ।
ನಿರ್ಗತ್ಯ ಚಾತ್ರ ನಿಖಿಲದ್ರವಿಣಃ ಸ ಏಕಃ
ಸೂರ್ಯಪ್ರಭಂ ಕಿಮಪಿ ತೋಷಿತವಾನ್ ಪ್ರಭಾಸಃ ॥ ೨೩೭

ಅಥ ಸಮಯಸುನೀಥಃ ಸಪ್ರಭಾಸಃ ಸುಮೇರು
ಪ್ರಭೃತಿಭಿರನುಯಾತೋ ರಾಜಭಿರ್ಮಂತ್ರಿಭಿಶ್ಚ ।
ದ್ರುತಮಭಿಮತಸಿದ್ಧಿಂ ಪ್ರಾಪ್ಯ ಸೂರ್ಯಪ್ರಭೋಽಸೌ
ಪುನರಪಿ ನಿಜಸೇನಾಸಂನಿವೇಶಂ ತಮಾಗಾತ್ ॥ ೨೩೮

ತತ್ರ ಸೋಽಸುರನರಾಧಿಪಾಧಿಪು ಸ್ವಸ್ವವಾಸಕಗತೇಷು ತೇಷು ತಮ್ ।
ರಾತ್ರಿಶೇಷಮನಯತ್ ಕುಶಾಸ್ತರೇ ಸಂನಿಗೃಹ್ಯ ರಣದೀಕ್ಷಿತಃ ಪುನಃ ॥ ೨೩೯

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ಸೂರ್ಯಪ್ರಭಲಂಬಕೇ ತೃತೀಯಸ್ತರಂಗಃ ।

## ನಾಲ್ಕನೆಯ ತರಂಗ

೧ ಬಳಿಕ ಬೆಳಿಗ್ಗೆ, ಸೂರ್ಯಪ್ರಭನು ಸೈನ್ಯದೊಡನೆ ಸುಮೇರುತಪೋವನದಿಂದ ಶ್ರುತಶರ್ಮನನ್ನು ಗೆಲ್ಲುವ ಬಯಕೆಯಿಂದ ಹೊರಟನು.

೨. ತ್ರಿಕೂಟಾದ್ರಿಯ ಬಳಿ ಸಾರಿ ಅವರ ನಿವಾಸದ ಬಳಿಯಲ್ಲೇ ತನ್ನ ಸೇನೆಯ ಮೂಲಕ ಅವನ ಸೇನೆಯನ್ನು ಓಡಿಸಿ ಬೀಡು ಬಿಟ್ಟನು.

೩. ಸುಮೇರು ಮಯಾದಿಗಳೆಲ್ಲ ಅಲ್ಲಿ ಬಿಡಾರ ಹೂಡಿ ಸಭೆಯಲ್ಲಿದ್ದಾಗ ತ್ರಿಕೂಟನ ಕಡೆಯಿಂದ ದೂತನು ಬಂದನು.

೪. ಬಂದವನೇ ಖೇಚರೇಶ್ವರನಾದ ಸುಮೇರುವಿಗೆ ಹೀಗೆಂದನು, "ಶ್ರುತಶರ್ಮನ ತಂದೆಯಾದ ರಾಜನು ನಿನಗೆ ಈ ಸಂದೇಶ ಕಳಿಸಿದ್ದಾನೆ;

೫. "ನೀನು ದೂರದಲ್ಲಿದ್ದುದರಿಂದ ಒಮ್ಮೆಯೂ ನಿನ್ನನ್ನು ಸತ್ಕರಿಸಲಾಗಲಿಲ್ಲ. ಇಂದು ಅನೇಕ ಅತಿಥಿಗಳೊಡನೆ ನಮ್ಮ ರಾಜ್ಯಕ್ಕೆ ಬಂದಿದ್ದೀಯೆ.

---

## ಚತುರ್ಥಸ್ತರಂಗಃ

ತತಃ ಪ್ರಾತಃ ಸಮಂ ಸೈನ್ಯೈಃ ಸ ಸುಮೇರುತಪೋವನಾತ್ ।
ತಸ್ಮಾತ್ ಸೂರ್ಯಪ್ರಭಃ ಪ್ರಾಯಾಚ್ಛ್ರುತಶರ್ಮಜಿಗೀಷಯಾ ॥ ೧
ತನ್ನಿವಾಸಸ್ಯ ನಿಕಟಂ ತ್ರಿಕೂಟಾದ್ರೇರವಾಪ್ಯ ಚ ।
ಆವಾಸಿತೋಽಭೂತ್ತತ್ರಸ್ಥಂ ಬಲೇನೋತ್ಸಾರ್ಯ ತದ್ಬಲಮ್ ॥ ೨
ಆವಾಸಿತೇ ಚ ತತ್ರಾಸ್ಮಿನ್ ಸಸುಮೇರುಮಯಾದಿಕೇ ।
ಆಸ್ಥಾನಸ್ಥೇ ತ್ರಿಕೂಟೇಶಸಂಬಂಧೀ ದೂತ ಆಯಯೌ ॥ ೩
ಸ ಚಾಗತ್ಯ ಜಗಾದೇವಂ ಸುಮೇರುಂ ಖೇಚರೇಶ್ವರಂ ।
ಶ್ರುತಶರ್ಮಪಿತಾ ರಾಜಾ ತವ ಸಂದಿಷ್ಟವಾನಿದಂ ॥ ೪
ದೂರಸ್ಥಸ್ಯ ನ ತೇಽಸ್ಮಾಭಿರಾಚಾರೋ ಜಾತುಚಿತ್ಕೃತಃ ।
ಅದ್ಯಾಸ್ಮದ್ವಿಷಯಂ ಪ್ರಾಪ್ತಃ ಸ ತ್ವಂ ಪ್ರಾಘುಣಿಕೈಃ ಸಹ ॥ ೫

೬ ಆದ್ದರಿಂದ ಇಂದು ನಿಮಗೆ ಯಥೋಚಿತವಾದ ಆತಿಥ್ಯವನ್ನು ಮಾಡುವವರಿದ್ದೇವೆ.' ಶತ್ರುವಿನ ಈ ಮಾತನ್ನು ಕೇಳಿದ ಸುಮೇರುವು ದೂತನಿಗೆ ಹೇಳಿದನು.

೭ "ಒಳ್ಳೆಯದು. ನಮ್ಮಂಥಹ ಮತ್ತೊಬ್ಬ ಅತಿಥಿ ನಿನಗೆ ದೊರೆಯಲಾರನು. ಆತಿಥ್ಯವು ಫಲವನ್ನು ಪರಲೋಕದಲ್ಲಿ ಕೊಡುವುದಿಲ್ಲ. ಇಲ್ಲಿಯೇ ಅದಕ್ಕೆ ಫಲ ಸಿಗುತ್ತದೆ.

೮ ನಾವು ಸಿದ್ಧರಿದ್ದೇವೆ. ನಮಗೆ ಆತಿಥ್ಯವನ್ನು ಮಾಡೋಣವಾಗಲಿ' ದೂತನು ಈ ಮಾತನ್ನು ಕೇಳಿ ಹಾಗೆಯೇ ತನ್ನ ದೊರೆಯ ಬಳಿಗೆ ಹೋದನು.

೯. ಬಳಿಕ ಉನ್ನತ ಪ್ರದೇಶದಲ್ಲಿದ ಸೂರ್ಯಪ್ರಭಾದಿಗಳು ಬೇರೆ ಬೇರೆ ಗುಂಪುಗಳಾಗಿ ನಿಂತಿದ್ದ ತಮ್ಮ ಸೈನ್ಯದಳಗಳನ್ನು ಕಂಡರು.

೧೦. ಸುನೀಥನು ತನ್ನ ತಂದೆಯಾದ ಮಯಾಸುರನನ್ನು ಕುರಿತು, "ನಮ್ಮ ಸೈನ್ಯದ ರಥಾದಿ ವಿಭಾಗಗಳನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸಿ' ಎಂದನು.

೧೧. "ಹೀಗೆ ಮಾಡುತ್ತೇನೆ ಕೇಳಿ' ಎಂದು ಹೇಳಿದ ಸರ್ವಜ್ಞನಾದ ಆ ದಾನವೇಂದ್ರನು ಕೈ ಬೆರಳಿನಿಂದ ನಿರ್ದೇಶಮಾಡುತ್ತ ಹೇಳಲು ಪ್ರಾರಂಭಿಸಿದನು.

೧೨–೧೩. ಈ ಸುಬಾಹು, ನಿರ್ಘಾತ, ಮುಷ್ಟಿಕ, ಗೋಹರ, ಪ್ರಲಂಬ, ಪ್ರಮಾಥ, ಕಂಕಟ, ಪಿಂಗಲ, ವಸುದತ್ತಮುಂತಾದ ಈ ರಾಜರು ಅರ್ಧರಥರು. ಅಂಕುರಿ, ಸುವಿಶಾಲ, ದಂಡಿ, ಭೂಷಣ, ಸೋಮಿಲ, ಉನ್ಮತ್ತಕ ಮತ್ತು

---

ತದಾತಿಥ್ಯಮಿದಾನೀಂ ವೋ ವಿಧಾಸ್ಯಾಮೋ ಯಥೋಚಿತಂ ।
ಶ್ರುತ್ವೈತಂ ಶತ್ರುಸಂದೇಶಂ ಸುಮೇರುಃ ಪ್ರತ್ಯುವಾಚ ತಮ್ ॥ ೬
ಸಾಧು ನಾಸ್ಮತ್ಸಮಂ ಪಾತ್ರಮತಿಥಿಂ ಪ್ರಾಪ್ಸ್ಯಥಾಪರಂ ।
ಆತಿಥ್ಯಂ ನ ಪರೇ ಲೋಕೇ ದಾಸ್ಯತೀಹೈವ ತತ್ಫಲಮ್ ॥ ೭
ತದಿಮೇ ವಯಮಾತಿಥ್ಯಂ ಕ್ರಿಯತಾಮಿತ್ಯುದಾಹೃತೇ ।
ಸುಮೇರುಣಾ ತಥೈವಾಗಾತ್ಸ ದೂತಃ ಸ್ವಂ ಪ್ರಭುಂ ಪ್ರತಿ ॥ ೮
ಅಥೋನ್ನತಪ್ರದೇಶಸ್ಥಾಸ್ತೇ ತು ಸೂರ್ಯಪ್ರಭಾದಯಃ ।
ಸೈನ್ಯಾನಿ ದದೃಶುಃ ಸ್ವಾನಿ ನಿವಿಷ್ಟಾನಿ ಪೃಥಕ್ ಪೃಥಕ್ ॥ ೯
ತತಃ ಸುನೀಥಃ ಪಿತರಂ ಸ್ವಮುವಾಚ ಮಯಾಸುರಂ ।
ಪ್ರವಿಭಾಗಂ ರಥಾದೀನಾಮಸ್ಮತ್ ಸೈನ್ಯೇऽತ್ರ ಶಂಸ ನಃ ॥ ೧೦
ಏವಂ ಕರೋಮಿ ಶೃಣುತೇತ್ಯುಕ್ತ್ವಾಂಗುಲ್ಯಾ ನಿರ್ದಿಶಯನ್ ।
ದಾನವೇಂದ್ರಃ ಸ ಸರ್ವಜ್ಞೋ ವಕ್ತುಮೇವಂ ಪ್ರಚಕ್ರಮೇ ॥ ೧೧
ಅಸೌ ಸುಬಾಹುರ್ನಿರ್ಘಾತೋ ಮುಷ್ಟಿಕೋ ಗೋಹರಸ್ತಥಾ ।
ಪ್ರಲಂಬಶ್ಚ ಪ್ರಮಾಥಶ್ಚ ಕಂಕಟಃ ಪಿಂಗಲೋऽಪಿ ಚ ॥ ೧೨
ವಸುದತ್ತಾದಯಶ್ಚೈತೇ ರಾಜಾನೋऽರ್ಧರಥಾ ಇಮೇ ।
ಅಂಕುರೀ ಸುವಿಶಾಲಶ್ಚ ದಂಡಿಭೂಷಣಸೋಮಿಲಾಃ ॥ ೧೩

೧೪. ದೇವಶರ್ಮಾ, ಪಿತೃಶರ್ಮಾ, ಕುಮಾರಕ ಮತ್ತು ಹರಿದತ್ತನೇ ಮುಂತಾದವರು ಪೂರ್ಣರಥರು.

೧೫. ಪ್ರಕಂಪನ, ದರ್ಪಿತ, ಕುಂಭೀರ, ಮಾತೃಪಾಲಿತ, ಮಹಾಭಟ, ಅಗ್ರಭಟ,

೧೬. ವೀರಸ್ವಾಮಿ, ಸುರಾಧರ, ಭಂಡೀರ, ಸಿಂಹದತ್ತ ಗುಣವರ್ಮಾ, ಸಕೀಟಕ, ಭೀಮ ಭಯಂಕರ ಇವರೆಲ್ಲ ದ್ವಿಗುಣರಥರು.

೧೭–೧೮. ವಿರೋಚನ, ವೀರಸೇನ, ಯಜ್ಞಸೇನ, ಖಜ್ಜರ, ಇಂದ್ರವರ್ಮ, ಶಬರಕ, ಕ್ರೂರಕರ್ಮ, ನಿರಾಸಕ, ಈ ರಾಜಪುತ್ರರೆಲ್ಲ ತ್ರಿಗುಣರು ಎನಿಸಿಕೊಳ್ಳುತ್ತಾರೆ.

೧೯. ಸುಶರ್ಮ, ಬಾಹುಶಾಲಿ, ವಿಶಾಖ, ಕ್ರೋಧನ, ಪ್ರಚಂಡ, ಇವರುಗಳು ರಥಚತುರ್ಗುಣರು ಎನಿಸುತ್ತಾರೆ. ಜುಂಜರಿ, ವೀರವರ್ಮ, ಪ್ರವೀರವರ ಹಾಗೂ

೨೦–೨೧. ಸುಪ್ರತಿಜ್ಞ ಅಮರಾರಾಮ, ಚಂಡದತ್ತ ಜಾಲಿಕ ಮತ್ತು ಸಿಂಹಭಟ, ವ್ಯಾಘ್ರಭಟ, ಶತ್ರುಭಟರೆಂಬ ಮೂವರು ರಾಜರೂ, ರಾಜಪುತ್ರರೂ ಪಂಚಗುಣರು. ಉಗ್ರವರ್ಮನೆಂಬ ರಾಜಪುತ್ರನು ಷಡ್ಗುಣರಥಿಯಾಗಿದ್ದಾನೆ.

---

ಉನ್ಮತ್ತಕೋ ದೇವಶರ್ಮಾ ಪಿತೃಶರ್ಮಾ ಕುಮಾರಕಃ ।
ಏತೇ ಸಹರಿದತ್ತಾದ್ಯಾಃ ಸರ್ವೇ ಪೂರ್ಣರಥಾ ಮತಾಃ ॥ ೧೪
ಪ್ರಕಂಪನೋ ದರ್ಪಿತಶ್ಚ ಕುಂಭೀರೋ ಮಾತೃಪಾಲಿತಃ ।
ಮಹಾಭಟಃ ಸೋಽಗ್ರಭಟೋ ವೀರಸ್ವಾಮೀ ಸುರಾಧರಃ ॥ ೧೫
ಭಂಡೀರಃ ಸಿಂಹದತ್ತಶ್ಚ ಗುಣವರ್ಮಾ ಸಕೀಟಕಃ ।
ಭೀಮೋ ಭಯಂಕರಶ್ಚೇತಿ ಸರ್ವೇಽಮೀ ದ್ವಿಗುಣಾ ರಥಾಃ ॥ ೧೬
ವಿರೋಚನೋ ವೀರಸೇನೋ ಯಜ್ಞಸೇನೋಽಥ ಖಜ್ಜರಃ ।
ಇಂದ್ರವರ್ಮಾ ಶಬರಕಃ ಕ್ರೂರಕರ್ಮಾ ನಿರಾಸಕಃ ॥ ೧೭
ಭವೇಯುಸ್ತ್ರಿಗುಣಾ ಏತೇ ರಥಾ ರಾಜಸುತಾಃ ಸುತ ।
ಸುಶರ್ಮಾ ಬಾಹುಶಾಲೀ ಚ ವಿಶಾಖಃ ಕ್ರೋಧನೋಽಪ್ಯಯಮ್ ॥ ೧೮
ಪ್ರಚಂಡಶ್ಚೇತ್ಯಮೀ ರಾಜಪುತ್ರಾ ರಥಚತುರ್ಗುಣಾಃ ।
ಜುಂಜರೀ ವೀರವರ್ಮಾ ಚ ಪ್ರವೀರವರ ಏವ ಚ ॥ ೧೯
ಸುಪ್ರತಿಜ್ಞೋಽಮರಾರಾಮಶ್ಚಂಡದತ್ತೋಽಥ ಜಾಲಿಕಃ ।
ತ್ರಯಃ ಸಿಂಹಭಟವ್ಯಾಘ್ರಭಟಶತ್ರುಭಟಾ ಅಪಿ ॥ ೨೦
ರಾಜಾನೋ ರಾಜಪುತ್ರಾಶ್ಚ ರಥಾಃ ಪಂಚಗುಣಾ ಅಮೀ ।
ಉಗ್ರವರ್ಮಾ ತ್ವಯಂ ರಾಜಪುತ್ರಃ ಸ್ಯಾತ್ಷಡ್ಗುಣೋ ರಥಃ ॥ ೨೧

೨೨. ರಾಜಪುತ್ರ ವಿಶಾಖ, ಸುತಂತು, ಸುಗಮ, ನರೇಂದ್ರಶರ್ಮ–ಇವರೆಲ್ಲ ಸಪ್ತರಥಿಗಳು ಎಂದು ಪ್ರಸಿದ್ಧರು.

೨೩. ಮಹಾರಥ ಸಹಸ್ರಾಯುವೆಂಬ ರಾಜನ ಮಗನೂ ಆದ ಈ ಶತಾನೀಕನು ಮಹಾರಥಗಳ ಗಣಕ್ಕೆ ಒಡೆಯನು.

೨೪–೨೬. ಸೂರ್ಯಪ್ರಭನ ಗೆಳೆಯರಾದ ಸುಭಾಸ, ಹರ್ಷ, ವಿಮಲರು, ಮಹಾಬುದ್ಧಿ, ಅಚಲ, ಪ್ರಿಯಂಕರ, ಶುಭಂಕರರು, ಯಜ್ಞರುಚಿ, ಧರ್ಮರುಚಿ, ಇವರೆಲ್ಲರೂ ಮಹಾರಥರು. ವಿಶ್ವರುಚಿ, ಭಾಸ, ಸಿದ್ಧಾರ್ಥ, ಈ ಮೂವರೂ ಸೂರ್ಯಪ್ರಭಸಚಿವರು ಮಹಾರಥರ ಗಣಮುಖ್ಯರು. ಪ್ರಹಸ್ತ ಮಹಾರ್ಥರು ಅವನ ಅತಿರಥಮುಖ್ಯರು.

೨೭–೨೮. ರಥಗಣಗಳ ಮುಖ್ಯರು ಪ್ರಜ್ಞಾಢ್ಯ ಮತ್ತು ಸ್ಥಿರಬುದ್ಧಿಗಳು. ದಾನವ, ಸರ್ವದಮನ, ಪ್ರಮಥನ, ಧೂಮಕೇತು, ಪ್ರಮಹಣ, ವಜ್ರಪಂಜರ, ಕಾಲಚಕ್ರ ಮರುದ್ವೇಗ ಇವರುಗಳು ರಥಾತಿರಥ ಪತಿಗಳು.

---

ರಾಜಪುತ್ರೋ ವಿಶಾಖಶ್ಚ ಸುತಂತುಃ ಸುಗಮೋಽಪಿ ಚ ।
ನರೇಂದ್ರಶರ್ಮಾ ಚೇತ್ಯೇಕೇ ರಥಾಃ ಸಪ್ತಗುಣಾ ಮತಾಃ ॥ ೨೨
ಮಹಾರಥಃ ಪುನರಯಂ ಸಹಸ್ರಾಯುರ್ನೃಪಾತ್ಮಜಃ ।
ಮಹಾರಥಾನಾಂ ಯೂಥಸ್ಯ ಶತಾನೀಕಸ್ತ್ವಯಂ ಪತಿಃ ॥ ೨೩
ಸುಭಾಸಹರ್ಷವಿಮಲಾಃ ಸೂರ್ಯಪ್ರಭವಯಸ್ಯಕಾಃ ।
ಮಹಾಬುದ್ಧ್ಯಚಲಾಖ್ಯೌ ಚ ಪ್ರಿಯಂಕರಶುಭಂಕರೌ ॥ ೨೪
ಏತೇ ಮಹಾರಥಾ ಯಜ್ಞರುಚಿಧರ್ಮರುಚೀ ತಥಾ ।
ಏವಂ ವಿಶ್ವರುಚಿರ್ಭಾಸಃ ಸಿದ್ಧಾರ್ಥಶ್ಚೇತ್ಯಮೀ ತ್ರಯಃ ॥ ೨೫
ಸೂರ್ಯಪ್ರಭಸ್ಯ ಸಚಿವಾಃ ಸ್ಯುರ್ಮಹಾರಥಯೂಥಪಾಃ ।
ಪ್ರಹಸ್ತಶ್ಚ ಮಹಾರ್ಥಶ್ಚ ತಸ್ಯಾತಿರಥಯೂಥಪೌ ॥ ೨೬
ಯೂಥಪೌ ರಥಯೂಪಾನಾಂ ಪ್ರಜ್ಞಾಢ್ಯಸ್ಥಿರಬುದ್ಧಿಕೌ ।
ದಾನವಃ ಸರ್ವದಮನಸ್ತಥಾ ಪ್ರಮಥನೋಽಪ್ಯಸೌ ॥ ೨೭
ಧೂಮಕೇತುಃ ಪ್ರಮಹಣೋ ವಜ್ರಪಂಜರ ಏವ ಚ ।
ಕಾಲಚಕ್ರೋ ಮರುದ್ವೇಗೋ ರಥಾತಿರಥಪಾ ಅಮೀ ॥ ೨೮

೨೯–೩೦. ಪ್ರಕಂಪನ, ಸಿಂಹನಾದರು ರಥಾತಿರಥಗಣ ಮುಖ್ಯರು. ಮಹಾಮಾಯ, ಕಾಂಬಲಿಕ, ಕಾಲಕಂಪನ, ಪ್ರಹೃಷ್ಟರೋಮ ಈ ನಾಲ್ವರು ಅಸುರಾಧಿಪತಿಗಳು ಅತಿರಥ, ಯೂಥಾಧಿಪತಿಗಳಿಗೂ ಅಧಿಪತಿಗಳು.

೩೧. ಪ್ರಭಾಸನು ಸೂರ್ಯಪ್ರಭನಿಗೆ ಸಮನಾದ ಸೈನ್ಯನಾಯಕನು. ಸುಮೇರುತನಯನಾದ ಶ್ರೀಕುಂಜರ ಕುಮಾರನೂ ಕೂಡ ಸೇನಾ ನಾಯಕನೇ.

೩೨. ಇವರಿಬ್ಬರೂ ಮಹಾರಥ ಯೂಥಾಧಿಪತಿಗಳು, ಇವರಲ್ಲದೆ ನಮ್ಮ ಸೈನ್ಯದಲ್ಲಿ ತಮ್ಮ ತಮ್ಮ ಸೈನ್ಯದಿಂದ ಕೂಡಿದ ಇತರ ಶೂರರೂ ಇದ್ದಾರೆ.

೩೩. ಶತ್ರುಸೈನ್ಯದಲ್ಲಿ ಇನ್ನೂ ಪ್ರಬಲರೇ ಇದ್ದಾರೆ. ಆದರೂ ಮಹೇಶ್ವರನ ಅನುಗ್ರಹವಿರುವಾಗ ನಮ್ಮ ಸೈನ್ಯಕ್ಕೆ ಅವರು ಸಮರಲ್ಲ (ಸಾಟಿಯಲ್ಲ).

೩೪. ಹೀಗೆಂದು ಸುನೀಥನನ್ನು ಕುರಿತು ಮಯಾಸುರನು ಹೇಳುತ್ತಿರಲಾಗಿ ಶ್ರುತಶರ್ಮನ ತಂದೆಯ ಕಡೆಯಿಂದ ದೂತನೊಬ್ಬನು ಬಂದನು.

೩೫–೩೬. ಅವನು, ತ್ರಿಕೂಟಾಧಿಪತಿಯು ನಿಮ್ಮನ್ನು ಕುರಿತು ಹೀಗೆ ಹೇಳಿದ್ದಾನೆ, "ಸಂಗ್ರಾಮವೆಂಬುದು ಶೂರರಿಗೆ ದೊಡ್ಡ ಹಬ್ಬ. ಇದು ತುಂಬ ಕಿರಿದಾದ ಭೂಭಾಗ. ಇಲ್ಲಿಂದ ಹೊರಬನ್ನಿ. ವಿಶಾಲವಾದ ಕಲಾಪವೆಂಬ ಗ್ರಾಮಕ್ಕೆ ಹೋಗೋಣ' ಎಂದು, ಎಂಬುದಾಗಿ ಹೇಳಿದನು.

---

ಪ್ರಕಂಪನಃ ಸಿಂಹನಾದೋ ರಥಾತಿರಥಯೂಥಪೌ ।
ಮಹಾಮಾಯಃ ಕಾಂಬಲಿಕಃ ಕಾಲಕಂಪನಕೋಽಪ್ಯಯಮ್ ॥ ೨೯
ಪ್ರಹೃಷ್ಟರೋಮಾ ಚೇತ್ಯೇತೇ ಚತ್ವಾರೋಽಪ್ಯಸುರಾಧಿಪಾಃ ।
ಪುತ್ರಾತಿರಥಯೂಥಾಧಿಪತೀನಾಮಧಿಪಾ ಇಮೇ ॥ ೩೦
ಸೂರ್ಯಪ್ರಭಸಮಶ್ಚಾಯಂ ಪ್ರಭಾಸಃ ಸೈನ್ಯನಾಯಕಃ ।
ಸುಮೇರುತನಯಶ್ಚೈಷ ಶ್ರೀಕುಂಜರಕುಮಾರಕಃ ॥ ೩೧
ದ್ವೌ ಮಹಾರಥಯೂಥಾಧಿಪತಿಯೂಥಾಧಿಪಾವಿಮೌ ।
ಇತ್ಯೇತೇಽಸ್ಮದ್ಬಲೇಽನ್ಯೇ ಚ ಶೂರಾಃ ಸ್ವೈಃ ಸ್ವೈಃ ಬಲೈರ್ವೃತಾಃ ॥ ೩೨
ಪರಸೈನ್ಯೇಽಧಿಕಾಃ ಸಂತಿ ತಥಾಪ್ಯಸ್ಮದ್ಬಲಸ್ಯ ತೇ ।
ನ ಪರ್ಯಾಪ್ತಾ ಭವಿಷ್ಯಂತಿ ಸಪ್ರಸಾದೇ ಮಹೇಶ್ವರೇ ॥ ೩೩
ಇತಿ ಯಾವತ್ ಸುನೀಥಂ ತಂ ಬ್ರವೀತಿ ಸ ಮಯಾಸುರಃ ।
ಶ್ರುತಶರ್ಮಪಿತುಃ ಪಾರ್ಶ್ವಾದ್ದೂತೋಽನ್ಯಸ್ತಾವದಾಯಯೌ ॥ ೩೪
ಸ ಚೋವಾಚ ತ್ರಿಕೂಟಾಧಿಪತಿರೇವಂ ಬ್ರವೀತಿ ವಃ ।
ಸಂಗ್ರಾಮೋ ನಾಮ ಶೂರಾಣಾಮುತ್ಸವೋ ಹಿ ಮಹಾನಯಮ್ ॥ ೩೫
ತಸ್ಯೈಷಾ ಸಂಕಟಾ ಭೂಮಿಸ್ತಸ್ಮಾದಾಗಮ್ಯತಾಮಿತಃ ।
ಯಾಮಃ ಕಲಾಪಗ್ರಾಮಾಖ್ಯಂ ಪ್ರದೇಶಂ ವಿಪುಲಾಂತರಮ್ ॥ ೩೬

೩೭. ಇದನ್ನು ಕೇಳಿ ಸುನೀಥಾದಿಗಳು ಆಗಬಹುದೆಂದು ಹೇಳಿ ಸೂರ್ಯಪ್ರಭನೊಡನೆ ಸೈನ್ಯವನ್ನೂ ಹೊರಡಿಸಿಕೊಂಡು ಕಲಾಪಗ್ರಾಮಕ್ಕೆ ಹೊರಟರು.

೩೮. ಸಮರಕ್ಕೆ ಸಜ್ಜುಗೊಂಡಿದ್ದ ಶ್ರುತಶರ್ಮಾದಿಗಳೂ ಕೂಡ, ವಿದ್ಯಾಧರ ಸೈನ್ಯದೊಡನೆ ಕೂಡಿ ಅದೇ ಜಾಗಕ್ಕೆ ಬಂದರು.

೩೯. ಸೂರ್ಯ ಪ್ರಭಾದಿಗಳು ಶ್ರುತಶರ್ಮನ ಸೈನ್ಯದಲ್ಲಿದ್ದ ಆನೆಗಳನ್ನು ಕಂಡು ತಮ್ಮ ಆನೆಯ ಸೈನ್ಯವನ್ನು ವಿಮಾನದ ಮೂಲಕ ತರಿಸಿಕೊಂಡರು.

೪೦. ನಂತರ ಶ್ರುತಶರ್ಮನ ಸೇನಾಪತಿಯಾದ ವಿದ್ಯಾಧರಶ್ರೇಷ್ಠದಾಮೋದರನು ಸೇನೆಯಲ್ಲಿ ಮಹಾಸೂಚಿ ಎಂಬ ವ್ಯೂಹವನ್ನು ರಚಿಸಿದನು.

೪೧. ಅದರ ಬದಿಯಲ್ಲಿ ಮಂತ್ರಿಸಹಿತನಾದ ಶ್ರುತಶರ್ಮನೇ ನಿಂತನು. ಮುಂದೆ ದಾಮೋದರನಿದ್ದನು. ಉಳಿದೆಡೆ ಬೇರೆ ಮಹಾರಥರು ನಿಂತರು.

೪೨. ಸೂರ್ಯಪ್ರಭನ ಸೈನ್ಯವನ್ನು ಅವನ ಸೇನಾಪತಿಯಾದ ಪ್ರಭಾಸನು ಅರ್ಧಚಂದ್ರಾಕಾರದಲ್ಲಿ ವ್ಯವಸ್ಥೆಗೊಳಿಸಿ ಅದರ ನಡುವೆ ತಾನೇ ನಿಂತನು.

೪೩. ಅದರ (ಅರ್ಧ ಚಂದ್ರಾಕಾರವ್ಯೂಹದ) ಕೋಣಗಳಲ್ಲಿ ಕುಂಜರ ಕುಮಾರನೂ ಪ್ರಹಸ್ತನೂ ಇದ್ದರು. ಸುನೀಥ, ಸೂರ್ಯಪ್ರಭ ಮುಂತಾದವರು ಹಿಂಬದಿಯಲ್ಲಿ ನಿಂತರು.

---

ಏತಚ್ಛ್ರುತ್ವಾ ಸುನೀಥಾದ್ಯಾಃ ಸೈನ್ಯೈಃ ಸಹ ತಥೇತಿ ತೇ ।
ಸರ್ವೇ ಕಲಾಪಗ್ರಾಮಂ ತಂ ಸೂರ್ಯಪ್ರಭಯುತಾ ಯಯುಃ ॥ ೩೭
ಶ್ರುತಶರ್ಮಾದಯಸ್ತೇಽಪಿ ತಥೈವ ಸಮರೋನ್ಮುಖಾಃ ।
ತಮೇವ ದೇಶಮಾಜಗ್ಮುರ್ವಿದ್ಯಾಧರಬಲೈರ್ವೃತಾಃ ॥ ೩೮
ಶ್ರುತಶರ್ಮಬಲೇ ದೃಷ್ಟ್ವಾ ಗಜಾನ್ ಸೂರ್ಯಪ್ರಭಾದಯಃ ।
ಆನಾಯಯನ್ ಗಜಾನೀಕಂ ಸ್ವಂ ವಿಮಾನಾಧಿರೋಪಿತಮ್ ॥ ೩೯
ತತಃ ಸೇನಾಪತಿಶ್ಚಕ್ರೇ ಸೇನಾಯಾಂ ಶ್ರುತಶರ್ಮಣಃ ।
ದಾಮೋದರೋ ಮಹಾಸೂಚಿವ್ಯೂಹಂ ವಿದ್ಯಾಧರೋತ್ತಮಃ ॥ ೪೦
ತತ್ರ ಪಾರ್ಶ್ವೇ ಸ್ವಯಂ ತಸ್ಥೌ ಶ್ರುತಶರ್ಮಾ ಸಮಂತ್ರಿಕಃ ।
ಅಗ್ರೇ ದಾಮೋದರಶ್ಚಾಸೀದನ್ಯತ್ರಾನ್ಯೇ ಮಹಾರಥಾಃ ॥ ೪೧
ಸೈನ್ಯೇ ಸೂರ್ಯಪ್ರಭಸ್ಯಾಪಿ ಪ್ರಭಾಸೋಽನೀಕಿನೀಪತಿಃ ।
ಅರ್ಧಚಂದ್ರಂ ವ್ಯಧಾದ್ವ್ಯೂಹಂ ಮಧ್ಯೇ ತಸ್ಯಾಭವತ್ ಸ್ವಯಮ್ ॥ ೪೨
ಸ ಕುಂಜರಕುಮಾರಶ್ಚ ಪ್ರಹಸಶ್ಚಾಸ್ಯ ಕೋಣಯೋಃ ।
ಸೂರ್ಯಪ್ರಭಸುನೀಥಾದ್ಯಾಸ್ತಸ್ಥುಃ ಸರ್ವೇಽತ್ರ ಪೃಷ್ಠತಃ ॥ ೪೩

೪೪. ಸುಮೇರುವೂ ಸುವಾಸಕುಮಾರನೂ ಪಕ್ಕದಲ್ಲೇ ನಿಂತಿರಲಾಗಿ, ಎರಡೂ ಸೈನ್ಯಗಳ ರಣಕಹಳೆಗಳು ಮೊಳಗಿದವು.

೪೫. ಅಷ್ಟರಲ್ಲಿ ಆಕಾಶವು ಕಾಳಗವನ್ನು ನೋಡಲು ಬಂದ ಇಂದ್ರಾದಿ ದೇವತೆಗಳಿಂದಲೂ, ಲೋಕಪಾಲರಿಂದಲೂ, ಅಪ್ಸರೆಯರ ಕೂಡ ಬಂದವರಿಂದಲೂ ತುಂಬಿಹೋಯಿತು.

೪೬. ಅಂತೆಯೇ ಪಾರ್ವತೀಸಹಿತನಾದ ಪರಮೇಶ್ವರನೂ ಬಂದನು. ಆತನೊಡನೆ ದೇವತಾಗಣಗಳೂ, ಭೂತಗಳೂ, ಮಾತೃಗಣಗಳೂ ಇದ್ದವು.

೪೭. ಭಗವಾನ್ ಬ್ರಹ್ಮನೂ ಸಾವಿತ್ರ್ಯಾದಿ ದೇವತೆಗಳೊಡನೆ ಕೂಡಿ ಅಲ್ಲಿಗೆ ಆಗಮಿಸಿದನು. ಬ್ರಹ್ಮನು ವೇದಮೂರ್ತಿಗಳಿಂದಲೂ, ಶಾಸ್ತ್ರಗಳಿಂದಲೂ, ಮಹರ್ಷಿಗಳಿಂದಲೂ ಕೂಡಿದ್ದನು.

೪೮. ಪಕ್ಷಿರಾಜನನ್ನೇ ರಥವಾಗಿ ಉಳ್ಳ ಚಕ್ರಾಯುಧಧಾರಿಯಾದ ಹರಿಯೂ ಕೂಡ, ಲಕ್ಷ್ಮೀ ಕೀರ್ತಿ ಮತ್ತು ಜಯಾದೇವಿಯರೊಡಗೂಡಿ ಅಲ್ಲಿಗೆ ಬಂದನು.

೪೯. ಭಾರ್ಯಾಸಹಿತನಾಗಿ ಕಶ್ಯಪಮಹರ್ಷಿಯೂ, ಆದಿತ್ಯರೂ, ವಸುಗಳೂ, ಯಕ್ಷ ರಾಕ್ಷಸ, ನಾಗೇಂದ್ರರೂ, ಪ್ರಹ್ಲಾದಾದಿ ಅಸುರರೂ ಬಂದರು.

೫೦. ಹೀಗೆ ನಭೋಭಾಗವು ಇವರಿಂದ ತುಂಬಿರಲಾಗಿ ಎರಡೂ ಸೇನೆಗಳ ನಡುವೆ ನಡೆದ ಶಸ್ತ್ರಗಳ ತಿಕ್ಕಾಟದಿಂದ ದಾರುಣವಾದ ಮಹಾನಾದವನ್ನು ಹೊಮ್ಮಿಸುತ್ತಾ ಸಂಗ್ರಾಮವು ಆರಂಭವಾಯಿತು.

---

ಸುಮೇರೌ ತತ್ಸಮೀಪಸ್ಥೇ ಸಸುವಾಸಕುಮಾರಕೇ ।
ಆಹನ್ಯಂತ ರಣಾತೋದ್ಯಾನ್ಯುಭಯೋರಪಿ ಸೈನ್ಯಯೋಃ ॥ ೪೪
ತಾವಚ್ಚ ಗಗನಂ ದೇವೈಃ ಸಂಗ್ರಾಮಂ ದ್ರಷ್ಟುಮಾಗತೈಃ ।
ಸೇಂದ್ರೈಃ ಸಲೋಕಪಾಲೈಶ್ಚ ಸಾಪ್ಸರಸ್ಕೈರಪೂರ್ಯತ ॥ ೪೫
ಆಯಯೌ ಚಾತ್ರ ವಿಶ್ವೇಶಃ ಶಂಕರಃ ಪಾರ್ವತೀಯುತಃ ।
ದೇವತಾಭಿರ್ಗಣೈರ್ಭೂತೈರ್ಮಾತೃಭಿಶ್ಚಾಪ್ಯನುದ್ರುತಃ ॥ ೪೬
ಆಗಾಚ್ಚ ಭಗವಾನ್ ಬ್ರಹ್ಮಾ ಸಾವಿತ್ರ್ಯಾದಿಭಿರನ್ವಿತಃ ।
ಮೂರ್ತೈರ್ವೇದೈಶ್ಚ ಶಾಸ್ತ್ರೈಶ್ಚ ನಿಖಿಲೈಶ್ಚ ಮಹರ್ಷಿಭಿಃ ॥ ೪೭
ಆಜಗಾಮ ಚ ದೇವೀಭಿರ್ಲಕ್ಷ್ಮೀ ಕೀರ್ತಿಜಯಾದಿಭಿಃ ।
ಧೃತಚಕ್ರಾಯುಧೋ ದೇವಃ ಪಕ್ಷಿರಾಜರಥೋ ಹರಿಃ ॥ ೪೮
ಸಭಾರ್ಯಃ ಕಾಶ್ಯಪೋಽಪ್ಯಾಗಾದಾದಿತ್ಯಾ ವಸವೋಽಪಿ ಚ ।
ಯಕ್ಷರಾಕ್ಷಸನಾಗೇಂದ್ರಾಃ ಪ್ರಹ್ಲಾದಾದ್ಯಾಃ ತಥಾಸುರಾಃ ॥ ೪೯
ತೈರಾವೃತೇ ನಭೋಭಾಗೇ ಶಸ್ತ್ರಸಂಪಾತದಾರುಣಃ ।
ಪ್ರಾವರ್ತತ ಮಹಾನಾದಃ ಸಂಗ್ರಾಮಃ ಸೇನಯೋಸ್ತಯೋಃ ॥ ೫೦

೫೧–೫೨. ದಶದಿಕ್ಕುಗಳನ್ನೂ ಬಾಣಗಳ ಜಾಲಗಳೆಂಬ ಮೋಡಗಳು ಕವಿಯಲಾಗಿ, ಬಾಣಗಳ ಪರಸ್ಪರ ತಾಕಲಾಟದಿಂದ ಮೇಲೆದ್ದ ಬೆಂಕಿಯ ಕಿಡಿಗಳು ಮಿಂಚುತ್ತಿರಲಾಗಿ ಶಸ್ತ್ರಾಘಾತವಾಗಿ ಆನೆ ಕುದುರೆಗಳ ದೇಹಗಳ ಗಾಯಗಳಿಂದ ಸುರಿದ ರಕ್ತಧಾರೆಗಳಿಂದ ಯೋಧರ ಶರೀರಗಳೆಂಬ ಮೊಸಳೆಗಳಿಂದ ತುಂಬಿದ ರಕ್ತದ ನದೀಪ್ರವಾಹವೇ ಹರಿಯಲಾರಂಭಿಸಿತು.

೫೩. ಆ ರಕ್ತದ ಹೊಳೆಯಲ್ಲಿ ನರ್ತಿಸುವ, ಈಜುವ, ಬೊಬ್ಬೆಯಿಡುವ ಶೂರರಿಗೆ, ನರಿಗಳಿಗೆ ಮತ್ತು ಭೂತಗಳಿಗೆಲ್ಲ ಆ ಘೋರಯುದ್ಧವು ಹಬ್ಬವೇ ಆಯಿತು.

೫೪. ಭಯಂಕರ ಸಂಗ್ರಾಮವು ಒಂದು ರೀತಿಯಲ್ಲಿ ಕೊನೆಗೊಂಡಿತು. ಅಷ್ಟರಲ್ಲಿ ಅಸಂಖ್ಯಾತ ಸೈನಿಕರು ಹತರಾಗಿದ್ದರು. ಸ್ವ ಪಕ್ಷ ಮತ್ತು ವಿಪಕ್ಷಗಳ ಸೈನ್ಯ ವಿಭಾಗಗಳು ಸ್ಪಷ್ಟವಾಗಿ ಗೋಚರಿಸಲಾರಂಭಿಸಿತು.

೫೫. ಸುಮೇರುವಿನಿಂದ ಆರಂಭಿಸಿ ಸೂರ್ಯ ಪ್ರಭಾದಿಗಳೊಡನೆ ಯುದ್ಧ ನಿರತನಾದ ಶತ್ರುವೀರರು ಹೆಸರು ಹಿಡಿದು ಕರೆದು ದ್ವಂದ್ವಯುದ್ಧದಲ್ಲಿ ತೊಡಗಿದರು.

೫೬. ಮೊದಲು ನರಪತಿ ಸುಬಾಹುವಿಗೂ ವಿದ್ಯಾಧರ ರಾಜ ಅಟ್ಟಹಾಸನಿಗೂ ದ್ವಂದ್ವಯುದ್ಧವೇರ್ಪಟ್ಟಿತು.

೫೭. ಬಹುಕಾಲ ಯುದ್ಧ ನಡೆದು ಅನೇಕ ಬಾಣಗಳು ಸುಬಾಹುವಿಗೆ ನಾಟಿರಲಾಗಿ ಅಟ್ಟಹಾಸನು ಅರ್ಧಚಂದ್ರಾಕಾರದ ಆಯುಧದಿಂದ ಸುಬಾಹುವಿನ ತಲೆಯನ್ನು ತರಿದನು.

---

ದಿಕ್ಷು ಬಾಣಜಾಲೇನ ಘನೇನಾಚ್ಛಾದಿತೇ ತದಾ ।
ಅನ್ಯೋನ್ಯಶರಸಂಘರ್ಷಜಾತಾನಲತಡಿಲ್ಲತೇ ॥ ೫೧
ಶಸ್ತ್ರಕ್ಷತಗಜಾಶ್ವೌಘರಕ್ತಧಾರಾವಪೂರಿತಾಃ ।
ವೀರಕಾಯಮಹಾಗ್ರಾಹಾ ನಿರ್ಯಯುಃ ಶೋಣಿತಾಪಗಾಃ ॥ ೫೨
ನೃತ್ಯತಾಂ ತರತಾಂ ರಕ್ತೇ ನದತಾಂ ಚೋತ್ಸವಾಯ ಸಃ ।
ಶೂರಾಣಾಂ ಫೇರವಾಣಾಂ ಚ ಭೂತಾನಾಂ ಚಾಭವದ್ರಣಃ ॥ ೫೩
ಶಾಂತೇ ತುಮುಲಸಂಗ್ರಾಮೇ ನಿಹತಾಸಂಖ್ಯಸೈನಿಕೇ ।
ಲಕ್ಷ್ಯಮಾಣೇ ವಿಭಾಗೇ ಚ ಶನೈಃ ಸ್ವಪರಸೈನ್ಯಯೋಃ ॥ ೫೪
ಪ್ರತಿಪಕ್ಷಪ್ರವೀರಾಣಾಂ ಪ್ರಯುದ್ಧಾನಾಂ ಸುಮೇರುತಃ ।
ನಾಮಾದೌ ಶ್ರೂಯಮಾಣೇ ಚ ಕ್ರಮಾತ್ ಸೂರ್ಯಪ್ರಭಾದಿಭಿಃ ॥ ೫೫
ಪೂರ್ವಂ ಸುಬಾಹೋರ್ನೃಪತೇರ್ವಿದ್ಯಾಧರಪತೇಸ್ತಥಾ ।
ಅಟ್ಟಹಾಸಾಭಿಧಾನಸ್ಯ ದ್ವಂದ್ವಯುದ್ಧಮಭೂದ್ದ್ವಯೋಃ ॥ ೫೬
ಸುಚಿರಂ ಯುಧ್ಯಮಾನಸ್ಯ ತಸ್ಯ ವಿದ್ಧಸ್ಯ ಸಾಯಕೈಃ ।
ಅಟ್ಟಹಾಸೋಽರ್ಧಚಂದ್ರೇಣ ಸುಬಾಹೋರಚ್ಛಿನಚ್ಛಿರಃ ॥ ೫೭

೫೮. ಸುಬಾಹುವಿನ ಸಾವನ್ನು ಕಂಡು ಕ್ರೋಧಾವಿಷ್ಟನಾದ ಮುಷ್ಟಿಕನು ಮುನ್ನುಗ್ಗಿ ಬಂದನು. ಅವನನ್ನು ಕೂಡ ಅಟ್ಟಹಾಸನು ಎದೆಗೆ ಬಾಣವನ್ನು ಗುರಿಯಿಟ್ಟು ಉರುಳಿಸಿದನು.

೫೯. ಯುದ್ಧದಲ್ಲಿ ಮುಷ್ಟಿಕನು ಹತನಾದದ್ದನ್ನು ಕಂಡು ಪ್ರಲಂಬನೆಂಬ ರಾಜನು ಕ್ರೋಧದಿಂದ ಮೇಲೇರಿ ಬಂದು ಬಾಣಗಳ ಮಳೆ ಸುರಿಸುತ್ತ ಅಟ್ಟಹಾಸನನ್ನು ಎದುರಿಸಿದನು.

೬೦. ಆದರೆ ಅಟ್ಟಹಾಸನು ಅವನ ಸೈನ್ಯವನ್ನು ಮರ್ಮಸ್ಥಾನದಲ್ಲೇ ಹೊಡೆ ಹೊಡೆದು (ಬಲಕುಂದಿಸಿ) ವೀರನಾದ ಪ್ರಲಂಬನನ್ನೇ ರಥದ ಹಿಂದೆ ಸತ್ತು ಬೀಳುವಂತೆ ಮಾಡಿದನು.

೬೧. ಪ್ರಲಂಬನು ಸತ್ತುಬಿದ್ದುದನ್ನು ನೋಡಿ ಮೋಹನನೆಂಬ ರಾಜನು ಅಟ್ಟಹಾಸನನ್ನು ಸುತ್ತುವರಿದು ಬಾಣಗಳಿಂದಲೇ ಎದಿರೇಟು ನೀಡಲಾರಂಭಿಸಿದನು.

೬೨. ಬಳಿಕ ಅಟ್ಟಹಾಸನು ಮೋಹನರಾಜನ ಬಿಲ್ಲನ್ನು ಮುರಿದು ಸಾರಥಿಯನ್ನು ಮುಗಿಸಿ, ಬಲವಾದ ಏಟುಗಳಿಂದ ಅವನನ್ನು ಹೊಡೆದುರುಳಿಸಿದನು.

೬೩. ಅಟ್ಟಹಾಸನು ಬಹುಚಾತುರ್ಯದಿಂದ ನಾಲ್ವರು ಎದುರಾಳಿಗಳನ್ನು ಬೀಳಿಸಿದ್ದನ್ನು ನೋಡಿ ಶ್ರುತಶರ್ಮನ ಸೈನ್ಯವು ಜಯ ತಮ್ಮದೇ ಎಂದುಕೊಂಡು ಸಂತೋಷದಿಂದ ಕೇಕೆ ಹಾಕಿತು.

೬೪. ಅದನ್ನು ಕಂಡು ಸೂರ್ಯಪ್ರಭನ ಗೆಳೆಯನಾದ ಹರ್ಷನು ಕೋಪಗೊಂಡು ಸೇನಾ ಸಮೇತನಾಗಿದ್ದ ಅಟ್ಟಹಾಸನನ್ನು ತನ್ನ ಸೈನ್ಯದೊಡನೆ ಎದುರಿಸಿದನು.

---

ದೃಷ್ಟ್ವಾ ಸುಬಾಹುಂ ನಿಹತಂ ಮುಷ್ಟಿಕೋಽಭ್ಯಾಪತತ್ಕ್ರುಧಾ ।
ಸೋಽಪಿ ತೇನಾಟ್ಟಹಾಸೇನ ಹೃದಿ ಬಾಣಹತೋಽಪತತ್ ॥ ೫೮
ಮುಷ್ಟಿಕೇ ನಿಹತೇ ಕ್ರುದ್ಧಃ ಪ್ರಲಂಬೋ ನಾಮ ಭೂಪತಿಃ ।
ಅಭಿಧಾವ್ಯಾಟ್ಟಹಾಸಂ ತಂ ಶರವರ್ಷೈರಯೋಧಯತ್ ॥ ೫೯
ಅಟ್ಟಹಾಸೋಽಪಿ ತತ್ಸೈನ್ಯಂ ಹತ್ವಾ ಹತ್ವಾ ಚ ಮರ್ಮಣಿ ।
ಪ್ರಲಂಬಮಪಿ ತಂ ವೀರಂ ರಥಪೃಷ್ಠೇ ನ್ಯಪಾತಯತ್ ॥ ೬೦
ವೀಕ್ಷ್ಯ ಪ್ರಲಂಬಂ ನಿಹತಂ ಮೋಹನೋ ನಾಮ ಭೂಪತಿಃ ।
ಸನ್ನಿಪತ್ಯಾಟ್ಟಹಾಸಂ ತಂ ತಾಡಯಾಮಾಸ ಸಾಯಕೈಃ ॥ ೬೧
ತತೋಽಟ್ಟಹಾಸಸ್ತಂ ಛಿನ್ನಕೋದಂಡಂ ಹತಸಾರಥಿಮ್ ।
ದೃಢಪ್ರಹಾರಾಭಿಹತಂ ಪಾತಯಾಮಾಸ ಮೋಹನಮ್ ॥ ೬೨
ದೃಷ್ಟ್ವಾಟ್ಟಹಾಸೇನ ಹತಾಂಶ್ಚತುರಶ್ಚತುರೇಣ ತಾನ್ ।
ಶ್ರುತಶರ್ಮಬಲಂ ಹರ್ಷಾದುನ್ನನಾದ ಜಯೋನ್ಮುಖಮ್ ॥ ೬೩
ತದ್ದೃಷ್ಟ್ವಾ ಕುಪಿತೋ ಹರ್ಷಃ ಸೂರ್ಯಪ್ರಭವಯಸ್ಯಕಃ ।
ಸಸೈನ್ಯಮಭ್ಯಧಾವತ್ತಮಟ್ಟಹಾಸಂ ಸಸೈನಿಕಃ ॥ ೬೪

೬೫–೬೬. ತನ್ನ ಕೂರಂಬುಗಳಿಂದ ಅವನ ಬಾಣಗಳನ್ನು ತಪ್ಪಿಸಿಕೊಂಡು ತನ್ನ ಸೈನ್ಯಬಲದಿಂದ ಅವನ ಸೈನ್ಯವನ್ನು ಬಲಿಹಾಕಿ, ಸಾರಥಿಯನ್ನು ಕೊಂದು ಮತ್ತೆರಡು ಮೂರು ಧನುಸ್ಸುಗಳನ್ನು ಧ್ವಜ ಸಹಿತವಾಗಿ ಕತ್ತರಿಸಿ ಹರ್ಷನು ಅಟ್ಟಹಾಸನ ಶಿರಸ್ಸನ್ನು ತನ್ನ ಶರಗಳಿಂದ ಬೇಧಿಸಿದಾಗ ರಕ್ತಕಾರುತ್ತಾ ಅವನು ರಥದಿಂದ ಭೂಮಿಗೊರಗಿದನು.

೬೭. ಹೀಗೆ ಭಯಂಕರವಾದ ರೀತಿಯಲ್ಲಿ ಅಟ್ಟಹಾಸನ ವಧೆಯಾಗಲಾಗಿ ಆ ಸಂಗ್ರಾಮ ಭೂಮಿಯಲ್ಲಿ ಮಹಾ ತಳಮಳವುಂಟಾಯಿತು. ಏಕೆಂದರೆ ಅಷ್ಟು ಹೊತ್ತಿಗೆ ಎರಡೂ ಕಡೆಯ ಸೈನ್ಯಗಳೂ ಅರ್ಧಭಾಗಕ್ಕಿಳಿದಿದ್ದುವು.

೬೮. ಹತರಾದ ಆನೆ, ಕುದುರೆ, ಪದಾತಿಗಳಂತೂ ಬಿದ್ದರು. ಆದರೆ ಆ ಕಡುಕಾಳಗದಲ್ಲಿ ಎದ್ದು ನಿಂತವರೆಂದರೆ ರುಂಡವಿಲ್ಲದ ಮುಂಡಗಳು ಮಾತ್ರ

೬೯. ಆಗ ವಿಕೃತದಂಷ್ಟ್ರನೆಂಬ ವಿದ್ಯಾಧರನು ಹರ್ಷನ ಬಳಿ ಸಾರಿ ಅಟ್ಟಹಾಸನ ನಿಧನಕ್ಕೆ ಪ್ರತಿಯಾಗಿ ಅವನ ಮೇಲೆ ಬಾಣಗಳನ್ನು ಚೆಲ್ಲಾಡಿದನು.

೭೦. ಹರ್ಷನು ಅವನ ಶರಗಳನ್ನು ಹಾಗೆಯೇ ಪಕ್ಕಕ್ಕೆ ಸರಿಸಿ, ಧ್ವಜ, ಸಾರಥಿ, ರಥಾಶ್ವಗಳನ್ನು ಧ್ವಂಸಮಾಡಿ, ಮನೋಹರವಾದ ಕುಂಡಲಗಳಿಂದ ಕೂಡಿದ ವಿದ್ಯಾಧರನ ತಲೆಯನ್ನು ಕಡಿದುರುಳಿಸಿದನು.

೭೧. ಈ ರೀತಿಯಾಗಿ ವಿಕೃತದಂಷ್ಟ್ರನು ಸಾಯಲಾಗಿ ಚಕ್ರವಾಲನೆಂಬ ವಿದ್ಯಾಧರರಾಜನು ಕೋಪದಿಂದ ಹರ್ಷನ ಮೇಲೇರಿ ಬಂದನು.

---

ವಿದಾರ್ಯ ಚ ಶರೈಸ್ತಸ್ಯ ಶರಾನ್ಸೈನ್ಯಂ ನಿಹತ್ಯ ಚ ।
ವ್ಯಾಪಾದ್ಯ ಸಾರಥಿಂ ದ್ವಿಸ್ತ್ರಿರ್ಧನುಶ್ಛಿತ್ವಾ ಚ ಸಧ್ವಜಮ್ ॥ ೬೫
ಹರ್ಷೋ ಯದಟ್ಟಹಾಸಸ್ಯ ನಿರ್ಬಿಭೇದ ಶರೈಃ ಶಿರಃ ।
ತೇನಾಸೌ ರುಧಿರೋದ್ಗಾರೀ ನಿಪಪಾತ ರಥಾದ್ಭುವಿ ॥ ೬೬
ಅಟ್ಟಹಾಸೇ ಹತೇ ತಾದೃಕ್ಕ್ಷೋಭೋಽಭೂದತ್ರ ಸಂಯುಗೇ ।
ಕ್ಷಣಾದರ್ಧಾವಶೇಷಂ ತದ್ಯೇನ ಜಜ್ಞೇ ಬಲದ್ವಯಮ್ ॥ ೬೭
ನಿಪೇತುರೇವ ನಿಹತಾಸ್ತತ್ರಾಶ್ವಗಜಪತ್ತಯಃ ।
ರಣಮೂರ್ಧನಿ ಚೋತ್ತಸ್ಥುಃ ಕಬಂಧಾ ಏವ ಕೇವಲಮ್ ॥ ೬೮
ತತೋ ವಿಕೃತದಂಷ್ಟ್ರಾಖ್ಯೋ ಹರ್ಷಂ ವಿದ್ಯಾಧರೇಶ್ವರಃ ।
ಏತ್ಯಾಟ್ಟಹಾಸನಿಧನಕ್ರುದ್ಧೋ ಬಾಣೈರವಾಕಿರನ್ ॥ ೬೯
ಹರ್ಷೋಽಪಿ ತಸ್ಯ ನಿರ್ಧೂಯ ಶರಾನ್ಸಧ್ವಜಸಾರಥೀನ್ ।
ಹತ್ವಾ ರಥಾಶ್ವಾಂಶ್ಚಿಚ್ಛೇದ ಶಿರೋ ಲಲಿತಕುಂಡಲಮ್ ॥ ೭೦
ಹತೇ ವಿಕೃತದಂಷ್ಟ್ರೇ ತು ಚಕ್ರವಾಲ ಇತಿ ಶ್ರುತಃ ।
ರಾಜಾ ವಿದ್ಯಾಧರೋ ಹರ್ಷಮಭ್ಯಧಾವದಮರ್ಷಿತಃ ॥ ೭೧

೭೨. ಪ್ರತಿಯುದ್ಧ ಹೂಡಿದ ಹರ್ಷನ ಬಿಲ್ಲನ್ನು ಚಕ್ರವಾಲನು ಹಲವು ಬಾರಿ ತುಂಡರಿಸಿದನು. ನಂತರ ಉಳಿದ ಆಯುಧಗಳೂ ಮುರಿದು ಬಿದ್ದು ಆಯಾಸಗೊಂಡಿದ್ದ ಅವನನ್ನು ಚಕ್ರವಾಲನು ಕೊಂದುಬಿಟ್ಟನು.

೭೩. ಹರ್ಷನ ಸಾವಿನಿಂದ ಕೋಪಗೊಂಡ ಪ್ರಮಾಥನೆಂಬ ನೃಪತಿಯು ಅವನೊಡನೆ ಯುದ್ಧಕ್ಕೆ ನಿಂತನು. ಅವನೂ ಕೂಡ ಚಕ್ರವಾಲನಿಗೆ ಆಹುತಿಯಾದನು.

೭೪–೭೫. ಇದೇ ರೀತಿ ಇನ್ನೂ ನಾಲ್ವರು ರಾಜಮುಖ್ಯರು, ಕಂಕಟ, ವಿಶಾಲ, ಪ್ರಚಂಡ ಮತ್ತು ಅಂಕುರಿ ಎಂಬುವರು ಒಬ್ಬೊಬ್ಬರಾಗಿ ಬಂದು ಚಕ್ರವಾಲನಿಗೆ ಬಲಿಯಾದರು. ಅದನ್ನು ಕಂಡು ಕೋಪಗೊಂಡ ನಿರ್ಘಾತನೆಂಬ ರಾಜನು ಅವನನ್ನು ಎದುರಿಸಿದನು.

೭೬. ಒಬ್ಬರೊಡನೊಬ್ಬನು ಸಾಕಷ್ಟು ಸಮಯ ಹೋರಾಡಿದ ಚಕ್ರವಾಲ, ನಿರ್ಘಾತರು, ಪರಸ್ಪರ ರಥಗಳನ್ನು ಪುಡಿಪುಡಿಯಾಗಿಸಿ ಪಾದಚಾರಿಗಳಾಗಿ ನಿಂತರು.

೭೭. ಕತ್ತಿ, ಚಕ್ರಾಯುಧಗಳನ್ನು ಹಿಡಿದ ಅವರು ಕ್ರೋಧದಿಂದ ಹೋರಾಡುತ್ತ ಖಡ್ಗಗಳಿಂದ ಬಿದ್ದ ಹೊಡೆತದಿಂದ ತಲೆಗಳು ಸೀಳಿಹೋಗಿ ಒಟ್ಟಿಗೆ ಕೆಳಗುರುಳಿದರು.

೭೮. ಎರಡು ಪಕ್ಷಗಳಲ್ಲಿಯೂ ಸಾವನ್ನು ಕಂಡು ವಿಷಣ್ಣತೆಯುಂಟಾಯಿತು. ನಂತರ ಕಾಲಕಂಪನನೆಂಬ ವಿದ್ಯಾಧರೇಂದ್ರನು ಕಾದಾಡಲು ರಣರಂಗಕ್ಕೆ ಕಾಲಿಟ್ಟನು.

---

ಸ ಯುಧ್ಯಮಾನಮವಧೀದಸಕೃಚ್ಛಿನ್ನಕಾರ್ಮುಕಮ್ ।
ಚಕ್ರವಾಲೋ ಯುಧಿ ಶ್ರಾಂತಂ ಹರ್ಷಂ ಶೀರ್ಣಾಪರಾಯುಧಮ್ ॥ ೭೨
ತತ್ಕ್ರೋಧಾದೇತ್ಯ ನೃಪತಿಃ ಪ್ರಮಾಥಸ್ತಮಯೋಧಯತ್ ।
ಸೋಽಪ್ಯಹನ್ಯತ ತೇನಾಥ ಚಕ್ರವಾಲೇನ ಸಂಯುಗೇ ॥ ೭೩
ತಥೈವ ತೇನ ಚಾತ್ರಾನ್ಯೇಪ್ಯೇಕಶೋ ಧಾವಿತಾಃ ಕ್ರಮಾತ್ ।
ಚತ್ವಾರಶ್ಚಕ್ರವಾಲೇನ ರಾಜಮುಖ್ಯಾ ನಿಪಾತಿತಾಃ ॥ ೭೪
ಕಂಕಟಶ್ಚ ವಿಶಾಲಶ್ಚ ಪ್ರಚಂಡಶ್ಚಾಂಕುರೀ ತಥಾ ।
ತದ್ದೃಷ್ಟ್ವಾಭ್ಯಪತತ್ ಕ್ರೋಧಾನ್ನಿರ್ಘಾತೋ ನಾಮ ತಂ ನೃಪಃ ॥ ೭೫
ತೌ ಚಕ್ರವಾಲನಿರ್ಘಾತೌ ಯುಧ್ಯಮಾನೌ ಚಿರಂ ಕ್ರಮಾತ್ ।
ಅನ್ಯೋನ್ಯಚೂರ್ಣಿತರಥಾವಭೂತಾಂ ಪಾದಚಾರಿಣೌ ॥ ೭೬
ಅಸಿಚಕ್ರಧರೌ ದ್ವಾವತ್ಯಾಕೋಪಮಿಲಿತೌ ಚ ತೌ ।
ಖಡ್ಗಾಹತಿದ್ವಿಧಾಭೂತಮೂರ್ಧಾನೌ ಭುವಿ ಪೇತತುಃ ॥ ೭೭
ವಿಪನ್ನೌ ವೀಕ್ಷ್ಯ ತೌ ವೀರೌ ವಿಷಣ್ಣೇಽಪಿ ಬಲದ್ವಯೇ ।
ರಣಾಗ್ರಮಾಯಯೌ ವಿದ್ಯಾಧರೇಂದ್ರಃ ಕಾಲಕಂಪನಃ ॥ ೭೮

೭೯. ಅವನನ್ನು ಎದುರಿಸಲು ಪ್ರಕಂಪನನೆಂಬ ರಾಜಪುತ್ರನು ಮುಂದಾದನು. ಒಂದು ಕ್ಷಣದಲ್ಲೇ ಕಾಲಕಂಪನನು ಅವನನ್ನು ಹೊಡೆದುರುಳಿಸಿದನು.

೮೦–೮೧. ಅವನು ಬೀಳಲಾಗಿ ಮತ್ತೆ ಐದು ರಥಿಗಳು ಕಾಲಕಂಪನನನ್ನು ಎದುರಿಸಲು ಸಜ್ಜಾದರು. ಜಾಲಿಕ, ಚಂಡದತ್ತ ಗೋಪಕ, ಸೋಮಿಲ ಮತ್ತು ಪಿತೃಶರ್ಮ, ಈ ಐವರು ಒಮ್ಮೆಲೇ ಅವನ ಮೇಲೆ ಬಾಣಗಳ ಮಳೆಗರೆದರು. ಆದರೆ ಐವರನ್ನೂ ಕಾಲಕಂಪನನು ಒಟ್ಟಿಗೆ ರಥ ವಿಹೀನರನ್ನಾಗಿ ಮಾಡಿದನು.

೮೨. ನಂತರ ಒಟ್ಟಿಗೆ ಬಾಣಗಳನ್ನು ಬಿಟ್ಟು ಐವರನ್ನು ಯಮಲೋಕಕ್ಕೆ ಅಟ್ಟಿದನು. ಇದರಿಂದ ಖೇಚರರು ಹರ್ಷೋದ್ಗಾರ ಮಾಡಿದರು. ಮನುಜರೂ ಅಸುರರೂ ವಿಷಾದ ಹೊಂದಿದರು.

೮೩–೮೫. ನಂತರ, ಮತ್ತೆ ನಾಲ್ವರು ರಥಿಗಳು ಅವನನ್ನೆದುರಿಸಿದರು. ಉನ್ಮತ್ತಕ, ಪ್ರಶಸ್ತ ವಿಲಂಬಕ, ಮತ್ತು ಧುರಂಧರರು ಒಟ್ಟಿಗೆ ಮೇಲೇರಿ ಬಂದಾಗ ಲೀಲೆಯಿಂದಲೇ ಅವರನ್ನು ಕೊಂದನು. ನಂತರ ಧಾವಿಸಿ ಬಂದ ಅಪಾರಸೇನೆಗಳ ಒಡೆಯರೂ, ಮಹಾರಥಿಗಳೂ ಆದ ತೇಜಕ, ಗೇಯಿಕ, ವೇಗಿಲ, ಶಾಖಿಲ, ಭದ್ರಂಕರ ಮತ್ತು ದಂಡಿ ಎಂಬ ಮಹಾಸೈನ್ಯಗಳನ್ನು ಹೊಂದಿದ್ದ ಆರುಜನ ರಥಿಗಳನ್ನೂ ಕೊಂದು ಹಾಕಿದನು.

---

ರಾಜಪುತ್ರೋಽಭ್ಯಧಾವಚ್ಚ ತಂ ಪ್ರಕಂಪನನಾಮಕಃ ।
ಸ ಕಾಲಕಂಪನೇನಾತ್ರ ಕ್ಷಣಾತ್ತೇನ ನ್ಯಪಾತ್ಯತ ॥ ೭೯
ತಸ್ಮಿನ್ನಿಪತಿತೇ ತಸ್ಯ ಪಂಚಾನ್ಯೇಽಭ್ಯಪತನ್ ರಥಾ ಃ ।
ಜಾಲಿಕಶ್ಚಂಡದತ್ತಶ್ಚ ಗೋಪಕಃ ಸೋಮಿಲೋಽಪಿ ಚ ॥ ೮೦
ಪಿತೃಶರ್ಮಾ ಚ ಸರ್ವೇ ತೇ ಶರಾಂಸ್ತಸ್ಮಿನ್ ಸಹಾಮುಚನ್ ।
ಸ ತು ಪಂಚಾಪಿ ತಾನ್ಕಾಲಕಂಪನೋ ವಿರಥೀಕೃತಾನ್ ॥ ೮೧
ಜಘಾನ ಯುಗಪದ್ವಿದ್ಧ್ವಾನ್ನಾರಾಚೈರ್ಹೃದಿ ಪಂಚಭಿಃ ।
ಪ್ರಣೇದುಃ ಖೇಚರಾಸ್ತೇನ ವ್ಯಷೀದನ್ ಮನುಜಾಸುರಾಃ ॥ ೮೨
ತತೋಽಭ್ಯಧಾವನ್ನಪರೇ ಚತ್ವಾರಸ್ತಂ ರಥಾಃ ಸಮಮ್ ।
ಉನ್ಮತ್ತಕಃ ಪ್ರಶಸ್ತಶ್ಚ ವಿಲಂಬಕಧುರಂಧರಾಃ ॥ ೮೩
ಸ ತಾನಪ್ಯವಧೀತ್ಕಾಲಕಂಪನೋ ಲೀಲಯಾಖಿಲಾನ್ ।
ತಥೈವ ಧಾವಿತಾನನ್ಯಾನ್ ಷಡ್ರಥಾನ್ನಿಜಘಾನ ಸಃ ॥ ೮೪
ತೇಜಿಕಂ ಗೇಯಿಕಂ ಚೈವ ವೇಗಿಲಂ ಶಾಖಿಲಂ ತಥಾ ।
ಭದ್ರಂಕರಂ ದಂಡಿನಂ ಚ ಭೂರಿಸೈನ್ಯಾನ್ ಮಹಾರಥಾನ್ ॥ ೮೫

೮೬. ನಂತರ ಬಂದು ಸೇರಿದ ಇನ್ನೈದು ಜನರಾದ ಭೀಮ, ಭೀಷಣ, ಕುಂಭೀರ, ವಿಕಟ ಮತ್ತು ವಿಲೋಚನರನ್ನೂ ವಧೆ ಮಾಡಿದನು.

೮೭. ಕಾಲಕಂಪನನ ಲೀಲಾಜಾಲವಾದ ಈ ಕದನವನ್ನು ಕಂಡು ಸುಗಣನೆಂಬ ರಾಜಪುತ್ರನು ಅವನನ್ನೆದುರಿಸಿದನು.

೮೮. ಇಬ್ಬರೂ ಸಮಸಮವಾಗಿ ಕಾದಾಡತೊಡಗಿದರು. ಸಾರಥಿಗಳೂ ಕುದುರೆಗಳೂ ಕೆಳಗೆ ಬಿದ್ದು ಇಬ್ಬರೂ ರಥ ಹೀನರಾದರು.

೮೯. ನಂತರ ನಡೆದ ಖಡ್ಗ ಯುದ್ಧದಲ್ಲಿ ಪಾದಚಾರಿಯಾದ ಸುಗಣನನ್ನು ಪಾದಚಾರಿಯೇ ಆದ ಕಾಲಕಂಪನನು ನೆಲದ ಮೇಲೆ ಒರಗುವಂತೆ ಮಾಡಿದನು.

೯೦. ಅಲ್ಲಿಯವರೆಗೆ ವಿದ್ಯಾಧರರಿಗೂ ಮನುಷ್ಯರಿಗೂ ಯುದ್ಧ ಸಮವಾಗಿಯೇ ಇದ್ದಿತು. ಅಸಂಭಾವ್ಯವನ್ನು ನೋಡಿದ ಸೂರ್ಯದೇವನು ದುಗಡದಿಂದ ಕೂಡಿದನೋ ಎಂಬಂತೆ ಅಸ್ತಂಗತನಾದನು.

೯೧. ಆಗ ರಕ್ತದಿಂದ ತೊಯ್ದದ್ದು ಸಮರಾಂಗಣ ಮಾತ್ರವಲ್ಲ, ಸಂಧ್ಯಾಸಾನ್ನಿಧ್ಯದಿಂದ ಆಕಾಶವೂ ರಕ್ತವರ್ಣವಾಯಿತು.

೯೨. ಆಗ ಭೂತಗಳು ಮುಂಡಗಳೊಡನೆ ಕುಣಿಯುತ್ತಿರಲಾಗಿ ಎರಡೂ ಕಡೆಯವರು ಯದ್ಧವನ್ನು ನಿಲ್ಲಿಸಿ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

---

ಅಪರಾಂಶ್ಚ ಪುನಃ ಪಂಚ ಸೋಽವಧೀತ್ ಮಿಲಿತಾನ್ ಯುಧಿ ।
ಭೀಮಭೀಷಣಕುಂಭೀರವಿಕಟಾನ್ಸವಿಲೋಚನಾನ್ ॥ ೮೬

ತದ್ದೃಷ್ಟ್ವಾ ಕದನಂ ಕಾಲಕಂಪನೇನ ಕೃತಂ ರಣೇ ।
ಅಧಾವತ್ ಸುಗಣೋ ನಾಮ ರಾಜಪುತ್ರೋಽಸ್ಯ ಸಂಮುಖಃ ॥ ೮೭

ಸ ತೇನ ತಾವದ್ವಿರಥೇ ಸಮಂ ಯುದ್ಧಮುಭಾವಪಿ ।
ಹತಾಶ್ವಸಾರಥೀ ಯಾವದ್ವಿರಥೌ ತೌ ಬಭೂವತುಃ ॥ ೮೮

ತತಸ್ತಂ ಖಡ್ಗಯುದ್ಧೇನ ಸುಗಣಂ ಪಾದಚಾರಿಣಮ್ ।
ಸ ಕಾಲಕಂಪನಃ ಪಾದಚಾರ್ಯೇವ ಭುವಿ ಜಘ್ನಿವಾನ್ ॥ ೮೯

ತಾವಚ್ಚ ಮಾನುಷೈರ್ವಿದ್ಯಾಧರಾಣಾಂ ಸಮಮಾಹವಮ್ ।
ಅಸಂಭಾವ್ಯಂ ವಿಲೋಕ್ಯೇವ ಖಿನ್ನೋಽಸ್ತಂ ಪ್ರಯಯೌ ರವಿಃ ॥ ೯೦

ರಕ್ತಾಂಬುಪೂರಭರಿತಂ ನ ಪರಂ ಸಮರಾಂಗಣಮ್ ।
ಯಾವತ್ ಸಂಧ್ಯಾಕೃತಪದಂ ಯಯೌ ವ್ಯೋಮಾಪಿ ಶೋಣತಾಮ್ ॥ ೯೧

ಕಬಂಧೈಃ ಸಹ ಭೂತೇಷು ಸಂಧ್ಯಾನೃತ್ತೋದ್ಯತೇ ಪಥಿ ।
ಸಂಹೃತ್ಯ ಯುದ್ಧಂ ಯಯತುಃ ಸ್ವನಿವೇಶಾಯ ತೇ ಬಲೇ ॥ ೯೨

೧೩. ಅಂದಿನ ಯುದ್ಧದಲ್ಲಿ ಶ್ರುತಶರ್ಮನ ಕಡೆಯ ಮೂವರು ವೀರರು ಹತರಾಗಿದ್ದರು. ಸೂರ್ಯ ಪ್ರಭನ ಕಡೆಯಲ್ಲಿ ಮೂವತ್ತ ಮೂರು ಶೂರರು ಮಡಿದಿದ್ದರು.

೧೪. ಅಂದು ರಾತ್ರಿ ಸೂರ್ಯಪ್ರಭನು ಬಂಧು ಬಾಂಧವರ ಮತ್ತು ಆಪ್ತಮಿತ್ರರ ಸಾವಿನಿಂದ ನೊಂದವನಾಗಿ ಅಂತಃಪುರದವರಿಲ್ಲದೆ ಏಕಾಂಗಿಯಾಗಿ ಕಳೆದನು.

೧೫. ನಿದ್ರೆಯೂ ಇಲ್ಲದೆ ಸಚಿವರೊಡನೆ ಯುದ್ಧದ ಪ್ರಸಂಗಗಳನ್ನು ಕುರಿತು ಮಾತನಾಡುತ್ತ ಮತ್ತೆ ಯುದ್ಧ ಮಾಡುವ ಮನಸ್ಸುಳ್ಳವನಾಗಿ ಹೇಗೋ ರಾತ್ರಿಯನ್ನು ಕಳೆದನು.

೧೬. ಪರಸ್ಪರರನ್ನು ಸಾಂತ್ವನಗೊಳಿಸಲು ಬಂದ ಆತನ ಭಾರ್ಯೆಯರೂ ಕೂಡಿದಂತೆ ಎಲ್ಲರೂ ಆತ್ಮೀಯ ಬಂಧುಗಳನ್ನು ಕಳೆದುಕೊಂಡ ದುಃಖವನ್ನು ಹಂಚಿಕೊಂಡರು.

೧೭. ಅಂತಹ ಕಣ್ಣೀರಿಡುವ ಸಮಯದಲ್ಲೂ ಆ ಸ್ತ್ರೀಯರು ನಾನಾ ವಿಧವಾದ ವಿಚಾರಗಳನ್ನು ಮಾತನಾಡಿದರು.  ಒಂದೆಡೆ ಕಲೆತಾಗ ಸ್ತ್ರೀಯರು ತಮ್ಮ ಮತ್ತು ಬೇರೆಯವರ ಬಗ್ಗೆ ಒಂದು ಕ್ಷಣವೂ ಮಾತನಾಡದಿರಲಾರರು.

೧೮. ಹೀಗೆ ಮಾತು ಮುಂದುವರಿದು ಒಬ್ಬಳು ರಾಜಪುತ್ರಿ ಹೇಳಿದಳು. "ಆಶ್ಚರ್ಯ ! ಇಂದು ನಮ್ಮ ಆರ್ಯಪುತ್ರನು ಅಂಗನೆಯಿಲ್ಲದೆ ಏಕಾಂಗಿಯಾಗಿ ಹೇಗೆ ಮಲಗಿದನು ?'

---

ಶ್ರುತಶರ್ಮಬಲೇ ತಸ್ಮಿನ್ ದಿನೇ ವೀರಾ ಹತಾಸ್ತ್ರಯಃ ।
ತ್ರಯಸ್ತ್ರಿಂಶತ್ ಪ್ರವೀರಾಸ್ತು ಬಲೇ ಸೌರ್ಯಪ್ರಭೇ ಹತಾಃ ॥ ೧೩
ತೇನ ಬಾಂಧವಮಿತ್ರಾದಿನಿಧನೇನ ಸುದುರ್ಮನಾಃ ।
ಸೂರ್ಯಪ್ರಭಸ್ತ್ರಿಯಾಮಾಂ ತಾಮಾಸೀದಂತಃಪುರೈರ್ವಿನಾ ॥ ೧೪
ಅನಿದ್ರ ಏವ ಸಚಿವೈಃ ಸಹ ಸಂಗ್ರಾಮಸಂಕಥಾಃ ।
ತಾಸ್ತಾಃ ಕುರ್ವನ್ನಿನಾಯ್ಯೈತಾಂ ಪುನರ್ಯುದ್ಧೋನ್ಮುಖೋ ನಿಶಾಮ್ ॥ ೧೫
ತದ್ಭಾರ್ಯಾಶ್ಚ ಮಿಲಂತಿ ಸ್ಮ ಹತಬಾಂಧವದುಃಖಿತಾ ಃ ।
ಏಕತ್ರ ತಸ್ಯಾ ರಜನಾವನ್ಯೋನ್ಯಾಶ್ವಾಸನಾಗತಾಃ ॥ ೧೬
ರುದಿತಾವಸರೇಽಪ್ಯತ್ರ ಕಥಾ ನಾನಾವಿಧಾ ವ್ಯಧುಃ ।
ಸ್ತ್ರೀಣಾಂ ನ ಸ ಕ್ಷಣೋ ಯತ್ರ ನ ಕಥಾ ಸ್ವಪರಾಶ್ರಯಾ ॥ ೧೭
ತತ್ಪ್ರಸಂಗೇನ ತತ್ರೈಕಾ ರಾಜಪುತ್ರೀದಮಬ್ರವೀತ್ ।
ಆಶ್ಚರ್ಯಮಾರ್ಯಪುತ್ರೋಽದ್ಯ ಕಥಂ ಸುಪ್ತೋ ನಿರಂಗನಃ ॥ ೧೮

೯೯. ಇದನ್ನು ಕೇಳಿದ ಮತ್ತೋರ್ವಳೆಂದಳು, "ಇಂದು, ಯುದ್ಧದಲ್ಲಿ ತನ್ನವರನ್ನು ಕಳೆದುಕೊಂಡು ನೋವನ್ನು ಅನುಭವಿಸುತ್ತಿರುವ ನಮ್ಮ ಪತಿಯು ಸ್ತ್ರೀ ಸುಖವನ್ನರಸುವನೆ ?'

೧೦೦. ಆಗ ಮತ್ತೊಬ್ಬಳೆಂದಳು, "ಹೊಸಬಳಾದ ಸುಂದರ ಕನ್ಯೆ ದೊರೆತಳೆಂದರೆ ಈ ದುಃಖವನ್ನೂ ಈಗಲೇ ಮರೆಯಬಲ್ಲವನು ನಮ್ಮ ಪತಿರಾಯ !'

೧೦೧. ಇದನ್ನು ಕೇಳಿದ ಓರ್ವಳು "ಸ್ತ್ರೀಲಂಪಟನೇ ಆದರೂ ಇಂತಹ ದುಃಖದ ಸಂದರ್ಭದಲ್ಲಿ ಲಂಪಟತನವನ್ನು ತೋರಲಾರ !'

೧೦೨. ಹೀಗೆ ಒಬ್ಬೊಬ್ಬಳು ಒಂದೊಂದು ಹೇಳುತ್ತಿರಲಾಗಿ ಆಶ್ಚರ್ಯದಿಂದ ಕೂಡಿದ ಆತನ ಹೆಂಡತಿಯೊಬ್ಬಳು, "ಆರ್ಯಪುತ್ರನು ಈ ರೀತಿಯ ಸ್ತ್ರೀಲಂಪಟ ಹೇಗೆ ಆದ !'

೧೦೩. ಹೊಸ ಹೊಸದಾಗಿ ರಾಜಕನ್ಯೆಯರನ್ನು ಮತ್ತೆ ಮತ್ತೆ ಆತನು ವಿವಾಹ ಮಾಡಿಕೊಳ್ಳುತ್ತಿದ್ದರೂ ತೃಪ್ತಿಹೊಂದುತ್ತಿಲ್ಲವಲ್ಲ !

೧೦೪–೧೦೫. ಆಗ, ಅವರಲ್ಲೆಲ್ಲ ಬುದ್ಧಿವಂತಳಾದ ಮನೋವತಿಯು, "ರಾಜರು ಬಹುಪತ್ನೀಕರು ಎನ್ನುತ್ತಾರಲ್ಲ ಅದು ಹೇಗೆ ಎಂದು ಕೇಳಿ, ಹೇಳುತ್ತೇನೆ ! ದೇಶ, ರೂಪ, ವಯಸ್ಸು, ಇಷ್ಟಾನಿಷ್ಟಗಳು, ತಿಳುವಳಿಕೆ, ಇವುಗಳಿಂದ ಒಬ್ಬೊಬ್ಬಳೂ ಒಂದೊಂದು ವಿಧವಾಗಿರುತ್ತಾಳೆ. ಯಾವೊಬ್ಬಳೂ ಸಕಲ ಗುಣಗಳಿಂದ ಕೂಡಿರುವುದಿಲ್ಲ.

---

ತಚ್ಛ್ರುತ್ವಾ ವ್ಯಾಜಹಾರಾನ್ಯಾ ಸಂಗ್ರಾಮಸ್ವಜನಕ್ಷಯಾತ್ ।
ದುಃಖಿತೋ ಹ್ಯಾರ್ಯಪುತ್ರೋಽದ್ಯ ರಮತೇ ಸ್ತ್ರೀಜನೇ ಕಥಮ್ ॥ ೯೯
ತತೋಽಪರಾ ಬ್ರವೀತಿ ಸ್ಮ ಪ್ರಾಪ್ನೋತ್ಯಭಿನವಾಂ ಯದಿ ।
ವರಕನ್ಯಾ ಸ ತದ್ದುಃಖಂ ವಿಸ್ಮರತ್ಯಧುನೈವ ತತ್ ॥ ೧೦೦
ಅಥೇತರಾಬ್ರವೀನ್ನೈವಂ ಯದ್ಯಪಿ ಸ್ತ್ರೀಷು ಲಂಪಟಃ ।
ತಥಾಪಿ ನ ಸ ದುಃಖೇಽಸ್ಮಿನ್ನೀದೃಶಃ ಸ್ಯಾತ್ತಥಾವಿಧಃ ॥ ೧೦೧
ಇತಿ ತಾಸು ವದಂತೀಷು ಜಗಾದೈಕಾ ಸವಿಸ್ಮಯಮ್ ।
ಬ್ರೂತ ಸ್ತ್ರೀಲಂಪಟಃ ಕಸ್ಮಾದಾರ್ಯಪುತ್ರೋ ಬತೇದೃಶಃ ॥ ೧೦೨
ಆಹಿತಾಸ್ವಪಿ ಭಾರ್ಯಾಸು ಭೂಯಸೀಷು ನವಾ ನವಾಃ ।
ಅನಿಶಂ ರಾಜಪುತ್ರೀರ್ಯತ್ಸಂಗೃಹ್ಣನ್ನೈವ ತುಷ್ಯತಿ ॥ ೧೦೩
ಏತಚ್ಛ್ರುತ್ವಾ ವಿದಗ್ಧೈಕಾ ತಾಸು ನಾಮ್ನಾ ಮನೋವತೀ ।
ಉವಾಚ ಶ್ರೂಯತಾಂ ಯೇನ ರಾಜಾನೋ ಬಹುವಲ್ಲಭಾಃ ॥ ೧೦೪
ದೇಶರೂಪವಯಶ್ಚೇಷ್ಟಾ ವಿಜ್ಞಾನಾದಿವಿಭೇದತಃ ।
ಭಿನ್ನಾ ಗುಣಾ ವರಸ್ತ್ರೀಣಾಂ ನೈಕಾ ಸರ್ವಗುಣಾನ್ವಿತಾ ॥ ೧೦೫

೧೦೬. ಕರ್ಣಾಟ, ಲಾಟ, ಸೌರಾಷ್ಟ್ರ ಮಧ್ಯದೇಶಗಳ ಸ್ತ್ರೀಯರು ತಮ್ಮ ತಮ್ಮ ದೇಶಗಳ ವಿಶಿಷ್ಟ ಆಚಾರಗಳಿಂದ ಸಂತೋಷಗೊಳಿಸುತ್ತಾರೆ.

೧೦೭. ಕೆಲವು ಸುಂದರಿಯರು ಶರಚ್ಚಂದ್ರಕಾಂತಿಯಿಂದ ಶೋಭಿಸುವ ಮುಖವುಳ್ಳವರಾಗಿದ್ದರೆ, ಮತ್ತೆ ಕೆಲವರು ಕನಕಕುಂಭಗಳಂಥ ದುಂಡು ಸ್ತನಗಳಿಂದ ಕಂಗೊಳಿಸುತ್ತಾರೆ.

೧೦೮. ಕೆಲವರು ಮನ್ಮಥನ ಸಿಂಹಾಸನವೆಂದೇಖ್ಯಾತವಾದ ಜಘನಸ್ಥಳದ ಸೌಂದರ್ಯದಿಂದಲೂ, ಇನ್ನೂ ಕೆಲವರು ಇತರ ಅಂಗಗಳ ಸಮ್ಮೋಹಕ ಲಾವಣ್ಯದಿಂದಲೂ ಮನೋಹರಿಯರಾಗಿರುತ್ತಾರೆ.

೧೦೯. ಒಬ್ಬಳ ದೇಹ ಚಿನ್ನದ ಬಣ್ಣದಿಂದ ಹೊಳೆಯುತ್ತಿದ್ದರೆ ಮತ್ತೋರ್ವಳು ಪ್ರಿಯಂಗುಲತೆಯಂತೆ ಶ್ಯಾಮಲವರ್ಣದಿಂದ ಆಕರ್ಷಕಳಾಗಿರುತ್ತಾಳೆ; ಒಬ್ಬಳು ಪುಟಿಯುವ ರಕ್ತಕಾಂತಿಯಿಂದ ಒಂದೇ ನೋಟದಲ್ಲಿ ಅನುರಾಗ ಉಕ್ಕಿಸುತ್ತಾಳೆ.

೧೧೦. ಒಬ್ಬಳು ನವಯೌವನದಿಂದ ಚಂದವಾಗಿದ್ದರೆ. ಇನ್ನೊಬ್ಬಳು ಪೂರ್ಣಯೌವನ ಕಾಂತಿಯಿಂದ ಕಣ್ಮನ ಸೆಳೆಯುತ್ತಾಳೆ. ಮತ್ತೊಬ್ಬಳು ಪ್ರೌಢಳಾಗಿದ್ದು ಬೆಡಗು ಬಿನ್ನಾಣಗಳನ್ನು ಸೂಸುವ ಚೆಲುವೆಯಾಗಿರುತ್ತಾಳೆ.

೧೧೧. ಒಬ್ಬಳು ನಗುವುದು ಸೊಗಸಾಗಿದ್ದರೆ ಮತ್ತೊಬ್ಬಳು ಹುಸಿ ಕೋಪದಿಂದಲೇ ಮುದ ನೀಡುತ್ತಾಳೆ. ಗಜದಂತೆ ಗಾಂಭೀರ್ಯದ ನಡಿಗೆ ಒಬ್ಬಳಿಗಿದ್ದರೆ, ಇನ್ನೊಬ್ಬಳು ಹಂಸಿನಿಯಂತೆ ವಿಲಾಸಗಮನದಿಂದ ಕಣ್ಣಿಂಬಾಗುತ್ತಾಳೆ.

---

ಕರ್ಣಾಟಲಾಟಸೌರಾಷ್ಟ್ರಮಧ್ಯದೇಶಾದಿದೇಶಜಾಃ ।
ಯೋಷಾ ದೇಶಸಮಾಚಾರೈ ರಂಜಯಂತಿ ನಿಜೈರ್ನಿಜೈಃ ॥ ೧೦೬

ಕಾಶ್ಚಿದ್ಧರಂತಿ ಸುದೃಶಃ ಶಾರದೇಂದುನಿಭೈರ್ಮುಖೈಃ ।
ಅನ್ಯಾಃ ಕನಕಕುಂಭಾಭೈಃ ಸ್ತನೈರುನ್ನತಸಂಹತೈಃ ॥ ೧೦೭

ಸ್ಮರಸಿಂಹಾಸನಪ್ರಖ್ಯೈರಪರಾ ಜಘನಸ್ಥಲೈಃ ।
ಇತರಾಶ್ಚೇತರೈರಂಗೈಃ ಸ್ವಸೌಂದರ್ಯಮನೋರಮೈಃ ॥ ೧೦೮

ಕಾಚಿತ್ಕಾಂಚನಗೌರಾಂಗೀ ಪ್ರಿಯಂಗುಶ್ಯಾಮಲಾಪರಾ ।
ಅನ್ಯಾ ರಕ್ತಾವದಾತಾ ಚ ದೃಷ್ಟ್ವೈವ ಹರತೀಕ್ಷಣೇ ॥ ೧೦೯

ಕಾಚಿತ್ತ್ವಗ್ರಸುಭಗಾ ಕಾಚಿತ್ ಸಂಪೂರ್ಣಯೌವನಾ ।
ಕಾಚಿತ್ಪ್ರೌಢತ್ವಸುರಸಾ ಪ್ರಸರದ್ವಿಭ್ರಮೋಜ್ವಲಾ ॥ ೧೧೦

ಹಸಂತೀ ಶೋಭಿತೇ ಕಾಚಿತ್ ಕಾಚಿತ್ ಕೋಪೇಽಪಿ ಹಾರಿಣೀ ।
ವ್ರಜಂತೀ ಗಜವತ್ಕಾಪಿ ಹಂಸವತ್ ಕಾಪಿ ರಾಜತೇ ॥ ೧೧೧

೧೧೨. ಒಬ್ಬಳು ಅಮೃತದಂತೆ ಸಿಹಿಯಾಗಿ ನುಡಿದು ತನ್ನ ಇಂಪಾದ ದನಿಯಿಂದ ಕಿವಿಯಲ್ಲಿ ಜೇನು ಸುರಿಸಿದರೆ ಮತ್ತೋರ್ವಳು ತನ್ನ ಮನದಿಂಗಿತವನ್ನು ಭ್ರೂವಿಲಾಸವುಳ್ಳ ನೋಟದಿಂದಲೇ ತೋರುತ್ತಾಳೆ.

೧೧೩. ನೃತ್ಯ ಕಲಾ ವಿಲಾಸದಿಂದ ರುಚಿಸುತ್ತಾಳೆ. ಅಂತೆಯೇ ಒಬ್ಬಳು ಸಂಗೀತದಿಂದ ಶೋಭಿಸುತ್ತಾಳೆ. ಒಬ್ಬಳು ವೀಣಾದಿ ಸಂಗೀತ ವಾದ್ಯಗಳ ಜ್ಞಾನದಿಂದ ಇಷ್ಟಳಾಗುತ್ತಾಳೆ.

೧೧೪. ಬಾಹ್ಯದಲ್ಲಿ ಪ್ರೀತಿಸುವ ಕಲೆ ಒಬ್ಬಳಿಗೆ ಕರಗತವಾಗಿದ್ದರೆ ಮತ್ತೋರ್ವಳು ಅಂತರಂಗದ ಪ್ರೀತಿ ಸಂಪಾದಿಸುವಲ್ಲಿ ಯಶಸ್ವಿನಿಯಾಗುತ್ತಾಳೆ. ಒಬ್ಬಳು ಅಲಂಕಾರದಿಂದ ಬೆಳಗಿದರೆ ಮತ್ತೊಬ್ಬಳು ತನ್ನ ವೈದುಷ್ಯದಿಂದ ಇಷ್ಟಳಾಗುತ್ತಾಳೆ.

೧೧೫. ಪತಿಯ ಮನವನ್ನು ಗೆಲ್ಲುವ ಕಲೆಯನ್ನು ಕರಗತ ಮಾಡಿ ಕೊಂಡಿರುವವಳೇ ಸೌಭಾಗ್ಯವತಿ. ಇನ್ನೆಷ್ಟು ಹೇಳಿದರೆ ತಾನೆ ಏನು ? ಇನ್ನೂ ಎಷ್ಟೋ ಜನಕ್ಕೆ ಎಷ್ಟೆಷ್ಟೋ ಗುಣ ಸೌಂದರ್ಯಗಳಿರುವುದುಂಟು.

೧೧೬. ಆದ್ದರಿಂದ ಎಂಥಹ ವರಾಂಗನೆಯೇ ಆದರೂ ಅವಳಲ್ಲಿ ಕೆಲವು ಗುಣಗಳನ್ನು ಕಾಣಬಹುದೇ ಹೊರತು ಎಲ್ಲ ಗುಣಗಳೂ ಒಬ್ಬಳಲ್ಲೇ ಇರುವುದು ಸಾಧ್ಯವಲ್ಲದ ಮಾತು.

೧೧೭. ಆದ್ದರಿಂದ ನಾನಾ ರುಚಿಗಳ ಅನುಭವಕ್ಕೆ ಮಾರುಹೋದ ರಾಜಮಹಾರಾಜರು ಎಷ್ಟು ಬಾರಿ ಮದುವೆಯಾದರೂ ಮತ್ತೆ ಮತ್ತೆ ಹೊಸಬರನ್ನು ತರುತ್ತಲೇ ಇರುತ್ತಾರೆ.

---

ಆಲಪಂತ್ಯಮೃತೇನೇವ ಕಾಚಿದಾಸಿಂಚತಿ ಶ್ರುತಿಮ್ ।
ಸಭ್ರೂವಿಲಾಸಮ್ ಪಶ್ಯಂತೀ ಸ್ವಭಾವಾದ್ಭಾತಿ ಕಾಚನ ॥ ೧೧೨
ನೃತ್ತೇನ ರೋಚತೇ ಕಾಚಿತ್ ಕಾಚಿತ್ ಗೀತೇನ ರಾಜತೇ ।
ವೀಣಾದಿವಾದನಜ್ಞಾನೇನಾನ್ಯಾ ಕಾಂತಾ ಚ ರೋಚತೇ ॥ ೧೧೩
ಕಾಚಿತ್ ಬಾಹ್ಯರತಾಭಿಜ್ಞಾ ಕಾಚಿದಾಭ್ಯಂತರಪ್ರಿಯಾ ।
ಪ್ರಸಾಧನೋಜ್ಜ್ವಲಾ ಕಾಚಿತ್ ಕಾಚಿತ್ ವೈದಗ್ಧ್ಯಶೋಭಿತಾ ॥ ೧೧೪
ಭರ್ತೃಚಿತ್ತಗ್ರಹಾಭಿಜ್ಞಾ ಚಾನ್ಯಾ ಸೌಭಾಗ್ಯಮಶ್ನುತೇ ।
ಕಿಯದ್ವಾ ವಚ್ಮಿ ಬಹವೋऽಪ್ಯನ್ಯೇऽನ್ಯಾಸಾಂ ಪೃಥಗ್ಗುಣಾಃ ॥ ೧೧೫
ತದೇವಮಿಹ ಕಸ್ಯಾಶ್ಚಿದ್ಗುಣಃ ಕೋऽಪಿ ವರಸ್ತ್ರಿಯಃ ।
ನ ತು ಸರ್ವಗುಣಾಃ ಸರ್ವಾಸ್ತ್ರಿಲೋಕ್ಯಾಮಪಿ ಕಾಶ್ಚನ ॥ ೧೧೬
ಅತೋ ನಾನಾರಸಾಸ್ವಾದಲಬ್ಧಕಕ್ಷ್ಯಾಃ ಕಿಲೇಶ್ವರಾಃ ।
ಆಹೃತ್ಯಾಪ್ಯಾಹರಂತ್ಯೇವ ಭಾರ್ಯಾ ನವನವಾಃ ಸದಾ ॥ ೧೧೭

೧೧೮. ಸ್ಥೈರ್ಯನಿಸಿಕೊಂಡವರು ಎಂದೂ ಪರಸ್ತ್ರೀಸಂಗ ಮಾಡಲು ಬಯಸುವುದಿಲ್ಲ. ಇದು ನಮ್ಮ ಪತಿಯಲ್ಲಿ ದೋಷವಲ್ಲ, ಅವನನ್ನು ಕಂಡು ಕರುಬುವುದು ನಮಗೆ ತರವಲ್ಲ.

೧೧೯. ಈ ರೀತಿಯಾಗಿ ಮನೋವತಿಯು ಸೂರ್ಯಪ್ರಭನ ಅಂಗನೆಯರಿಗೆ ತಿಳಿಹೇಳುತ್ತಿರುವಾಗ ಮದನಸೇನೆಯೇ ಮುಂತಾದ ಇತರರೂ ಮಾತುಕತೆಗಳನ್ನು ಮುಂದುವರೆಸಿದರು.

೧೨೦. ರಂಗೇರಿದ ಮಾತುಕತೆ ಯಾವ ಮುಚ್ಚುಮರೆ ಇಲ್ಲದೆ ಸಾಗಿತು. ಆ ಲಲನೆಯರು ನಿರಾಳವಾಗಿ ಪರಸ್ಪರ ರತಿ ತಂತ್ರಗಳನ್ನು ಹೇಳಿಕೊಟ್ಟರು. ವಿಶೇಷ ಸಂದರ್ಭಗಳಲ್ಲಿ ಕಲೆತಾಗ ಮಾತಾಡಲು ಸೇರಿ ಕಥಾಪ್ರಸಂಗಗಳಲ್ಲಿ ಮನಸ್ಸು ಹರಿಸಿದಾಗ ಹೆಂಗಳೆಯರು ಹೊರಹಾಕದ ಯಾವ ಮನದಿಂಗಿತಗಳು ತಾನೆ ಇದ್ದಾವು ?

---

ಉತ್ತಮಾಸ್ತು ನ ವಾಂಛಂತಿ ಪರದಾರಾನ್ ಕಥಂಚನ ।
ತನ್ನಾರ್ಯಪುತ್ರಸ್ಯೈಷ ಸ್ಯಾದ್ದೋಷೋ ನೇರ್ಷ್ಯಾ ಚ ನಃ ಕ್ಷಮಾ ॥ ೧೧೮
ಏವಮಾದ್ಯಾ ಮನೋವತ್ಯಾ ಪ್ರೋಕ್ತಾಃ ಸೂರ್ಯಪ್ರಭಾಂಗನಾಃ ।
ಅನ್ಯಾ ಮದನಸೇನಾದ್ಯಾಸ್ತದ್ವೈವೋಚುಃ ಕಥಾಃ ಕ್ರಮಾತ್ ॥ ೧೧೯
ತತೋಽತಿರಸತಶ್ಚ ತಾ ವಿಗತಯಂತ್ರಣಾನರ್ಗಲಾಃ
ಪರಸ್ಪರಮುಪಾದಿಶನ್ಸುರತಕಾರ್ಯತಂತ್ರಾಣ್ಯಪಿ ।
ಪ್ರಸಂಗಮಿಲಿತಾಃ ಕಥಾಪ್ರಸರಸಕ್ತಚಿತ್ತಾ ಮಿಥ
ಸ್ತದಸ್ತಿ ನಕಿಮಪ್ಯಹೋ ಯದಿಹ ನೋದ್ವಮಂತಿ ಸ್ತ್ರಿಯಃ ॥ ೧೨೦

೧೨೧. ಹೀಗೆ ಮಾತಿಗೆ ಮಾತು ಕಲೆತು ಭಾವನೆಗಳ ಭರಪೂರ ಉಕ್ಕಿ ಉದ್ದವಾದ ಅಂದಿನ ಸರಸಲ್ಲಾಪ ಕೊನೆ ಮುಟ್ಟುತ್ತಿದ್ದಂತೆ ರಾತ್ರಿ ದೇವಿಯೂ ಮೆಲ್ಲನೆ ಹಿಂದೆ ಸರಿದಳು. ಶತ್ರುಗಳನ್ನು ಸದೆಬಡಿಯಲು ಹಾತೊರೆಯುತ್ತ, ಕತ್ತಲೆ ಕರಗುವ ವೇಳೆಗಾಗಿ ಕಾಯುತ್ತಿದ್ದ ಸೂರ್ಯಪ್ರಭನಿಗೂ (ಸೂರ್ಯನಿಗೂ) ಬೆಳಗಾಯಿತು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಸೂರ್ಯಪ್ರಭಲಂಬಕದಲ್ಲಿ ನಾಲ್ಕನೆಯ ತರಂಗವು ಮುಗಿಯಿತು.

---

ಅಥ ಕಥಮಪಿ ದೀರ್ಘಾ ಸಾ ಕಥಾ ಚಾತ್ರ ತಾಸಾಂ
ಅವಸಿತಿಮುಪಯಾತಾ ಸಾ ಚ ರಾತ್ರಿಃ ಕ್ರಮೇಣ ।
ತಿಮಿರವಿಗಮವೇಲಾವೇಕ್ಷ್ಯೈಕಾಭಿಕಾಂಕ್ಷೋ
ರಿಪುಬಲವಿಜಿಗೀಷೋಸ್ತತ್ರ ಸೂರ್ಯಪ್ರಭಸ್ಯ ॥ ೧೨೧

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಸೂರ್ಯಪ್ರಭಲಂಬಕೇ ಚತುಸ್ತರಂಗಃ

## ಐದನೆಯ ತರಂಗ

೧ ಬೆಳಗಾದಾಗ ಸೂರ್ಯ ಪ್ರಭಾದಿಗಳು ಯುದ್ಧ ಭೂಮಿಗೆ ಬಂದು ಸೇರಿದರು. ಶ್ರುತಶರ್ಮಾದಿಗಳೂ ಸಜ್ಜುಗೊಂಡು ಸೈನ್ಯಸಮೇತರಾಗಿ ಮತ್ತೆ ಬಂದರು.

೨. ಮತ್ತೆ ಇಂದ್ರಸಹಿತರಾದ ಬ್ರಹ್ಮ, ವಿಷ್ಣು, ಮಹೇಶ್ವರರು, ಸುರರು, ಅಸುರರು, ಯಕ್ಷರು, ರಕ್ಷೋಗಣಗಳು, ಉರಗಗಳು, ಗಂಧರ್ವರು ಇವರೆಲ್ಲ ಸಂಗ್ರಾಮವನ್ನು ನೋಡಲು ಬಂದು ನೆರೆದರು.

೩ ದಾಮೋದರನು ಶ್ರುತಶರ್ಮನ ಸೈನ್ಯದಲ್ಲಿ ಚಕ್ರವ್ಯೂಹವನ್ನು ರಚಿಸಿದನು. ಇತ್ತ ಪ್ರಭಾಸನು ಸೂರ್ಯಪ್ರಭನ ಸೈನ್ಯವನ್ನು ವಜ್ರವ್ಯೂಹವನ್ನಾಗಿ ರಚಿಸಿದನು.

೪. ನಂತರ ಎರಡೂ ಸೇನೆಗಳ ನಡುವೆ ಕಾಳಗ ಆರಂಭವಾಯಿತು. ನಗಾರಿಯ ಶಬ್ದಗಳಿಂದಲೂ, ಪಟುಭಟರ ಆರ್ಭಟದಿಂದಲೂ ದಿಕ್ಕುಗಳು ಕಿವುಡಾದವು.

೫ ಆಯುಧಗಳಿಂದ ಹತರಾದ ಶೂರರು ಬಂದು ನನ್ನ ಮಂಡಲವನ್ನು ಭೇದಿಸುತ್ತಾರೆ ಎಂದು ಭಯಗೊಂಡನೋ ಎಂಬಂತೆ ಸೂರ್ಯದೇವನು ಶರಜಾಲದಲ್ಲಿ ಮರೆಯಾದನು.

---

## ಪಂಚಮಸ್ತರಂಗಃ

ಅಥ ಯುದ್ಧಭುವಂ ಪ್ರಾತರ್ಜಗ್ಮುಃ ಸೂರ್ಯಪ್ರಭಾದಯಃ ।
ಶ್ರುತಶರ್ಮಾದಯಸ್ತೇ ಚ ಸಂನದ್ಧಾಃ ಸಬಲಾಃ ಪುನಃ ॥ ೧
ಪುನಶ್ಚ ಸೇಂದ್ರಾಃ ಸುಬ್ರಹ್ಮವಿಷ್ಣುರುದ್ರಾಃ ಸುರಾಸುರಾಃ ।
ಸಯಕ್ಷೋರಗಗಂಧರ್ವಾಃ ಸಂಗ್ರಾಮಂ ದ್ರಷ್ಟುಮಾಯಯುಃ ॥ ೨
ಶ್ರುತಶರ್ಮಬಲೇ ಚಕ್ರವ್ಯೂಹಂ ದಾಮೋದರೋ ವ್ಯಧಾತ್ ।
ವಜ್ರವ್ಯೂಹಂ ಪ್ರಭಾಸಶ್ಚ ಸೂರ್ಯಪ್ರಭಬಲೇಽಕರೋತ್ ॥ ೩
ತತಃ ಪ್ರವವೃತೇ ಯುದ್ಧಂ ತಯೋರುಭಯಸೈನ್ಯಯೋಃ ।
ತೂರ್ಯೈಃ ಸುಭಟನಾದೈಶ್ಚ ಬಧಿರೀಕೃತದಿಕ್ತಟಮ್ ॥ ೪
ಸಮ್ಯಕ್ಶಸ್ತ್ರಹತಾಃ ಶೂರಾ ಭಿನ್ದಂತಿ ಮಮ ಮಂಡಲಮ್ ।
ಇತೀವ ಶರಜಾಲಾಂತಶ್ಛನ್ನೋ ಭಾನುರಭೂದ್ಭಿಯಾ ॥ ೫

೬ ದಾಮೋದರನು ರಚಿಸಿದ ಚಕ್ರವ್ಯೂಹವು ಅನ್ಯರಿಗೆ ಭೇದಿಸಲು ಅಸಾಧ್ಯವಾದುದು; ಆದರೂ ಸೂರ್ಯಪ್ರಭನ ಆಜ್ಞೆಯಿಂದ ಪ್ರಭಾಸನು ಅದನ್ನು ಭೇದಿಸಿ ಒಳಹೊಕ್ಕನು.

೭ ಅಲ್ಲಿ ಉಂಟಾದ ವ್ಯೂಹಚ್ಛಿದ್ರವನ್ನು ಕಂಡು, ಅದನ್ನು ಹತ್ತಿಕ್ಕಲು ಸ್ವಯಂ ದಾಮೋದರನೇ ನಿಂತನು. ಪ್ರಭಾಸನು ಏಕರಥಿಯಾಗಿ ಅವನೊಡನೆ ಕಾದಿದನು.

೮ ಅವನೊಬ್ಬನೇ ಕಾದಾಡುತ್ತಿರುವುದನ್ನು ಕಂಡು ಸೂರ್ಯಪ್ರಭನು, ಅವನ ಸಹಾಯಕ್ಕೆ ಹದಿನೈದು ಮಹಾರಥಿಗಳನ್ನು ಕಳುಹಿಸಿದನು.

೯–೧೧. ಪ್ರಕಂಪನ, ಧೂಮಕೇತು, ಕಾಲಕಂಪನ, ಮಹಾಮಾಯ, ಮರುದ್ವೇಗ, ಪ್ರಹಸ್ತ ವಜ್ರಪಂಜರ, ಕಾಲಚಕ್ರ, ಪ್ರಮಥನ, ಸಿಂಹನಾಥ, ಕಂಬಲ, ವಿಕಟಾಕ್ಷ, ಪ್ರವಹಣ, ಕುಂಜರಕುಮಾರ, ಮತ್ತು ಪ್ರಹೃಷ್ಟರೋಮರೆಂಬ ಅಸುರ ಶ್ರೇಷ್ಠರಾದ ಮಹಾರಥರು ವ್ಯೂಹದ್ವಾರದೆಡೆ ಧಾವಿಸಿದರು.

೧೨. ಆ ಹದಿನೈದು ವೀರರೊಡನೆ ಏಕಾಂಗಿಯಾಗಿ ಹೋರಾಡಿದ ದಾಮೋದರನು ತನ್ನ ಅಪೂರ್ವ ಬಲ ಪ್ರದರ್ಶನವನ್ನು ಮಾಡಿದನು.

೧೩. ಅದನ್ನು ಕಂಡು ಇಂದ್ರನು ಪಕ್ಕದಲ್ಲೇ ಇದ್ದ ನಾರದ ಮುನಿಯೊಡನೆ ಹೀಗೆಂದನು. "ಸೂರ್ಯಪ್ರಭಾದಿಗಳೆಲ್ಲ ಅಸುರಾವತಾರಿಗಳು.

---

ದಾಮೋದರಕೃತಂ ಚಕ್ರವ್ಯೂಹಮನ್ಯೇನ ದುರ್ಭಿದಮ್ ।
ಭಿತ್ವಾ ಪ್ರಭಾಸಃ ಪ್ರಾವಿಕ್ಷದಥ ಸೂರ್ಯಪ್ರಭಾಜ್ಞಯಾ ॥ ೬
ತಂ ಚ ದಾಮೋದರೋ ವ್ಯೂಹಚ್ಛಿದ್ರಮೇತ್ಯಾವೃಣೋತ್ಸ್ವಯಮ್ ।
ಪ್ರಭಾಸೋ ಯಯುಧೇ ತಂ ಚ ತತ್ರೈಕರಥ ಏವ ಸಃ ॥ ೭
ಪ್ರವಿಷ್ಟಮೇಕಕಂ ತಂ ಚ ದೃಷ್ಟ್ವಾ ಸೂರ್ಯಪ್ರಭೋಽಥ ಸಃ ।
ಪಶ್ಚಾತ್ತುಂಚದಶೈತಸ್ಯ ವಿಸಸರ್ಜ ಮಹಾರಥಾನ್ ॥ ೮
ಪ್ರಕಂಪನಂ ಧೂಮಕೇತುಂ ಕಾಲಕಂಪನಕಂ ತಥಾ ।
ಮಹಾಮಾಯಂ ಮರುದ್ವೇಗಂ ಪ್ರಹಸ್ತಂ ವಜ್ರಪಂಜರಮ್ ॥ ೯
ಕಾಲಚಕ್ರಂ ಪ್ರಮಥನಂ ಸಿಂಹನಾದಂ ಸಕಂಬಲಮ್ ।
ವಿಕಟಾಕ್ಷಂ ಪ್ರವಹಣಂ ತಂ ಕುಂಜರಕುಮಾರಕಮ್ ॥ ೧೦
ತಂ ಚ ಪ್ರಹೃಷ್ಟರೋಮಾಣಮಸುರಾಧಿಪಸತ್ತಮಮ್ ।
ತೇ ಪ್ರಧಾವ್ಯ ಯಯುಃ ಸರ್ವೇ ವ್ಯೂಹದ್ವಾರಂ ಮಹಾರಥಾಃ ॥ ೧೧
ತತ್ರ ದಾಮೋದರೋಽಪೂರ್ವಂ ಸ್ವಪೌರುಷಮದರ್ಶಯತ್ ।
ಯದೇಕ ಏವ ಯುಯುಧೇ ತೈಃ ಪಂಚದಶಭಿಃ ಸಹ ॥ ೧೨
ತದ್ದೃಷ್ಟ್ವಾ ನಾರದಮುನಿಂ ಪಾರ್ಶ್ವಸ್ಥಂ ವಾಸವೋಽಭ್ಯಧಾತ್ ।
ಸೂರ್ಯಪ್ರಭಾದ್ಯಾ ಅಸುರಾವತಾರಾ ಅಖಿಲಾಸ್ತಥಾ ॥ ೧೩

೧೩. ಶ್ರುತಶರ್ಮ ಹಾಗೂ ವಿದ್ಯಾಧರರೆಲ್ಲ ನನ್ನ ಅಂಶದಿಂದ ಹುಟ್ಟಿದವರು. ಅಂದರೆ ದೇವಾಂಶಸಂಭೂತರು. ಅಂದಮೇಲೆ ಮುನಿಯೇ, ಇದು ತಾರ್ಕಿಕವಾಗಿ ದೇವಾಸುರ ಯುದ್ಧವೇ.

೧೪. ಇಂತಹ ಸಂದರ್ಭಗಳಲ್ಲಿ ಹರಿಯು ಯಾವಾಗಲೂ ದೇವತೆಗಳಿಗೆ ಸಹಾಯಕನಾಗಿರುತ್ತಾನೆ. ದಾಮೋದರನು ಹರಿಯ ಅಂಶ ಸಂಭೂತನು. ನೋಡಿ, ಅದರಿಂದಲೇ ಇವನು ಹೀಗೆ ಯುದ್ಧ ಮಾಡಲು ಶಕ್ತನಾಗಿದ್ದಾನೆ.

೧೫. ಹೀಗೆಂದು ಶಕ್ರನು ಹೇಳುತ್ತಿರುವಾಗ ಸೈನ್ಯಾಧಿಪತಿಯಾದ ದಾಮೋದರನ ಸಹಾಯಕ್ಕೆಂದು ಹದಿನಾಲ್ಕು ಜನ ಮಹಾರಥರು ಧಾವಿಸಿ ಬಂದರು.

೧೬–೧೯. ಬ್ರಹ್ಮಗುಪ್ತ ವಾಯುಬಲ, ಯಮದಂಷ್ಟ್ರ ಸುರೋಷಣ, ರೋಷಾವರೋಹ, ಅತಿಬಲ, ತೇಜಃ ಪ್ರಭ, ಧುರಂಧರ, ಕುಬೇರದತ್ತ ವರುಣಶರ್ಮ, ಕಂಬಲಿಕ, ವೀರ, ದುಷ್ಟಮದನ, ಡೋಹನ, ಆರೋಹಣ– ಈ ಹದಿನೈದು ವೀರರು ದಾಮೋದರನೊಡಗೂಡಿ ವ್ಯೂಹಾಗ್ರದಲ್ಲಿ ಕಾದಾಡುತ್ತಿದ್ದ ಸೂರ್ಯಪ್ರಭನ ವೀರರನ್ನು ಅಡ್ಡಗಟ್ಟಿದರು.

೨೦. ನಂತರ ಅವರ ನಡುವೆ ದ್ವಂದ್ವ ಯುದ್ಧವು ಏರ್ಪಟ್ಟಿತು. ದಾಮೋದರನೊಡನೆ ಪ್ರಕಂಪನನು ಅಸ್ತ್ರಯುದ್ಧವನ್ನು ಹೂಡಿದನು.

---

ಶ್ರುತಶರ್ಮಾ ಮದಂಶಶ್ಚ ಸರ್ವೇ ವಿದ್ಯಾಧರಾ ಇಮೇ ।
ದೇವಾಂಶಾಸ್ತದಯಂ ಯುಕ್ತ್ಯಾ ಮುನೇ ದೇವಾಸುರಾಹವಃ ॥ ೧೩
ತಸ್ಮಿಂಶ್ಚ ಪಶ್ಯ ದೇವಾನಾಂ ಸಹಾಯಃ ಸರ್ವದಾ ಹರಿಃ ।
ದಾಮೋದರಸ್ತದಂಶೋಽಯಮೇವಂ ತದಿಹ ಯುಧ್ಯತೇ ॥ ೧೪
ಏವಂ ಶಕ್ರೇ ವದತ್ಯಸ್ಯ ದಾಮೋದರಚಮೂಪತೇಃ ।
ಮಹಾರಥಾಃ ಸಮಾಜಗ್ಮುಃ ಸಾಹಾಯ್ಯಾಯ ಚತುರ್ದಶ ॥ ೧೫
ಬ್ರಹ್ಮಗುಪ್ತೋ ವಾಯುಬಲೋ ಯಮದಂಷ್ಟ್ರಃ ಸುರೋಷಣಃ ।
ರೋಷಾವರೋಹೋಽತಿಬಲಸ್ತೇಜಃ ಪ್ರಭಧುರಂಧರೌ ॥ ೧೬
ಕುಬೇರದತ್ತೋ ವರುಣಶರ್ಮಾ ಕಂಬಲಿಕಸ್ತಥಾ ।
ವೀರಶ್ಚ ದುಷ್ಟಮದನೋ ದೋಹನಾರೋಹಣಾವುಭೌ ॥ ೧೭
ದಾಮೋದರಯುತಾಸ್ತೇಽಪಿ ವೀರಾಃ ಪಂಚದಶೈವ ತಾನ್ ।
ಸೂರ್ಯಪ್ರಭೀಯಾನ್‌ರುರುಧುರ್ವೀರಾನ್ ವ್ಯೂಹಾಗ್ರಯೋಧಿನಃ ॥ ೧೮
ತತೋಽತ್ರ ದ್ವಂದ್ವಯುದ್ಧಾನಿ ತೇಷಾಮಾಸನ್‌ಪರಸ್ಪರಮ್ ।
ದಾಮೋದರೇಣಾಸ್ತ್ರಯುದ್ಧಂ ಸಮಂ ಚಕ್ರೇ ಪ್ರಕಂಪನಃ ॥ ೨೦

೨೧. ಬ್ರಹ್ಮದತ್ತನೊಡನೆ ಧೂಮಕೇತುವು ಕಾದಾಡಿದರೆ ಮಹಾಮಾಯನು ಅತಿಬಲನೊಡನೆ ಕಾದಿದನು.

೨೨. ತೇಜಃ ಪ್ರಭನೊಡನೆ ದಾನವನಾದ ಕಾಲಕಂಪನನೂ, ವಾಯುಬಲನೊಡನೆ ಮಹಾಸುರನಾದ ಮರುದ್ವೇಗನೂ ಕಾಳಗದಲ್ಲಿ ನಿರತರಾದರು.

೨೩. ವಜ್ರಪಂಜರನು ಯಮದಂಷ್ಟ್ರನೊಡನೆ, ಅಸುರೋತ್ತಮ ಕಾಲಚಕ್ರನು ಸುರೋಷಣನೊಡನೆ ಯುದ್ಧಕ್ಕೆ ನಿಂತರು.

೨೪. ಪ್ರಮಥನನು ಕುಬೇರದತ್ತನನ್ನು ಎದುರಿಸಿದರೆ ದೈತ್ಯೇಂದ್ರನಾದ ಸಿಂಹನಾದನು ವರುಣಶರ್ಮನಿಗೆ ಎದುರಾದನು.

೨೫. ದುಷ್ಟದಮನನೊಡನೆ ಕಾದಿದವನು ಪ್ರ ಮಹಣನು. ಪ್ರಹೃಷ್ಟರೋಮನೆಂಬ ದಾನವನು ರೋಷಾವರೋಹನೊಡನೆ ಯುದ್ಧ ಮಾಡಿದನು.

೨೬. ವಿಕಟಾಕ್ಷನು ದುರಂಧರನೊಡನೆ, ಕಂಬಲಿಕನು ಕಂಬಲಿಕನೊಡನೆ ಕಾದಿದನು.

೨೭. ಕುಂಜರಕುಮಾರನು ಆರೋಹಣನೊಡನೆ; ಮಹೋತ್ಪಾತನೆಂಬ ಮತ್ತೊಂದು ಹೆಸರುಳ್ಳ ದೋಹನನೊಡನೆ ಪ್ರಹಸ್ತನು ಯುದ್ಧಕ್ಕೆ ನಿಂತನು.

---

ಬ್ರಹ್ಮದತ್ತೇನ ಚ ಸಮಂ ಧೂಮಕೇತುರಯುಧ್ಯತ ।
ಮಹಾಮಾಯಸ್ತು ಯುಯುಧೇ ಸಹೈವಾತಿಬಲೇನ ಚ ॥ ೨೧
ತೇಜಃ ಪ್ರಭೇಣ ಯುಯುಧೇ ದಾನವಃ ಕಾಲಕಂಪನಃ ।
ಸಹ ವಾಯುಬಲೇನಾಪಿ ಮರುದ್ವೇಗೋ ಮಹಾಸುರಃ ॥ ೨೨
ಯಮದಂಷ್ಟ್ರೇಣ ಚ ಸಮಂ ಯುಯುಧೇ ವಜ್ರಪಂಜರಃ ।
ಸಮಂ ಸುರೋಷಣೇನಾಪಿ ಕಾಲಚಕ್ರೋಽಸುರೋತ್ತಮಃ ॥ ೨೩
ಸಾಕಂ ಕುಬೇರದತ್ತೇನ ಯುದ್ಧಂ ಪ್ರಮಥನೋ ವ್ಯಧಾತ್ ।
ಸಿಂಹನಾದಶ್ಚ ದೈತ್ಯೇಂದ್ರಃ ಸಮಂ ವರುಣಶರ್ಮಣಾ ॥ ೨೪
ಯುದ್ಧಂ ಪ್ರಮಹಣೋ ದುಷ್ಟದಮನೇನ ಸಹಾಕರೋತ್ ।
ಪ್ರಹೃಷ್ಟರೋಮಾ ರೋಷಾವರೋಹೇಣಾಪಿ ಚ ದಾನವಃ ॥ ೨೫
ಧುರಂಧರೇಣ ಚ ಸಮಂ ವಿಕಟಾಕ್ಷೋ ವ್ಯಧಾದ್ಯುಧಮ್ ।
ಯುದ್ಧಂ ಕಂಬಲಿಕಶ್ಚಕ್ರೇ ಸಮಂ ಕಂಬಲಿಕೇನ ಚ ॥ ೨೬
ಆರೋಹಣೇನ ಚ ಸಮಂ ಸ ಕುಂಜರಕುಮಾರಕಃ ।
ಮಹೋತ್ಪಾತಾಪರಾಖ್ಯೇಣ ಪ್ರಹಸ್ತೋ ದೋಹನೇನ ಚ ॥ ೨೭

೨೮. ಈ ರೀತಿಯಾಗಿ ಮಹಾರಥರು ವ್ಯೂಹಾಗ್ರದಲ್ಲಿ ಒಬ್ಬರೊಡನೊಬ್ಬರು ಕಾದಾಡುತ್ತಿದ್ದಾಗ, ಸುನೀಥನು ಮಯನನ್ನು ಕುರಿತು ಹೀಗೆಂದನು.

೨೯. "ಕಷ್ಟ ಒದಗಿತಲ್ಲ ! ನಾನಾ ರೀತಿಯ ಯುದ್ಧದಲ್ಲಿ ನಿಪುಣರಾದರೂ ನಮ್ಮ ಮಹಾರಥಿಗಳಾದ ಶೂರರನ್ನು ಈ ಪ್ರತಿರಥಿಗಳು ವ್ಯೂಹ ಪ್ರವೇಶ ಮಾಡದಂತೆ ಹೇಗೆ ತಡೆದಿದ್ದಾರೆ ನೋಡಿದೆಯಾ ?

೩೦. ಹಿಂದು ಮುಂದು ನೋಡದೆ ಪ್ರಭಾಸನು ಏಕಾಂಗಿಯಾಗಿ ವ್ಯೂಹದ ಒಳಗೆ ನುಗ್ಗಿಬಿಟ್ಟನು. ಈಗ ಯಾರಿಗೆ ಏನಾಗುತ್ತದೆಂದು ಹೇಳಲು ಬರುವುದಿಲ್ಲ.

೩೧–೩೨. ಇದನ್ನು ಕೇಳಿದ ಸುವಾಸಕುಮಾರನು ಅವನಿಗೆ ಹೇಳಿದನು. "ಮೂಲೋಕದ ಸುರರು, ಅಸುರರು, ಮನುಷ್ಯರೆಲ್ಲ ಒಟ್ಟಾದರೂ ಒಬ್ಬ ಪ್ರಭಾಸನಿಗೆ ಸಮನಾಗುವುದಿಲ್ಲ ಎಂದ ಮೇಲೆ ಈ ಖೇಚರರ ಪಾಡೇನು ? ಇದೆಲ್ಲ ತಿಳಿದಿದ್ದರೂ ನಿಮಗೇಕೆ ಬೇಡದೆ ಶಂಕೆಯುಂಟಾಗುತ್ತಿದೆ ?

೩೩. ಮುನಿಕುಮಾರನು ಹೀಗೆ ಹೇಳುತ್ತಿರುವಾಗಿ ಕಾಲಕಂಪನನೆಂಬ ವಿದ್ಯಾಧರನು ಪ್ರಭಾಸನಿಗೆ ಎದುರಾಳಿಯಾಗಿ ನಿಂತನು.

---

ಏವಂ ಮಹಾರಥದ್ವಂದ್ವೇಷ್ವೇಷು ತತ್ರ ಪರಸ್ಪರಮ್ ।
ವ್ಯೂಹಾಗ್ರೇ ಯುಧ್ಯಮಾನೇಷು ಸುನೀಥೋ ಮಯಮಭ್ಯಧಾತ್ ॥ ೨೮
ಕಷ್ಟಮಸ್ಮದ್ರಥಾಃ ಶೂರಾ ನಾನಾಯುದ್ಧವಿದೋಽಪ್ಯಮೀ ।
ರುದ್ಧಾಃ ಪ್ರತಿರಥೈರೇತೈಃ ಪಶ್ಯ ವ್ಯೂಹಪ್ರವೇಶತಃ ॥ ೨೯
ಪ್ರಭಾಸಶ್ಚೈಕ ಏವಾಗ್ರೇ ಪ್ರವಿಷ್ಟೋಽತ್ರಾವಿಚಾರಿತಮ್ ।
ತನ್ನ ಜಾನೀಮಹೇ ಕಸ್ಯ ಕಿಮಿವಾತ್ರ ಭವಿಷ್ಯತಿ ॥ ೩೦
ಏತಚ್ಛ್ರುತ್ವಾ ಬ್ರವೀತಿ ಸ್ಮ ತಂ ಸುವಾಸಕುಮಾರಕಃ ।
ತ್ರೈಲೋಕ್ಯೇಽಪಿ ನ ಪರ್ಯಾಪ್ತಾಃ ಸಸುರಾಸುರಮಾನುಷಾಃ ॥ ೩೧
ಏಕಸ್ಯಾಸ್ಯ ಪ್ರಭಾಸಸ್ಯ ಕಿಂ ಪುನಃ ಖೇಚರಾ ಇಮೇ ।
ತದೇಷಾ ಕಥಮಸ್ಥಾನೇ ಶಂಕಾ ವೋ ಜಾನತಾಮಪಿ ॥ ೩೨
ಏವಂ ಮುನಿಕುಮಾರೇಽಸ್ಮಿನ್ಬ್ರುವಾಣೇ ಕಾಲಕಂಪನಃ ।
ವಿದ್ಯಾಧರಃ ಪ್ರಭಾಸಸ್ಯ ಯುಧಿ ಸಂಮುಖಮಾಯಯೌ ॥ ೩೩

೩೪–೩೫. ಆಗ ಪ್ರಭಾಸನು ಅವನನ್ನು ಕುರಿತು, "ಎಲ, ಎಲ, ಕಾಲಕಂಪನ, ನೀನು ನಮಗೆ ಬಹಳ ಅಪಕಾರ ಮಾಡಿದ್ದೀಯೆ, ಬಾ. ನಿನ್ನ ಪೌರುಷವನ್ನು ಪರೀಕ್ಷಿಸೋಣ' ಎನ್ನುತ್ತಾ ಅವನ ಮೇಲೆ ವಿಶಿಖಾವಲಿ ಎಂಬ ಅಸ್ತ್ರವನ್ನು ಪ್ರಯೋಗಿಸಿದನು. ಅವನೂ ಕೂಡ ನೂರಾರು ತೀಕ್ಷ್ಣವಾದ ಬಾಣಗಳನ್ನು ಬಿಟ್ಟು ಅದನ್ನು ನಿವಾರಿಸಿದನು.

೩೬. ಹೀಗೆ ತ್ರಿಭುವನಗಳ ವೀಕ್ಷಕರಿಗೆಲ್ಲ ಆಶ್ಚರ್ಯವುಂಟಾಗುವಂತೆ ಆ ವಿದ್ಯಾಧರರೂ, ಮನುಷ್ಯರೂ ಅಸ್ತ್ರಪ್ರತ್ಯಸ್ತ್ರಗಳನ್ನು ಒಬ್ಬರ ಮೇಲೆ ಒಬ್ಬರು ಪ್ರಯೋಗಿಸುತ್ತಾ ಯುದ್ಧದಲ್ಲಿ ತೊಡಗಿದರು.

೩೭. ಬಳಿಕ ಪ್ರಭಾಸನು ಒಂದು ಬಾಣ ಪ್ರಯೋಗದಿಂದ ಕಾಲಕಂಪನನ ಧ್ವಜವನ್ನು ಬೀಳಿಸಿದನು. ಎರಡನೆಯ ಬಾಣದಿಂದ ಸಾರಥಿಯನ್ನು ಬಲಿ ತೆಗೆದುಕೊಂಡನು.

೩೮. ನಂತರ ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಕತ್ತರಿಸಿದನು. ಎರಡೆರಡು ಬಾಣಗಳನ್ನು ಬಿಟ್ಟು ಎರಡು ಕೈಗಳನ್ನೂ ಎರಡು ತೋಳುಗಳನ್ನೂ ಕಿವಿಗಳನ್ನೂ ಕತ್ತರಿಸಿದನು.

೩೯. ಹೀಗೆ, ಪ್ರಭಾಸನು ಅದ್ಭುತವಾದ ಲಾಘವವನ್ನು ತೋರುತ್ತಾ ಒಂದು ಚೂಪಾದ ಬಾಣದಿಂದ ಶತ್ರುವಿನ ತಲೆಯನ್ನೇ ತರಿದನು.

೪೦. ಮೊದಲು ಅವನು ಅನೇಕ ಮಹಾವೀರರನ್ನು ಕೊಂದಿದ್ದರಿಂದ ಉಂಟಾಗಿದ್ದ ಕೋಪದಿಂದಲೋ ಎಂಬಂತೆ ಪ್ರಭಾಸನು ಕಾಲಕಂಪನನನ್ನು ನಿಗ್ರಹಿಸಿದನು.

---

ತತಃ ಪ್ರಭಾಸೋಽವಾದೀತ್ತಂ ರೇ ರೇ ಹ್ಯಪಕೃತಂ ತ್ವಯಾ ।
ಅತೀವ ನಸ್ತದದ್ಯೇಹ ಪಶ್ಯಾಮಸ್ತವ ಪೌರುಷಮ್ ॥ ೩೪
ಇತ್ಯುಕ್ತ್ವಾ ವ್ಯಸೃಜತ್ತಸ್ಮಿನ್ ಪ್ರಭಾಸೋ ವಿಶಿಖಾವಲಿಮ್ ।
ಸೋಽಪಿ ತಂ ಸಾಯಕೈಃ ಕಾಲಕಂಪನೋಽವಾಕಿರಚ್ಛಿತೈಃ ॥ ೩೫
ಅಸ್ತ್ರಪ್ರತ್ಯಸ್ತ್ರಯುದ್ಧೇನ ಯುಯುಧಾತೇ ಮಿಥಸ್ತತಃ ।
ಪ್ರದತ್ತಭುವನಾಶ್ಚರ್ಯೌ ತೌ ವಿದ್ಯಾಧರಮಾನುಷೌ ॥ ೩೬
ಅಥ ಪ್ರಭಾಸೋ ವಿಶಿಖೇನೈಕೇನಾಪಾತಯದ್ಧ್ವಜಮ್ ।
ದ್ವಿತೀಯೇನಾವಧೀತ್ಕಾಲಕಂಪನಸ್ಯ ಚ ಸಾರಥಿಮ್ ॥ ೩೭
ಚತುರ್ಭಿಶ್ಚತುರಶ್ಚಾಶ್ವಾನ್ಧನುರೇಕೇಣ ಚಾಚ್ಛಿನತ್ ।
ದ್ವಾಭ್ಯಾಂ ಹಸ್ತೌ ಭುಜೌ ದ್ವಾಭ್ಯಾಂ ದ್ವಾಭ್ಯಾಂ ಚ ಶ್ರವಣಾವುಭೌ ॥ ೩೮
ಏಕೇನ ಶಿತಧಾರೇಣ ಶಿರಶ್ಚಿಚ್ಛೇದ ತಸ್ಯ ಚ ।
ಪ್ರಭಾಸಃ ಪತ್ರಿಣಾ ಶತ್ರೋರ್ದರ್ಶಿತಾದ್ಭುತಲಾಘವಃ ॥ ೩೯
ಏವಂ ಪ್ರಾಙ್ನಿಹತಾನೇಕಪ್ರವೀರೋತ್ಥೇನ ಮನ್ಯುನಾ ।
ಪ್ರಭಾಸೋ ನಿಗ್ರಹಂ ಕಾಲಕಂಪನಸ್ಯ ವ್ಯಧಾದಿವ ॥ ೪೦

೪೧. ಈ ರೀತಿಯಾಗಿ ಮನುಜರೂ ಅಸುರರೂ ಸೇರಿ ವಿದ್ಯಾಧರೇಶನನ್ನು ಕೊಂದು ಕೆಡವಿದ್ದನ್ನು ಕಂಡ ಖೇಚರರೆಲ್ಲ ಆರ್ತನಾದಗೈಯುತ್ತಾ ದುಃಖದಲ್ಲಿ ಮುಳುಗಿದರು.

೪೨. ಆಗ ಕಾಲಂಜರಗಿರಿಯ ಒಡೆಯನಾದ ವಿದ್ಯುತ್ ಪ್ರಭನೆಂಬ ವಿದ್ಯಾಧರಾಧೀಶನು ಕ್ರೋಧದಿಂದ ಪ್ರಭಾಸನನ್ನು ಎದುರಿಸಿದನು.

೪೩. ಆದರೆ ಪ್ರಭಾಸನು ಅವನ ಮಹಾಧ್ವಜವನ್ನು ಕೆಡಹಿದನಂತರ ಅವನು ಹಿಡಿದ ಧನುಸ್ಸನ್ನು ಮತ್ತೆ ಮತ್ತೆ ಕತ್ತರಿಸಿದನು.

೪೪. ವಿದ್ಯುತ್‌ಪ್ರಭನು ಮಾಯಾಶಕ್ತಿಯಿಂದ ನಿಗೂಢನಾಗಿ, ಆಕಾಶಕ್ಕೆ ಜಿಗಿದು ಪ್ರಭಾಸನ ಮೇಲೆ ಕತ್ತಿ, ಗದೆ ಮುಂತಾದ ಆಯುಧಗಳ ಮಳೆಯನ್ನೇ ಸುರಿಸಿದನು.

೪೫. ಪ್ರಭಾಸನೂ ಕೂಡ ಆಯಾ ಆಯುಧಗಳಿಗೆ ಯುಕ್ತವಾದ ಅಸ್ತ್ರಗಳಿಂದ ಅವುಗಳನ್ನು ತಡೆದು, ಪ್ರಕಾಶನಾಸ್ತ್ರವನ್ನು ಬಿಟ್ಟು ಕಾಣದಾಗಿದ್ದ ವಿದ್ಯಾಧರನ ರೂಪವು ಕಾಣುವಂತೆ ಮಾಡಿದನು.

೪೬. ನಂತರ, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ಅದರ ತೇಜಸ್ಸಿನಿಂದ ವಿದ್ಯುತ್ ಪ್ರಭನು ಸುಟ್ಟುಹೋಗಿ ಅಂಬರದಿಂದ ಸತ್ತು ಕೆಳಗುರುಳುವಂತೆ ಮಾಡಿದನು.

---

ದೃಷ್ಟ್ವಾ ಚ ತಂ ಹತಂ ವಿದ್ಯಾಧರೇಶಂ ಮನುಜಾಸುರೈಃ ।
ನಾದಶ್ಚಕ್ರೇ ವಿಷಾದಶ್ಚ ಜಗ್ಮೇ ಸಪದಿ ಖೇಚರೈಃ ॥ ೪೧
ತತೋ ವಿದ್ಯುತ್ಪ್ರಭೋ ನಾಮ ಕಾಲಂಜರಗಿರೀಶ್ವರಃ ।
ಪ್ರಭಾಸಮಭ್ಯಧಾವತ್ತಂ ಕ್ರುಧಾ ವಿದ್ಯಾಧರಾಧಿಪಃ ॥ ೪೨
ತಸ್ಯಾಪಿ ಯುಧ್ಯಮಾನಸ್ಯ ಪ್ರಭಾಸಃ ಸ ಮಹಾಧ್ವಜಮ್ ।
ಛಿತ್ತ್ವಾ ಚಕರ್ತ ಕೋದಂಡಮಾತ್ತಮಾತ್ತಂ ಪುನಃ ಪುನಃ ॥ ೪೩
ತತಃ ಸ ಮಾಯಯೋತ್ಪತ್ಯ ಚ್ಛನ್ನೋ ವಿದ್ಯುತ್ಪ್ರಭೋ ನಭಃ ।
ಪ್ರಭಾಸಸ್ಯೋಪರಿ ಕ್ಷಿಪ್ತೋ ವವರ್ಷಾಸಿಗದಾದಿಕಾನ್ ॥ ೪೪
ಪ್ರಭಾಸೋಽಪಿ ವಿಧೂಯಾಸ್ತ್ರೈಸ್ತದಾಯುಧಪರಂಪರಾಮ್ ।
ಕೃತ್ವಾ ಪ್ರಕಾಶನಾಸ್ತ್ರೇಣ ಪ್ರಕಾಶಂ ತಂ ನಭಶ್ಚರಮ್ ॥ ೪೫
ದತ್ತ್ವಾ ಮಹಾಸ್ತ್ರಮಾಗ್ನೇಯಂ ತತ್ತೇಜೋದಗ್ಧಮಂಬರಾತ್ ।
ವಿದ್ಯುತ್ಪ್ರಭಂ ಭೂಮಿತಲೇ ಗತಜೀವಮಪಾತಯತ್ ॥ ೪೬

೪೭–೪೮. ಇದನ್ನು ನೋಡಿ ಶ್ರುತಶರ್ಮನು ತನ್ನ ಕಡೆಯ ಮಹಾರಥಿಗಳನ್ನು ಕುರಿತು, "ನೋಡಿದಿರಾ, ಇವನು ಇಬ್ಬಿಬ್ಬರು ಮಹಾರಥಿಯೂಥಪತಿಗಳನ್ನು ಕೆಡಹಿದ್ದಾನೆ. ಆದರೂ ಇನ್ನೂ ಸಹಿಸಿಕೊಂಡಿದ್ದೀರಲ್ಲ! ಎಲ್ಲ ಒಟ್ಟಾಗಿ ಸೇರಿ ಇವನನ್ನು ಮುಗಿಸಿಬಿಡಿ' ಎಂದನು. ಅದನ್ನು ಕೇಳಿದ ಎಂಟುಜನ ರಥಿಗಳು ಕೋಪಾವಿಷ್ಟರಾಗಿ ಪ್ರಭಾಸನನ್ನು ಸುತ್ತುಗಟ್ಟಿದರು.

೪೯. ಅವರಲ್ಲಿ ಒಬ್ಬನು ಕಂಕಟವೆಂಬ ಮಹಾಪರ್ವತ ನಿವಾಸಿಯಾದ ರಥಯೂಥಮುಖ್ಯ ಪ್ರಸಿದ್ಧವಿದ್ಯಾಧರ ರಾಜನಾದ ಇವನ ಹೆಸರು ಊರ್ಧ್ವರೋಮ ಎಂದು.

೫೦. ಮತ್ತೊಬ್ಬ ಧರಣೀಧರಶೈಲಾಧಿಪತಿಯಾದ ವಿಕ್ರೋಶನೆಂಬ ಮಹಾರಥಿ. ಈತನೂ ಕೂಡ ವಿದ್ಯಾಧರ ರಾಜನೇ.

೫೧. ಮೂರನೆಯವನು ಲೀಲಾಪರ್ವತ ವಾಸಿಯಾದ ಇಂದುಮಾಲೀ ಎಂಬ ವಿದ್ಯಾಧರಪತಿ. ಈತನು ವೀರನೂ ಅತಿರಥಯೂಥಪತಿಯೂ ಆದವನು.

೫೨. ವಿದ್ಯಾಧರಪತಿಯೂ ರಥಯೂಥಪತಿಯೂ ಆದ ಮಲಯಪರ್ವತ ವಾಸಿಯಾದ ಕಾಕಾಂಡಕನೆಂಬುವನು ನಾಲ್ಕನೆಯವನು.

---

ತದ್ದೃಷ್ಟ್ವಾ ಶ್ರುತಶರ್ಮಾ ತಾನ್ನಿಜಗಾದ ಮಹಾರಥಾನ್ ।
ಪಶ್ಯತಾನೇನ ನಿಹತೌ ದ್ವೌ ಮಹಾರಥಯೂಥಪೌ ॥ ೪೭
ತತ್ಕಿಂ ಸಹಧ್ವೇ ಸಂಭೂಯ ಯುಷ್ಮಾಭಿರ್ಹನ್ಯತಾಮಯಮ್ ।
ತಚ್ಛ್ರುತ್ವಾಷ್ಟೌ ರಥಾಃ ಕ್ರುದ್ಧಾಃ ಪ್ರಭಾಸಂ ಪರ್ಯವಾರಯನ್ ॥ ೪೮
ಏಕೋ ಕಂಕಟಕಾದ್ರೀಂದ್ರನಿವಾಸೀ ರಥಯೂಥಪಃ ।
ಊರ್ಧ್ವರೋಮೇತಿ ವಿಖ್ಯಾತೋ ವಿದ್ಯಾಧರಮಹೀಪತಿಃ ॥ ೪೯
ಧರಣೀಧರಶೈಲಾಧಿಪತಿರ್ವಿಕ್ರೋಶನಾಭಿಧಃ ।
ವಿದ್ಯಾಧರಾಣಾಮಧಿಪೋ ದ್ವಿತೀಯಶ್ಚ ಮಹಾರಥಃ ॥ ೫೦
ಇಂದುಮಾಲೀ ತೃತೀಯಶ್ಚ ಲೀಲಾಪರ್ವತಕೇತನಃ ।
ವೀರೋಽತಿರಥಯೂಥಸ್ಯ ಪತಿರ್ವಿದ್ಯಾಧರಪ್ರಭುಃ ॥ ೫೧
ಮಲಯಾದ್ರಿನಿವಾಸೀ ಚ ಕಾಕಾಂಡಕ ಇತಿ ಶ್ರುತಃ ।
ರಥಯೂಥಪತೀ ರಾಜಾ ಚತುರ್ಥಃ ಖೇಚರೋತ್ತಮಃ ॥ ೫೨

೫೩–೫೫. ಐದನೆಯವನು ನಿಕೇತಾದ್ರಿಪತಿ. ಈತನ ಹೆಸರು ದರ್ಪವಾಹ ಎಂದು. ಆರನೆಯವನು ಅಂಜನಗಿರಿಗೊಡೆಯವಾದ ಧೂರ್ತವಯನ ಎಂಬುವನು. ಇವರೀರ್ವರೂ ವಿದ್ಯಾಧರನಾಯಕರು ಮತ್ತು ರಥಯೂಥ ಮುಖ್ಯರು. ಏಳನೆಯವನು ಕುಮಾರ ಪರ್ವತರಾಜನಾದ ವರಾಹಸ್ವಾಮಿ ಎಂಬುವನು ಗರ್ಧಭರಥವುಳ್ಳವನು. ಮಹಾರಥಗಳ ಮುಖ್ಯಸ್ಥನು. ಅವನಂತಹವನೇ ಆದ ಮೇಧಾವರನೆಂಬುವನು ಎಂಟನೆಯವನು; ದುಂದುಭಿ ಪರ್ವತ ಪ್ರಾಂತಕ್ಕೆ ಅಧಿಪತಿಯಾದವನು.

೫೬ ಈ ಎಂಟು ಜನರೂ ಒಟ್ಟಿಗೆ ಹಾಕಿದ ಮುತ್ತಿಗೆಯನ್ನು ಅವರು ತೂರುತ್ತಿದ್ದ ಬಾಣಗಳನ್ನು ತಡೆದು ಪ್ರಭಾಸನು ಏಕಕಾಲದಲ್ಲಿ ತನ್ನ ಬಾಣಗಳಿಂದ ಎಲ್ಲರನ್ನೂ ಘಾಸಿಗೊಳಿಸುತ್ತಿದ್ದನು.

೫೭ ಒಬ್ಬನ ಕುದುರೆಯನ್ನು ಕೊಂದು ಮತ್ತೊಬ್ಬನ ಸಾರಥಿಯನ್ನು ಕೊಂದನು. ಇನ್ನೊಬ್ಬನ ಬಾವುಟ ಬೀಳಿಸಿ ಮತ್ತೋರ್ವನ ಬಿಲ್ಲನ್ನು ಮುರಿದನು.

೫೮. ಮೇಧಾವರನ ಎದೆಯ ಭಾಗಕ್ಕೆ ನಾಲ್ಕು ಬಾಣಗಳನ್ನು ಹೊಡೆದು, ಅವನು ಒಮ್ಮೆಲೇ ಸತ್ತು ನೆಲಕ್ಕುರುಳುವಂತೆ ಮಾಡಿದನು.

---

ನಿಕೇತಾದ್ರಿಪತಿರ್ನಾಮ್ನಾ ದರ್ಪವಾಹಶ್ಚ ಪಂಚಮಃ ।
ಷಷ್ಠಶ್ಚ ಧೂರ್ತವಯನೋ ನಾಮ್ನಾಂಜನಗಿರೀಶ್ವರಃ ॥ ೫೩
ವಿದ್ಯಾಧರಾವಿಮೌ ಚಾತಿರಥಯೂಥಪತೀ ಉಭೌ ।
ಸಪ್ತಮೋ ಗರ್ದಭರಥೋ ರಾಜಾ ಕುಮುದಪರ್ವತೇ ॥ ೫೪
ನಾಮ್ನಾ ವರಾಹಸ್ವಾಮೀತಿ ಯೋ ಮಹಾರಥಯೂಥಪಃ ।
ತದ್ರೂಪೋ ದುಂದುಭಿಕ್ಷ್ಮಾಭೃದ್ರಥೋ ಮೇಧಾವರೋಽಷ್ಟಮಃ ॥ ೫೫
ಏಭಿರಷ್ಟಭಿರಾಗತ್ಯ ಮುಕ್ತಾನ್‌ಬಾಣಾನ್ವಿಧೂಯ ಸಃ ।
ಪ್ರಭಾಸೋ ಯುಗಪತ್ಸರ್ವಾನ್‌ಸಾಯಕೈರ್ವಿಧ್ಯತಿ ಸ್ಮ ತಾನ್ ॥ ೫೬
ಜಘಾನ ಕಸ್ಯಚಿಚ್ಚಾಶ್ವಾನ್‌ಕಸ್ಯಚಿತ್ಸಾರಥಿಂ ತಥಾ ।
ಚಕರ್ತ ಕಸ್ಯಚಿತ್ಕೇತುಂ ಕಸ್ಯಚಿಚ್ಚಾಚ್ಛಿನದ್ಧನುಃ ॥ ೫೭
ಮೇಧಾವರಂ ಚತುರ್ಭಿಸ್ತು ಶರೈರ್ವಿದ್ಧ್ವಾ ಸಮಂ ಹೃದಿ ।
ಅಪಾತಯನ್ಮಹೀಪೃಷ್ಠೇ ಸದ್ಯೋಽಪಹೃತಜೀವಿತಮ್ ॥ ೫೮

೫೯. ನಂತರ, ಇತರರೊಡನೆ ಯುದ್ಧದಲ್ಲಿ ತೊಡಗಿರುವಾಗಲೇ, ಗುಂಗುರು ಕೂದಲನ್ನು ಮೇಲೆತ್ತಿ ಕಟ್ಟಿದ್ದ ಊರ್ಧ್ವರೋಮನ ತಲೆಯನ್ನು ಅಂಜಲಿಕ ಬಾಣದಿಂದ ಕತ್ತರಿಸಿದನು.

೬೦. (ಪ್ರಭಾಸನು) ಉಳಿದ ಆರು ಜನರ ಕುದುರೆ ಸಾರಥಿಗಳನ್ನು ಸಾಯಿಸಿ ಅವರ ತಲೆಗಳನ್ನು ಭಲ್ಲೆಯಿಂದ ಕತ್ತರಿಸಿ ಬೀಳಿಸಿದನು.

೬೧. ಆಗ ಅವನ ತಲೆಯ ಮೇಲೆ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಇದರಿಂದ ಅಸುರರಾಜರು ಉತ್ತೇಜಿತರಾದರೆ ಖೇಚರರ ಮುಖಗಳು ಕಳೆಗುಂದಿದವು.

೬೨. ಆಗ ಶ್ರುತಶರ್ಮನು ಇನ್ನೂ ನಾಲ್ಕು ಜನರನ್ನು ಕಳಿಸಿದನು. ಧನುರ್ಧಾರಿಗಳಾದ ಆ ಮಹಾರಥರು ಪ್ರಭಾಸನನ್ನು ಎದುರಿಸಿದರು.

೬೩. ಅವರಲ್ಲಿ ಒಬ್ಬನು ಕುರಂಡಕ ಗಿರಿಯ ಒಡೆಯ ಕಾಚರಕ. ಮತ್ತೊಬ್ಬ ದಿಂಡಿಮಾಲೀ ಎಂಬ ಹೆಸರಿನ ಪಂಚಕಾದ್ರಿಯ ನಿವಾಸಿ.

೬೪. ಮೂರನೆಯವನು ವಿಭಾವಸು ಜಯಪುರಪರ್ವತದ ರಾಜನು. ನಾಲ್ಕನೆಯವನು ಧವಲ ಎಂಬ ಭೂಮಿ ತುಂಡಕದ ರಾಜ.

೬೫. ಮಹಾರಥರ ಗಣಾಧಿಪತಿಗಳೂ ಮತ್ತು ವಿದ್ಯಾಧರ ಶ್ರೇಷ್ಠರೂ ಆದ ಇವರೆಲ್ಲರೂ ಒಟ್ಟೊಟ್ಟಿಗೆ ಪ್ರಭಾಸನ ಮೇಲೆ ಐದು ಐದುನೂರು ಬಾಣಗಳನ್ನು ಬಿಟ್ಟರು.

---

ತತಶ್ಚ ಯೋಧಯನ್ನನ್ಯಾನ್ ಕುಂಚಿತೋದ್ಬದ್ಧಕುಂತಲಮ್ ।
ಶರೇಣಾಂಜಲಿಕೇನಾರಾದೂರ್ಧ್ವರೋಮ್ಣಃ ಶಿರೋಽಚ್ಛಿನತ್ ॥ ೫೯
ಶೇಷಾಂಶ್ಚ ಷಟ್ ತಾನೇಕೈಕಭಲ್ಲನಿಲೂರ್ನಕಂಧರಾನ್ ।
ಹತಾಶ್ವಸಾರಥೀನ್ಕೃತ್ವಾ ಸ ಪ್ರಭಾಸೋ ನ್ಯಪಾತಯತ್ ॥ ೬೦
ಪಪಾತ ಪುಷ್ಪವೃಷ್ಟಿಶ್ಚ ತಸ್ಯ ಮೂರ್ಧ್ನಿ ತತೋ ದಿವಃ ।
ಉತ್ತೇಜಿತಾಸುರನೃಪಾ ವಿಚ್ಛಾಯೀಕೃತಖೇಚರಾ ॥ ೬೧
ತತೋಽನ್ಯೇ ತತ್ರ ಚತ್ವಾರಃ ಪ್ರೇಷಿತಾಃ ಶ್ರುತಶರ್ಮಣಾ ।
ಮಹಾರಥಾಃ ಪ್ರಭಾಸಂ ತಂ ರುಂಧಂತಿ ಸ್ಮ ಧನುರ್ಧರಾಃ ॥ ೬೨
ಏಕಃ ಕಾಚರಕೋ ನಾಮ ಕುರಂಡಕಗಿರೇಃ ಪತಿಃ ।
ದ್ವಿತೀಯೋ ದಿಂಡಿಮಾಲೀ ಚ ಪಂಚಕಾದ್ರಿಸಮಾಶ್ರಯಃ ॥ ೬೩
ವಿಭಾವಸುಸ್ತೃತೀಯಶ್ಚ ರಾಜಾ ಜಯಪುರಾಚಲೇ ।
ಚತುರ್ಥೋ ಧವಲೋ ನಾಮ ಭೂಮಿತುಂಡಕಶಾಸಿತಾ ॥ ೬೪
ತೇ ಮಹಾರಥಯೂಥಾಧಿಪತಯಃ ಖೇಚರೋತ್ತಮಾಃ ।
ಪ್ರಭಾಸೇ ಪಂಚ ಪಂಚೇಷುಶತಾನಿ ಮುಮುಚುಃ ಸಮಮ್ ॥ ೬೫

೬೬–೬೭. ಆದರೆ ಅವನು ಇದನ್ನೆಲ್ಲ ಗಣನೆಗೆ ತೆಗೆದುಕೊಳ್ಳದೆ ಒಬ್ಬೊಬ್ಬರಿಗೆ ಕೇವಲ ಎಂಟು ಬಾಣಗಳನ್ನು ಬಿಟ್ಟು ಕ್ರಮವಾಗಿ ಒಬ್ಬೊಬ್ಬರನ್ನೂ ಮುಗಿಸಿದನು. ಒಂದು ಬಾಣದಿಂದ ಧ್ವಜವನ್ನೂ, ಇನ್ನೊಂದರಿಂದ ಧನುಸ್ಸನ್ನೂ, ಇನ್ನೊಂದರಿಂದ ಸಾರಥಿಯನ್ನೂ ನಾಲ್ಕು ಬಾಣಗಳಿಂದ ಅಶ್ವಗಳನ್ನೂ ಒಂದು ಬಾಣದಿಂದ ತಲೆಯನ್ನೂ ತರಿದು ವಿಜಯಾಟ್ಟಹಾಸ ಮಾಡಿದನು.

೬೮. ನಂತರ ಶ್ರುತಶರ್ಮನ ಆಜ್ಞೆಯ ಮೇರೆಗೆ ಮತ್ತೆ ಪ್ರಭಾಸನನ್ನು ಎದುರಿಸಲು ಇನ್ನೂ ನಾಲ್ವರು ವಿದ್ಯಾಧರರು ಮುನ್ನುಗ್ಗಿದರು.

೬೯–೭೧. ಅವರಲ್ಲಿ ಒಬ್ಬನು ಕುವಲಯಶ್ಯಾಮವರ್ಣದ ವಿಶ್ವಾವಸುವಿನ ಕ್ಷೇತ್ರಜಬುಧನ ಪುತ್ರ ಭದ್ರಂಕರನೆಂಬುವನು, ಜಂಭಕನ ಕ್ಷೇತ್ರದಲ್ಲಿ ಅಂಗಾರಕನಿಂದ ಹುಟ್ಟಿದ ನಿಯಂತ್ರಕ ಮತ್ತೊಬ್ಬ, ಅಗ್ನಿಸಮಾನ ತೇಜಸ್ವಿ. ಮೂರನೆಯವನು ಕಾಲಕೋಪ. ದಾಮೋದರನ ಕ್ಷೇತ್ರದಲ್ಲಿ ಶನಿಗ್ರಹನಿಂದ ಹುಟ್ಟಿದವನು. ಇವನಿಗೆ ಕೆಂಚು ಕೂದಲೂ, ಕಡು ಕಪ್ಪು ಮೈ ಬಣ್ಣವೂ ಇದೆ. ಚಂದ್ರನ ಕ್ಷೇತ್ರದಲ್ಲಿ ಮಹೇಂದ್ರ ಸಚಿವನಾದ ಗ್ರಹನಿಂದ ಹುಟ್ಟಿದ ವಿಕ್ರಮ ಶಕ್ತಿಯು ಕನಕಕಾಂತಿಯಿಂದ ಕೂಡಿದವನು. ಇವರಲ್ಲಿ ಮೂವರು ಅತಿರಥ ಯೂಥಾಧಿಪತಿಗಳಿಗೂ ಮುಖ್ಯರು.

---

ಪ್ರಭಾಸಶ್ಚ ಕ್ರಮಾತ್ತೇಷಾಮೇಕೈಕಸ್ಯಾವಹೇಲಯಾ ।
ಏಕೇನ ಧ್ವಜಮೇಕೇನ ಧನುರೇಕೇನ ಸಾರಥಿಮ್ ॥ ೬೬
ಚತುರ್ಭಿರಶ್ವಾನಿಪುಣಾ ತ್ವೇಕೇನಾಪಾತಯಚ್ಛಿರಃ ।
ಶರೈರಷ್ಟಭಿರೇಕೈಕಂ ಸಮಾಪ್ಯೈವಂ ನನಾದ ಸಃ ॥ ೬೭
ಅಥ ವಿದ್ಯಾಧರಾ ಭೂಯಃ ಶ್ರುತಶರ್ಮಾಜ್ಞಯಾ ಯುಧಿ ।
ಅನ್ಯೇ ಚತ್ವಾರ ಏವಾಸ್ಯ ಪ್ರಭಾಸಸ್ಯ ಸಮಾಗಮನ್ ॥ ೬೮
ಏಕಃ ಕುವಲಯಶ್ಯಾಮಃ ಕ್ಷೇತ್ರೇ ವಿಶ್ವಾವಸೋರ್ಬುಧಾತ್ ।
ಜಾತೋ ಭದ್ರಂಕರೋ ನಾಮ ದ್ವಿತೀಯಶ್ಚ ನಿಯಂತ್ರಕಃ ॥ ೬೯
ಉತ್ಪನ್ನೋ ಜಂಭಕಕ್ಷೇತ್ರೇ ಭೌಮಾದಗ್ನಿನಿಭಪ್ರಭಃ ।
ತೃತೀಯಃ ಕಾಲಕೋಪಾಖ್ಯಃ ಕ್ಷೇತ್ರೇ ದಾಮೋದರಸ್ಯ ಚ ॥ ೭೦
ಜಾತಃ ಶನೈಶ್ಚರಾತ್ಕೃಷ್ಣಃ ಕಪಿಲಮೂರ್ಧಜಃ ।
ಜಾತಶ್ಚೋಡುಪತೇಃ ಕ್ಷೇತ್ರೇ ಮಹೇಂದ್ರಸಚಿವಾದ್ಗ್ರಹಾತ್ ॥ ೭೧
ನಾಮ್ನಾ ವಿಕ್ರಮಶಕ್ತಿಶ್ಚ ಚತುರ್ಥಃ ಕನಕದ್ಯುತಿಃ ।
ತ್ರಯೋಽತಿರಥಯೂಥಾಧಿಪತೀನಾಮೇಷು ಯೂಥಪಾಃ ॥ ೭೨

೨೩. ನಾಲ್ಕನೆಯವನಾದ ಮಹಾವೀರ ಎಲ್ಲರಿಗಿಂತ ಹೆಚ್ಚಿನ ಪರಾಕ್ರಮಶಾಲಿ. ಇವರೆಲ್ಲರೂ ಸೇರಿ ದಿವ್ಯಾಸ್ತ್ರಗಳ ಆಟೋಪದಿಂದ ಪ್ರಭಾಸನೊಡನೆ ಕಾದಿದರು.

೨೪. ಪ್ರಭಾಸನು ಅವರ ಎಲ್ಲ ಅಸ್ತ್ರಗಳನ್ನೂ ನಾರಾಯಣಾಸ್ತ್ರದಿಂದ ನಿವಾರಿಸಿಕೊಂಡನು; ಅಷ್ಟೇ ಅಲ್ಲದೆ ಆಟವಾಡಿದಂತೆ ಬಹು ಸುಲಭವಾಗಿ ಒಬ್ಬೊಬ್ಬರ ಧನುಸ್ಸನ್ನೂ ಎಂಟೆಂಟು ಚೂರುಗಳನ್ನಾಗಿ ಕತ್ತರಿಸಿಬಿಟ್ಟನು.

೨೫. ನಂತರ ಅವರು ಪ್ರಯೋಗಿಸಿದ ಪ್ರಾಸ, ಗದೆ ಮುಂತಾದ ಆಯುಧಗಳನ್ನು ಮುರಿದು ಅವರ ರಥಾಶ್ವಗಳನ್ನೂ, ಸಾರಥಿಗಳನ್ನೂ ಕೊಂದು ರಥಹೀನರನ್ನಾಗಿ ಮಾಡಿದನು.

೨೬. ಅದನ್ನು ಕಂಡು ಶ್ರುತಶರ್ಮನು ತ್ವರೆಯಿಂದ ಇನ್ನೂ ಹತ್ತು ವಿದ್ಯಾಧರ ರಥಯೂಥಪತಿ ಪ್ರಮುಖರನ್ನು ರಣಾಂಗಣಕ್ಕೆಳಿಸಿದನು.

೨೭. ದಮ, ನಿಯಮ ಎಂಬ ಇಬ್ಬರು ಸಮಾನರೂಪಿಗಳು, ಕೇತುಮಾಲ ಮತ್ತು ಈಶ್ವರನ ಕ್ಷೇತ್ರದಲ್ಲಿ ಹುಟ್ಟಿದ ಅಶ್ವಿನಿಕುಮಾರರಿಬ್ಬರು.

೨೮–೨೯. ವಿಕ್ರಮ, ಸಕ್ರಮ, ಪರಾಕ್ರಮ, ಅಕ್ರಮ, ಸಂಮರ್ದನ, ಮರ್ದನ, ಪ್ರಮರ್ದನ ಮತ್ತು ವಿಮರ್ದನರು ಮಕರಂದನ ಕ್ಷೇತ್ರಜರಾದ ಎಂಟುಜನ ವಸುಗಳ ಮಕ್ಕಳು. ಅವರು ಬಂದೊಡನೆಯೇ ಮೊದಲ ನಾಲ್ವರು ಬೇರೆ ರಥಗಳನ್ನು ಹತ್ತಿ ಬಂದರು.

---

ಚತುರ್ಥಸ್ತು ಮಹಾವೀರಸ್ತದಭ್ಯಧಿಕವಿಕ್ರಮಃ ।
ತೇ ಚ ಪ್ರಭಾಸಂ ದಿವ್ಯಾಸ್ತ್ರೈರ್ಯೋಧಯಾಮಾಸುರುದ್ಧತಾಃ ॥ ೨೩

ತಾನಿ ನಾರಾಯಣಾಸ್ತ್ರೇಣ ಪ್ರಭಾಸೋಽಸ್ತ್ರಾಣ್ಯವಾರಯತ್ ।
ತೇಷಾಂ ಚ ಹೇಲಯೈಕೈಕಸ್ಯಾಷ್ಟಕೃತ್ವೋಽಚ್ಛಿನದ್ಧನುಃ ॥ ೨೪

ತತಸ್ತತ್ಪ್ರಹಿತಾನ್ಪ್ರಾಸಗದಾದೀನ್ ಪ್ರತಿಹತ್ಯ ಸಃ ।
ಹತಾಶ್ವಸಾರಥೀನ್ ಸರ್ವಾನ್ವಿರಥಾನಕರೋಚ್ಚ ತಾನ್ ॥ ೨೫

ತದ್ದೃಷ್ಟ್ವಾ ವಿಸಸರ್ಜಾನ್ಯಾಂಛ್ರುತಶರ್ಮಾ ದ್ರುತಂ ದಶ ।
ರಥಯೂಥಪಯೂಥಾಧಿಪತೀನ್ವಿದ್ಯಾಧರಾಧಿಪಾನ್ ॥ ೨೬

ದಮಾಖ್ಯಂ ನಿಯಮಾಖ್ಯಂ ಚ ಸ್ವರೂಪಸದೃಶಾಕೃತೀ ।
ಕೇತುಮಾಲೇಶ್ವರಕ್ಷೇತ್ರೇ ಜಾತೌ ದ್ವಾವಶ್ವಿನೋಃ ಸುತೌ ॥ ೨೭

ವಿಕ್ರಮಂ ಸಂಕ್ರಮಂ ಚೈವ ಪರಾಕ್ರಮಮಥಾಕ್ರಮಮ್ ।
ಸಂಮರ್ದನಂ ಮರ್ದನಂ ಚ ಪ್ರಮರ್ದನವಿಮರ್ದನೌ ॥ ೨೮

ಕ್ಷೇತ್ರಜಾನ್ಮಕರಂದಸ್ಯಾಷ್ಟೌ ವಸುಸುತಾನ್ ಸಮಾನ್ ।
ತೇಷ್ವಾಗತೇಷು ಚಾದ್ಯಾಸ್ತೇಽಪ್ಯಾರೋಹನ್ನಪರಾನ್ರಥಾನ್ ॥ ೨೯

೮೦. ಒಟ್ಟು ಹದಿನಾಲ್ಕು ವೀರರು ಸೇರಿ ಸುರಿಸಿದ ಶರವರ್ಷವನ್ನು ಪ್ರಭಾಸನು ಏಕಾಂಗಿಯಾಗಿ, ಅಚಲನಾಗಿ ಎದುರಿಸಿದನು. ಎಂಥಹ ಆಶ್ಚರ್ಯ !

೮೧,೮೨. ನಂತರ ಸೂರ್ಯಪ್ರಭನ ಆಣತಿಯ ಮೇರೆಗೆ ವ್ಯೂಹಾಗ್ರದಲ್ಲಿನ ಯುದ್ಧವನ್ನು ನಿಲ್ಲಿಸಿ ಆಯುಧಧಾರಿಗಳಾಗಿ ಕುಂಜರಕುಮಾರನೂ ಪ್ರಭಾಸನೂ ಆಕಾಶಮಾರ್ಗದಿಂದ ಮೇಲಕ್ಕೆ ಹಾರಿ ಶ್ವೇತ ಮತ್ತು ಶ್ಯಾಮಲಾಕೃತಿಗಳನ್ನು ಧರಿಸಿ ರಾಮಕೃಷ್ಣರು ಒಟ್ಟಿಗೆ ಬಂದರೋ ಎಂಬಂತೆ ಅವನ ಬಳಿಗೆ ಬಂದರು.

೮೩. ಪದಾತಿಗಳಾಗಿದ್ದ ಅವರಿಬ್ಬರೂ ರಥದಲ್ಲಿ ಕುಳಿತಿದ್ದ ದಮನಿಯಮರ ಚಾಪಗಳನ್ನು ಮುರಿದು ಸಾರಥಿಗಳನ್ನು ಕೊಂದು ಅವರಲ್ಲಿ ತಳಮಳವುಂಟು ಮಾಡಿದರು.

೮೪. ಇದರಿಂದ ಭಯಪಟ್ಟು ಆಕಾಶಕ್ಕೆ ಹಾರಿದ ಅವರ ಮೇಲೆ ಕುಂಜರಕುಮಾರ, ಪ್ರಹಸ್ತರು ಆಯುಧಧಾರಿಗಳಾಗಿ ಏರಿಹೋದರು.

೮೫. ಅದನ್ನು ನೋಡಿದ ಸೂರ್ಯಪ್ರಭನು ಅತ್ಯಂತ ವೇಗವಾಗಿ ಅವರಿಬ್ಬರ ಸಹಾಯಕ್ಕಾಗಿ ಮಹಾಬುದ್ಧಿ, ಅಚಲಬುದ್ಧಿ ಎಂಬ ಇಬ್ಬರು ಮಂತ್ರಿಗಳನ್ನು ಸಾರಥಿಗಳನ್ನಾಗಿ ಕಳಿಸಿದನು.

---

ತೈಶ್ಚತುರ್ದಶಭಿಃ ಕೃತ್ಸ್ನೈರ್ಮಿಲಿತೈಃ ಶರವರ್ಷಿಭಿಃ ।
ನಿಷ್ಕಂಪ ಏವ ಯುಯುಧೇ ಪ್ರಭಾಸಶ್ಚಿತ್ರಮೇಕಕಃ ॥ ೮೦
ತತಃ ಸೂರ್ಯಪ್ರಭಾದೇಶಾದ್ವ್ಯೂಹಾಗ್ರಾತ್ತ್ಯಕ್ತಸಂಗತೌ ।
ಸ ಕುಂಜರಕುಮಾರಶ್ಚ ಪ್ರಹಸ್ತಶ್ಚ ಧೃತಾಯುಧೌ ॥ ೮೧
ಉತ್ಪತ್ಯ ವ್ಯೋಮಮಾರ್ಗೇಣ ಧವಲಶ್ಯಾಮಲಾಕೃತೀ ।
ತಸ್ಯೋಪಜಗ್ಮತುಃ ಪಾರ್ಶ್ವಂ ರಾಮಕೃಷ್ಣಾವಿವಾಪರೌ ॥ ೮೨
ತೌ ಪದಾತೀ ರಥಸ್ಥೌ ದ್ವೌ ದಮಂ ಚ ನಿಯಮಂ ಚ ತಮ್ ।
ವ್ಯಾಕುಲೀಚಕ್ರತುಶ್ಛಿನ್ನಚಾಪೌ ನಿಹತಸಾರಥೀ ॥ ೮೩
ಭಯಾದಾರೂಢಯೋರ್ವ್ಯೋಮ ತಯೋರಾರೋಹತಃ ಸ್ಮ ತೌ ।
ಸ ಕುಂಜರಕುಮಾರಶ್ಚ ಪ್ರಹಸ್ತಶ್ಚ ಧೃತಾಯುಧೌ ॥ ೮೪
ತದ್ದೃಷ್ಟ್ವಾ ರಭಸಾತ್ಸೂರ್ಯಪ್ರಭೋಽತ್ರ ಪ್ರಾಹಿಣೋತ್ತಯೋಃ ।
ಮಹಾಬುದ್ಧ್ಯಚಲದ್ಬುದ್ಧೀ ಸಾರಥಿತ್ವೇ ಸ್ವಮಂತ್ರಿಣೌ ॥ ೮೫

೮೬-೮೭ ಅವರಿಬ್ಬರೂ ಮಾಯೆಯಿಂದ ಅದೃಶ್ಯರಾಗಿದ್ದರೂ ಸಿದ್ಧಾಂಜನ ಪ್ರಯೋಗದಿಂದ ಕುಂಜರಕುಮಾರನು ಅವರನ್ನು ನೋಡಿ ವಿದ್ಯಾಧರಪುತ್ರರಾದ ದಮನಿಯಮರಿಬ್ಬರೂ ಓಡಿಹೋಗುವಂತೆ ಬಾಣಗಳ ಧಾರೆಗಳಿಂದ ಹೊಡೆದನು.

೮೮. ಉಳಿದ ಹನ್ನೆರಡು ಜನರೊಡನೆ ಯುದ್ಧ ಮಾಡುತ್ತಾ ಪ್ರಭಾಸನು ಅವರ ಕೋದಂಡಗಳನ್ನು ಅವರು ಅನೇಕಬಾರಿ ಸೇರಿಸಿಕೊಂಡರೂ ಮುರಿದು ಹಾಕಿದನು.

೮೯. ನಂತರ, ಅವರೆದುರಿಗೆ ಬಂದ ಪ್ರಹಸ್ತನು ಅವರೆಲ್ಲರ ಸಾರಥಿಗಳನ್ನೂ ಒಟ್ಟಿಗೆ ಹತಮಾಡಿದನು. ಅದೇ ಸಮಯದಲ್ಲಿ ಕುಂಜರ ಕುಮಾರನು ಅವರ ಕುದುರೆಗಳೆಲ್ಲವನ್ನೂ ತರಿದು ಹಾಕಿದನು.

೯೦. ಎಲ್ಲರೂ ರಥಹೀನರಾದರು. ಆ ಮೂವರು ವೀರರ ಆಕ್ರಮಣಕ್ಕೆ ಸಿಲುಕಿದ ಆ ಹನ್ನೆರಡು ವೀರರೂ ಸಮರವನ್ನು ಬಿಟ್ಟು ಓಡಿದರು.

೯೧. ಆ ಸಮಯದಲ್ಲಿ ರಥಮುಖ್ಯ ಮತ್ತು ಅತಿರಥ ಮುಖ್ಯರಾದ ಇಬ್ಬರು ವಿದ್ಯಾಧರವೀರರನ್ನು ಶ್ರುತಶರ್ಮನು ಕಳಿಸಿದನು. ಕೋಪ, ಸಂಕಟ, ನಾಚಿಕೆ ಎಲ್ಲವೂ ಸೇರಿ ಆತನನ್ನು ಜರ್ಜರಿತಗೊಳಿಸಿದ್ದವು.

೯೨. (ಅವರು ಕಳಿಸಿದ ವೀರರಲ್ಲಿ) ಒಬ್ಬನು ಚಂದ್ರಕುಲಾದ್ರಿಯ ಇಂದ್ರಪತಿಯ ಕ್ಷೇತ್ರದಲ್ಲಿ ನಿಶಾಕರನಿಂದ ಹುಟ್ಟಿದ ಚಂದ್ರಗುಪ್ತ ಅವನು ಚಂದ್ರನಂತೆ ಕಾಂತಿಯುಳ್ಳವನು.

---

ಸೋಽಥ ಪ್ರಹಸ್ತೋ ದೃಷ್ಟ್ವಾ ತಾವದೃಶ್ಯಾವಪಿ ಮಾಯಯಾ ।
ಸಿದ್ಧಾಂಜನಪ್ರಯೋಗೇಣ ಸ ಕುಂಜರಕುಮಾರಕಃ ॥ ೮೬
ತಥಾ ವಿವ್ಯಾಧ ಬಾಣೌಘೈಃ ಪಲಾಯ್ಯ ಯಯತುರ್ಯಥಾ ।
ದಮಶ್ಚ ನಿಯಮಶ್ಚೋಭೌ ತೌ ವಿದ್ಯಾಧರಪುತ್ರಕೌ ॥ ೮೭
ಪ್ರಭಾಸೋ ಯುಧ್ಯಮಾನಶ್ಚ ಶೇಷೈರ್ದ್ವಾದಶಭಿಃ ಸಹ ।
ತೇಷಾಂ ಚಕರ್ತ ಕೋದಂಡಾನಸಕೃತ್ತಲಿತಾನಪಿ ॥ ೮೮
ಪ್ರಹಸ್ತೋಽಭ್ಯೇತ್ಯ ಸರ್ವೇಷಾಮವಧೀತ್ಸಾರಥೀನ್ ಸಮಮ್ ।
ಸ ಕುಂಜರಕುಮಾರೋಽಪಿ ಜಘಾನ್ಯೇಷಾಂ ತುರಂಗಮಾನ್ ॥ ೮೯
ತತಸ್ತೇತ್ರಾರಥಾಃ ಸರ್ವೇ ದ್ವಾದಶಾಪಿ ಸಮೇತ್ಯ ತೇ ।
ಹನ್ಯಮಾನಾಸ್ತ್ರಿಭಿರ್ವೀರೈಃ ಪಲಾಯ್ಯ ಸಮರಾದ್ಯಯುಃ ॥ ೯೦
ತತೋಽನ್ಯೌ ಶ್ರುತಶರ್ಮಾ ದ್ವೌ ರಥಾತಿರಥಯೂಥಪೌ ।
ವಿದ್ಯಾಧರೌ ಪ್ರೇಷಿತವಾನ್ ದುಃಖಕ್ರೋಧತ್ರಪಾಕುಲಃ ॥ ೯೧
ಏಕಂ ಚಂದ್ರಕುಲಾದ್ರೀನ್ದ್ರಪತೇಃ ಕ್ಷೇತ್ರೇ ನಿಶಾಕರಾತ್ ।
ಉತ್ಪನ್ನಂ ಚಂದ್ರಗುಪ್ತಾಖ್ಯಂ ಕಾಂತಂ ಚಂದ್ರಮಿವಾಪರಮ್ ॥ ೯೨

೧೩. ಮತ್ತೊಬ್ಬನು ಧುರಂಧರ ಪರ್ವತಾಧಿಪತಿಯ ಕ್ಷೇತ್ರದಲ್ಲಿ ಹುಟ್ಟಿದ ನಗರಂಗಮನನು. ಈತನೂ ಅಪೂರ್ವ ಕಾಂತಿಯಿಂದ ಕೂಡಿದ್ದವನು. ಇವನು ಶ್ರುತಶರ್ಮನ ಸಚಿವನು.

೧೪. ಅವರಿಬ್ಬರೂ ಪ್ರಭಾಸ ಮುಂತಾದವರು ಬಾಣಗಳ ಮಹಾಪೂರದ ಎಸೆತದಿಂದ ಒಂದು ಕ್ಷಣದಲ್ಲೇ ವಿರಥಿಗಳಾದರು. ಅವರು ಯುದ್ಧವನ್ನು ಬಿಟ್ಟು ಕಣ್ಣಿಗೆ ಕಾಣದಂತಾದರು.

೧೫–೧೬. ಮನುಜರೂ, ಅಸುರವೀರರೂ ರಣಘೋಷ ಮಾಡುತ್ತಿರಲಾಗಿ ಸ್ವಯಂ ಶ್ರುತಶರ್ಮನೇ ಮಹೌಘ, ಆರೋಹಣ, ಉತ್ಪಾತ, ವೇತ್ರವತ್ ಎಂಬ ನಾಲ್ವರು ಮಹಾರಥರೊಡನೆ (ಯುದ್ಧಭೂಮಿಗೆ) ಬಂದನು. ಈ ನಾಲ್ವರೂ ತ್ವಷ್ಟಾ, ಭಗ, ಅರ್ಯಮಾ ಮತ್ತು ಪೂಷನ್‌ರವರ ಆತ್ಮಸಂಭವರು.

೧೭. ಮಲಯಮುಂತಾದ ಪರ್ವತ ಪ್ರದೇಶವನ್ನಾಳುವ ಚಿತ್ರಪಾದನೇ ಮೊದಲಾದ ವಿದ್ಯಾಧರರಾಜರ ಕ್ಷೇತ್ರಜ ಪುತ್ರರೂ ಆದ ಇವರುಗಳು ಮಹಾಪರಾಕ್ರಮಶಾಲಿ ಗಳಾಗಿದ್ದರು.

೧೮. (ಇವರೊಡನೆ) ಹಾಗೂ ಐದನೆಯವನಾದ, ಕ್ರೋಧದಿಂದ ಕುರುಡಾಗಿದ್ದ ಶ್ರುತಶರ್ಮನೊಡನೆ ಪ್ರಭಾಸಾದಿ ಮೂವರು ವೀರರೂ ಯುದ್ಧ ಮಾಡಿದರು.

---

ಧುರಂಧರಾಚಲಾಧೀಶಕ್ಷೇತ್ರೇ ಜಾತಂ ಮಹಾದ್ಯುತಿಮ್ ।
ನಗರಂಗಮನಾಮಾನಂ ದ್ವಿತೀಯಂ ಸಚಿವಂ ಸ್ವಕಮ್ ॥ ೧೩
ತಾವಪಿ ಕ್ಷಿಪ್ತಬಾಣೌಘೌ ಕ್ಷಣೇನ ವಿರಥೀಕೃತೌ ।
ತೈಃ ಪ್ರಭಾಸಾದಿಭಿಸ್ತ್ಯಕ್ತ್ವಾ ಯುದ್ಧಂ ನಷ್ಟೌ ಬಭೂವತುಃ ॥ ೧೪
ತತೋ ನದತ್ಸು ಮನುಜೇಷ್ವಸುರೇಷು ಚ ಸ ಸ್ವಯಮ್ ।
ಆಗಾಚ್ಚತುರ್ಭಿಃ ಸಹಿತಃ ಶ್ರುತಶರ್ಮಾ ಮಹಾರಥೈಃ ॥ ೧೫
ಮಹೌಘಾರೋಹಣೋತ್ಪಾತವೇತ್ರವತ್ಸಂಜ್ಞಕೈಃ ಕ್ರಮಾತ್ ।
ತ್ವಷ್ಟುರ್ಭಗಸ್ಯ ಚಾರ್ಯಮ್ಣಃ ಪೂಷ್ಣಶ್ಚಾಪ್ಯಾತ್ಮಸಂಭವೈಃ ॥ ೧೬
ಚತುರ್ಣಾಂ ಚಿತ್ರಪಾದಾದಿವಿದ್ಯಾಧರಮಹೀಭುಜಾಮ್ ।
ಮಲಯಾದ್ಯದ್ರಿನಾಥಾನಾಂ ಕ್ಷೇತ್ರಜೈಃ ಪ್ರಾಜ್ಯವಿಕ್ರಮೈಃ ॥ ೧೭
ತತಸ್ತೇನಾತ್ಯಮರ್ಷಾಂಧೇನಾತ್ಮನಾ ಪಂಚಮೇನ ತೇ ।
ಅಯುಧ್ಯಂತ ಪ್ರಭಾಸಾದ್ಯಾಸ್ತ್ರಯೋಽತ್ರ ಶ್ರುತಶರ್ಮಣಾ ॥ ೧೮

೯೯. ಅವರು ಯುದ್ಧಕಾಲದಲ್ಲಿ ಪರಸ್ಪರರ ಮೇಲೆ ಬಿಟ್ಟ ಬಾಣಗಳ ಜಾಲವು ಸೂರ್ಯಕಿರಣಗಳ ಬೇಗೆಯಿಂದ ರಣಲಕ್ಷ್ಮಿಯು ಬಳಲಬಾರದೆಂದು ನೆರಳಿಗಾಗಿ ವಿಶಾಲವಾದ ಚಪ್ಪರ ಹಾಕಿದಂತೆ ಆಕಾಶದಲ್ಲಿ ಕಾಣುತ್ತಿತ್ತು.

೧೦೦. ನಂತರ, ರಥಹೀನರಾಗಿ ಯುದ್ಧಭೂಮಿಯಿಂದ ಹಿಂದೆ ಓಡಿಹೋದ ಇನ್ನೂ ಅನೇಕ ವಿದ್ಯಾಧರರು ಪುನಃ ಬಂದು ಯುದ್ಧವನ್ನು ಸೇರಿಕೊಂಡರು.

೧೦೧-೧೦೨. ಶ್ರುತಶರ್ಮನ ಬೆಂಗಾವಲಿಗೆ ಅನೇಕ ವಿದ್ಯಾಧರರು ಬಂದು ಸೇರಿದ್ದನ್ನು ಕಂಡು ಸೂರ್ಯಪ್ರಭನೂ ಪ್ರಭಾಸಾದಿಗಳಿಗೆ ಒತ್ತಾಸೆ ನೀಡಲು ಮಹಾರಥಿಗಳೂ ತನ್ನ ಆಪ್ತಮಿತ್ರರೂ ಆದ ಪ್ರಜ್ಞಾಢ್ಯ ವೀರಸೇನ, ಶತಾನೀಕ ಮುಂತಾದ ರಾಜಪುತ್ರರನ್ನು ಕಳಿಸಿದನು.

೧೦೩. ಅವರುಗಳು ವ್ಯೋಮ ಮಾರ್ಗದಲ್ಲಿ ಹೋಗಲಾಗಿ, ಸೂರ್ಯಪ್ರಭನು ಅವರಿಗೆ ಬೇಕಾದ ರಥವೇ ಮುಂತಾದ ಯುದ್ಧ ಸಲಕರಣೆಗಳನ್ನು ಭೂತಾಸನ ವಿಮಾನದ ಮೂಲಕ ಅಲ್ಲಿಗೆ ಕಳಿಸಿಕೊಟ್ಟನು.

೧೦೪. ವ್ಯೋಮದಲ್ಲೇ ಎಲ್ಲ ಬಿಲ್ಗಾರರೂ ರಥಾರೂಢರಾಗಿ ಸನ್ನದ್ಧರಾಗಿರಲು ಶ್ರುತಶರ್ಮನ ಕಡೆಯವರಾದ ಇನ್ನೂ ಅನೇಕ ವಿದ್ಯಾಧರೇಂದ್ರರೂ ಕೂಡ ಅಲ್ಲಿಗೆ ಬಂದರು.

೧೦೫. ಪ್ರಭಾಸಾದಿಗಳೊಡನೆ ವಿದ್ಯಾಧರರಿಗೆ ಸಂಗ್ರಾಮ ಆರಂಭವಾಯಿತು. ಅದು ಸೈನ್ಯವನ್ನು ನಾಶಮಾಡಿಬಿಡುವ ಮಹಾ ಹತ್ಯಾಕಾಂಡವಾಗಿ ಆಗಿಹೋಯಿತು.

---

ತದಾ ತೈರ್ಮುಕ್ತಮನ್ಯೋನ್ಯಂ ಬಾಣಜಾಲಂ ಬಭೌ ದಿವಿ ।
ರಣಲಕ್ಷ್ಮ್ಯಾ ತಪತ್ಯರ್ಕೇ ವಿತಾನಕಮಿವಾತತಮ್ ॥ ೯೯
ತತೋ ವಿದ್ಯಾಧರಾಸ್ತೇಽಪಿ ಪುನಸ್ತತ್ರಾಯಯುರ್ಮೃಧೇ ।
ವಿರಥೀಭೂಯ ಯೇ ನಷ್ಟಾ ಬಭೂವುಃ ಸಮರಾತ್ತದಾ ॥ ೧೦೦
ಅಥ ತಾನ್ಶ್ರುತಶರ್ಮಾದೀನ್ಮಿಲಿತಾನಾಹವೇ ಬಹೂನ್ ।
ದೃಷ್ಟ್ವಾ ಸೂರ್ಯಪ್ರಭೋಽನ್ಯಾನ್ಸ್ವಾನ್ಪ್ರಭಾಸಾದ್ಯನುಪೋಷಣೇ ॥ ೧೦೧
ಮಹಾರಥಾನ್ಪ್ರಹಿತವಾನ್ಪ್ರಜ್ಞಾಢ್ಯಪ್ರಭೃತೀನ್ಸಖೀನ್ ।
ವೀರಸೇನಶತಾನೀಕಮುಖ್ಯಾನ್ರಾಜಸುತಾಂಸ್ತದಾ ॥ ೧೦೨
ವ್ಯೋಮ್ನಾತ್ರ ತೇಷಾಂ ಯಾತಾನಾಂ ಸ ಚ ಸೂರ್ಯಪ್ರಭೋ ರಥಾನ್ ।
ಭೂತಾಸನವಿಮಾನೇನ ಪ್ರಜಿಘಾಯ ದ್ಯುವರ್ತ್ಮನಾ ॥ ೧೦೩
ತತಃ ಸರ್ವೇಷು ತೇಷ್ವತ್ರ ರಥಾರೂಢೇಷು ಧನ್ವಿಷು ।
ವಿದ್ಯಾಧರೇಂದ್ರಾಃ ಶೇಷಾ ಅಪ್ಯಾಜಗ್ಮುಃ ಶ್ರುತಶರ್ಮಣಃ ॥ ೧೦೪
ತೇಷಾಂ ವಿದ್ಯಾಧರೇಶಾನಾಂ ತೈಃ ಪ್ರಭಾಸಾದಿಭಿಃ ಸಹ ।
ಸಂಪ್ರಹಾರಃ ಪ್ರವೃತ್ತೋಽಭೂನ್ಮಹಾಸೈನ್ಯಕ್ಷಯಾವಹಃ ॥ ೧೦೫

೧೦೬. ಎರಡೂ ಕಡೆಯವರಿಗೆ ದ್ವಂದ್ವಕಾಳಗ ಏರ್ಪಟ್ಟು ಅದರಲ್ಲಿ ಮಹಾರಥಿಗಳಾದ ಮನುಷ್ಯರು, ಅಸುರರು, ಖೇಚರರು ಮಡಿದರು.

೧೦೭. ಹಿಂಬಾಲಕನೊಡಗೂಡಿದ ಧೂಮ್ರಲೋಚನನ್ನು ವೀರಸೇನನು ಹತಮಾಡಿದನು. ಹರಿಶರ್ಮನೆಂಬ ವೀರನಿಂದ ವೀರಸೇನನೇ ರಥ ಹೀನನಾದನು.

೧೦೮. ಅಭಿಮನ್ಯುವಿನಿಂದ ವಿದ್ಯಾಧರವೀರನಾದ ಹಿರಣ್ಯಾಕ್ಷನು ಸತ್ತನು. ಸುನೇತ್ರನಿಂದ ಅಭಿಮನ್ಯುವೂ ಹರಿಭಟನೂ ಹತರಾದರು.

೧೦೯. ಪ್ರಭಾಸನು ಸುನೇತ್ರನ ತಲೆಯನ್ನು ತರಿದು ಬೀಳಿಸಿದನು. ಜ್ವಾಲಾಮಾಲಿ ಮತ್ತು ಮಹಾಯುಗಳು ಪರಸ್ಪರ ಹೊಡೆದಾಟದಿಂದ ಸತ್ತುಬಿದ್ದರು.

೧೧೦. ಕುಂಭೀರಕ, ನೀರಸಕರು ಕವಚಗಳಿಂದಲೇ ಹೊಡೆದರು. ಖರ್ವ ಮತ್ತು ಪ್ರತಾಪಿಯಾದ ಸುಶರ್ಮರ ಭುಜಗಳು ಕತ್ತರಿಸಲ್ಪಟ್ಟವು.

೧೧೧. ಪ್ರವಹಣನೆಂಬ ವಿದ್ಯಾಧರ ರಾಜನಿಂದ ಪ್ರಮುಖ ಯೋಧರಾದ ಶತ್ರುಭಟ, ವ್ಯಾಘ್ರಭಟ, ಸಿಂಹಭಟರೆಂಬ ಮೂವರು ಹತರಾದರು.

೧೧೨. ಸುರೋಹ, ವಿರೋಹರೆಂಬ ವೀರರಿಂದ ಪ್ರವಹಣನು ಸತ್ತನು. ಶ್ಮಶಾನವೆಂಬ ಊರಿನವನಾದ ಸಿಂಹಬಲನಿಂದ ಅವರಿಬ್ಬರೂ ಕೊನೆಯುಸಿರೆಳೆದರು.

---

ತತ್ರ ಚ ದ್ವಂದ್ವಸಂಗ್ರಾಮೇಷ್ವನ್ಯೋನ್ಯಂ ಸೈನ್ಯಯೋರ್ದ್ವಯೋಃ ।
ಹತಾ ಮಹಾರಥಾಸ್ತೇ ತೇ ಮಾನುಷಾಸುರಖೇಚರಾಃ ॥ ೧೦೬

ವೀರಸೇನೇನ ನಿಹತಃ ಸಾನುಗೋ ಧೂಮ್ರಲೋಚನಃ ।
ವೀರಸೇನೋಽಪಿ ವಿರಥೀಭೂತಃ ಸ್ವಹರಿಶರ್ಮಣಾ ॥ ೧೦೭

ಹತೋ ವಿದ್ಯಾಧರೋ ವೀರೋ ಹಿರಣ್ಯಾಕ್ಷೋಽಭಿಮನ್ಯುನಾ ।
ಅಭಿಮನ್ಯುಃ ಸುನೇತ್ರೇಣ ಹತೋ ಹರಿಭಟಸ್ತಥಾ ॥ ೧೦೮

ಸುನೇತ್ರಶ್ಚ ಪ್ರಭಾಸೇನ ಶಿರಶ್ಛಿತ್ತ್ವಾ ನಿಪಾತಿತಃ ।
ಜ್ವಾಲಾಮಾಲೀ ಮಹಾಯುಶ್ಚಾಪ್ಯನ್ಯೋನ್ಯೇನ ಹತಾವುಭೌ ॥ ೧೦೯

ಕುಂಭೀರಕೋ ನೀರಸಕಃ ಪ್ರಾಹರಂದಶನೈರಪಿ ।
ಖರ್ವಶ್ಚ ಭುಜಯೋಶ್ಛೇದಾತ್ಸುಶರ್ಮಾ ಚೋಗ್ರವಿಕ್ರಮಃ ॥ ೧೧೦

ತ್ರಯಂ ಶತ್ರುಭಟವ್ಯಾಘ್ರಭಟಸಿಂಹಭಟಾ ಅಪಿ ।
ಹತಾಃ ಪ್ರವಹಣೇನೈತೇ ವಿದ್ಯಾಧರಮಹೀಭೃತಾ ॥ ೧೧೧

ಸ ಸುರೋಹವಿರೋಹಾಭ್ಯಾಂ ದ್ವಾಭ್ಯಾಂ ಪ್ರವಹಣೋ ಹತಃ ।
ಶ್ಮಶಾನವಾಸಿನಾ ದ್ವೌ ಚ ಹತೌ ಸಿಂಹಬಲೇನ ತೌ ॥ ೧೧೨

೧೧೩–೧೧೫ ಪ್ರೇತವಾಹನನಾದ ಸಿಂಹಬಲ, ಕಪಿಲಕನಾದ ಚಿತ್ರಾಪೀಡ, ವಿದ್ಯಾಧರೇಂದ್ರನಾದ ಜಗಜ್ಜ್ವರ, ಶೂರನಾದ ಕಾಂತಾಪತಿ, ಮಹಾಬಲನಾದ ಸುವರ್ಣ, ಕಾಮಘನ, ಕ್ರೋಧಪತಿ ಎಂಬ ಇಬ್ಬರು ವಿದ್ಯಾಧರರಾಜರು, ಬಲದೇವ ಹಾಗೂ ವಿಚಿತ್ರಾಪೀಡನೆಂಬ ರಾಜ ಈ ಹತ್ತು ಜನರೂ ಶತಾನೀಕನೆಂಬ ರಾಜಕುಮಾರನಿಂದ ಹತರಾದರು.

೧೧೬ ಈ ರೀತಿಯಾಗಿ ವಿದ್ಯಾಧರವೀರರು ಯುದ್ಧದಲ್ಲಿ ಮಡಿಯುತ್ತಿದ್ದುದನ್ನು ಕಂಡ ಶ್ರುತಶರ್ಮನು ಕೋಪದಿಂದ ತಾನೇ ಶತಾನೀಕನ ಮೇಲೇರಿ ಬಂದನು.

೧೧೭ ಬಳಿಕ, ಅವರಿಬ್ಬರ ನಡುವೆ ಇಡೀ ದಿನ ಯುದ್ಧ ಮುಂದುವರೆಯಿತು. ಅದು ದೇವತೆಗಳಿಗೆ ಕೂಡ ಅತ್ಯಾಶ್ಚರ್ಯಕರವೂ, ಸೇನಾನಾಶಕರವೂ ಆಗಿದ್ದಿತು.

೧೧೮. ಸಂಧ್ಯಾ ಕಾಲದಲ್ಲಿ ಕುಣಿಯುವ ಹಬ್ಬ ಬಂದಿತೆಂದು ಸುತ್ತಲೂ ಬಿದ್ದಿದ್ದ ನೂರಾರು ಕಬಂಧಗಳು ಎದ್ದು ನಿಂತು ಭೂತಗಳಿಗೆ ಬೆಂಬಲ ಒದಗಿಸಿದವು. (ಕುಣಿದವು)

೧೧೯. ದಿನ ಕುಂದಿದಾಗ, ಅಪಾರ ಸೇನಾನಾಶದಿಂದ ಆತಂಕಗೊಂಡ ಬಂಧು ಬಾಂಧವರ ಸಾವಿನಿಂದ ಶೋಕಾವಿಷ್ಟರಾದ ವಿದ್ಯಾಧರರು ಒಂದೆಡೆಯಾದರೆ, ಮತ್ತೊಂದೆಡೆ ಹಠಾತ್ತನೆ ಒದಗಿ ಬಂದ ಗೆಲುವಿನಿಂದ ಬೀಗುತ್ತಿದ್ದ ಮರ್ತ್ಯರು, ಅಸುರರು; ಅಂತೂ ಎಲ್ಲರೂ ಯುದ್ಧವನ್ನು ನಿಲ್ಲಿಸಿ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

---

ಸ ಪ್ರೇತವಾಹನಃ ಸಿಂಹಬಲಃ ಕಪಿಲಕೋಽಪಿ ಚ।
ಚಿತ್ರಾಪೀಡಸ್ತತೋ ವಿದ್ಯಾಧರೇಂದ್ರೋಽಥ ಜಗಜ್ಜ್ವರಃ ॥ ೧೧೩
ತತಃ ಕಾಂತಾಪತಿಃ ಶೂರಃ ಸುವರ್ಣಶ್ಚ ಮಹಾಬಲಃ।
ದ್ವೌ ಚ ಕಾಮಘನಕ್ರೋಧಪತೀ ವಿದ್ಯಾಧರೇಶ್ವರೌ ॥ ೧೧೪
ಬಲದೇವಸ್ತತೋ ರಾಜಾ ವಿಚಿತ್ರಾಪೀಡ ಏವ ಚ।
ರಾಜಪುತ್ರಶತಾನೀಕೇನೈತೇ ದಶ ನಿಪಾತಿತಾಃ ॥ ೧೧೫
ಏವಂ ಹತೇಷು ವೀರೇಷು ದೃಷ್ಟ್ವಾ ವಿದ್ಯಾಧರಕ್ಷಯಮ್ ।
ಶ್ರುತಶರ್ಮಾ ಶತಾನೀಕಮಭ್ಯಧಾವತ್ಸ್ವಯಂ ಕ್ರುಧಾ ॥ ೧೧೬
ತತಸ್ತಯೋರಾದಿನಾಂತಂ ಸೈನ್ಯಕ್ಷಯಕರಂ ಮಹತ್ ।
ಆಶ್ಚರ್ಯಮಪಿ ದೇವಾನಾಂ ತಾವದ್ಯುದ್ಧಮಭೂದ್ದ್ವಯೋಃ ॥ ೧೧೭
ಶತಾನಿ ಯಾವದುತ್ಥಾಯ ಕಬಂಧಾನಾಂ ಸಮಂತತಃ ।
ಭೂತಾನಾಂ ಚಕ್ರುರಾಲಂಬಂ ಸಂಧ್ಯಾನೃತ್ತೋತ್ಸವಾಗಮೇ ॥ ೧೧೮
ಅಹ್ನಃ ಕ್ಷಯೇಽಥ ಬಹುಸೈನ್ಯವಿನಾಶವಿಗ್ನಾ
ವಿದ್ಯಾಧರಾ ನಿಹತಬಾಂಧವದುಃಖಿತಾಶ್ಚ।
ಮರ್ತ್ಯಾಸುರಾಃ ಪ್ರಸಭಲಬ್ಧಜಯಾಶ್ಚ ಜಗ್ಮುಃ
ಸಂಹೃತ್ಯ ಯುದ್ಧಮುಭಯೇ ಸ್ವನಿವೇಶನಾನಿ ॥ ೧೧೯

೧೨೦. ಆ ಸಂದರ್ಭದಲ್ಲಿ ಸುಮೇರುವಿನ ಮಾತಿನಂತೆ ಇಬ್ಬರು ವಿದ್ಯಾಧರ ರಾಜರು, ರಥಯೂಥಪತಿಗಳು, ಶ್ರುತಶರ್ಮನ ಪಕ್ಷವನ್ನು ಬಿಟ್ಟು ಬಂದು ಸೂರ್ಯಪ್ರಭನಿಗೆ ನಮಸ್ಕರಿಸಿ ಇಂತೆಂದರು.

೧೨೧. ನಾವಿಬ್ಬರೂ ಮಹಾಯಾನ, ಸುಮಾಯ ಎಂಬ ಹೆಸರಿನವರು. ಈ ಮೂರನೆಯವ ಸಿಂಹಬಲ. ನಾವೆಲ್ಲ ಮಹಾಶ್ಮಶಾನಾಧಿಪತಿತ್ವವನ್ನು ಸಿದ್ಧಿ ಮಾಡಿಕೊಂಡಿದ್ದೇವೆ. ಉಳಿದ ಯಾವ ವಿದ್ಯಾಧರರಿಂದಲೂ ನಮ್ಮನ್ನು ಬಗ್ಗಿಸಲು ಸಾಧ್ಯವಿಲ್ಲ.

೧೨೨. ದಿವ್ಯವೂ ಮಹಾಪ್ರಭಾವಶಾಲಿನಿಯೂ ಆದ ಶರಭಾನನಾ ಎಂಬ ಹೆಸರುಳ್ಳ ಒಬ್ಬ ಯೋಗಿನಿಯು ಸದಾ ಪ್ರಸನ್ನಳಾಗಿ ಇರುವವಳು. ಸ್ಮಶಾನದ ಅಂಚಿನಲ್ಲಿ ಸುಖವಾಗಿ ವಾಸಿಸುವ ನಮ್ಮೆಡೆಗೆ ಒಮ್ಮೆ ಅವಳು ಬಂದಳು.

೧೨೩. ದೇವ, ಆಗ ನಾವು ಅವಳನ್ನು ಕುರಿತು, "ಹೇ ಭಗವತಿ ನೀನೆಲ್ಲಿದ್ದೆ ? ಅಲ್ಲಿ ಏನು ಅಪೂರ್ವವಾದದ್ದನ್ನು ನೋಡಿದೆ' ಎಂದು ನಮಸ್ಕರಿಸಿ ಕೇಳಿದಾಗ ಆಕೆ ಹೇಳಿದ ವೃತ್ತಾಂತವಿದು.

---

ತತ್ಕಾಲಮತ್ರ ಚ ಸುಮೇರುನಿವೇದಿತೌ ದ್ವೌ
ವಿದ್ಯಾಧರಾವಧಿಪತೀ ರಥಯೂಥಪಾನಾಮ್ ।
ಅಭ್ಯೇತ್ಯ ತಂ ಪರಿಹೃತಶ್ರುತಶರ್ಮಪಕ್ಷೌ
ಸೂರ್ಯಪ್ರಭಂ ಜಗದತುರ್ವಿಹಿತಪ್ರಣಾಮೌ ॥ ೧೨೦

ಆವಾಂ ಮಹಾಯಾನಸುಮಾಯಸಂಜ್ಞಾತ್
ಉಭಾವಯಂ ಸಿಂಹಬಲಸ್ತೃತೀಯಃ ।
ಮಹಾಶ್ಮಶಾನಾಧಿಪತಿತ್ವಸಿದ್ಧಾ
ವಿದ್ಯಾಧರೇಂದ್ರೈರಪರೈರಧೃಷ್ಯಾಃ ॥ ೧೨೧

ತೇಷಾಂ ಶ್ಮಶಾನಾಂತಸುಖಸ್ಥಿತಾನಾಮ್
ಅಸ್ಮಾಕಮಾಗಾನ್ನಿಕಟಂ ಕದಾಚಿತ್ ।
ಸದಾ ಪ್ರಸನ್ನಾ ಶರಭಾನನಾಖ್ಯಾ
ಸದ್ಯೋಗಿನೀ ದಿವ್ಯಮಹಾಪ್ರಭಾವಾ ॥ ೧೨೨

ಕುತ್ರ ಸ್ಥಿತಾ ತ್ವಂ ವದ ಕಿಂ ಚ ತತ್ರ
ದೃಷ್ಟಂ ಭವತ್ಯಾ ಭಗವತ್ಯಪೂರ್ವಮ್ ।
ಸಾಸ್ಮಾಭಿರಿತ್ಥಂ ಪ್ರಣಿಪತ್ಯ ಪೃಷ್ಟಾ
ವೃತ್ತಾಂತಮೇವಂ ವದತಿ ಸ್ಮ ದೇವ ॥ ೧೨೩

೧೨೪. "ನಮ್ಮ ಪ್ರಭುವಾದ ಮಹಾಕಾಲಮಯನನ್ನು ಕಾಣಲು ಉಳಿದ ಯೋಗಿನಿಯರೊಡನೆ ಕೂಡಿಕೊಂಡು ನಾನು ಹೋಗಿದ್ದೆ. ಆಗ ನನ್ನೆದುರೇ ಒಬ್ಬ ವೇತಾಳರಾಜನು ಬಂದು ಹೀಗೆ ವಿಜ್ಞಾಪಿಸಿಕೊಂಡನು'.

೧೨೫. "ದೇವ, ವಿದ್ಯಾಧರ ರಾಜರುಗಳಿಂದ ಸಾವಿಗೀಡಾದ ನಮ್ಮ ಮಹಾ ಸೈನ್ಯಾಧಿಪತಿಯಾದ ಅಗ್ನಿಕನ ಮಗಳು ಮಹಾರೂಪವತಿ. ಆಕೆಯನ್ನು ತೇಜಃ ಪ್ರಭನೆಂಬುವನು ಇದ್ದಕ್ಕಿದ್ದಂತೆಯೇ ಹೊತ್ತೊಯ್ದಿದ್ದಾನೆ.

೧೨೬. ಪ್ರಭೋ, ಅವಳು ವಿದ್ಯಾಧರ ಚಕ್ರವರ್ತಿಯ ಪತ್ನಿಯಾಗುವಳೆಂದು ಸಿದ್ಧರು ನುಡಿದಿದ್ದಾರೆ. ಆದ್ದರಿಂದ ಆಕೆಯನ್ನು ಆ ದುಷ್ಟರು ನಿರ್ಬಂಧದಿಂದ ದೂರ ಕೊಂಡೊಯ್ಯುವಷ್ಟರಲ್ಲಿ ತಾವು ಬಿಡಿಸಿಕೊಂಡು ಬರಬೇಕು; ನಮ್ಮ ಮೇಲೆ ಅನುಗ್ರಹ ಮಾಡಬೇಕು'

೧೨೭. ದೀನನಾದ ವೇತಾಳನ ಈ ಮಾತು ಕೇಳಿ "ನೀವು ಅವಳನ್ನು ಬಿಡಿಸಿಕೊಂಡು ಬರಬೇಕು' ಎಂದು ನಮ್ಮ ದೇವನು ಆಜ್ಞಾಪಿಸಿದನು. ನಾವು ಆಕಾಶಕ್ಕೆ ಹಾರಿ ಅವಳನ್ನು ರಕ್ಷಿಸಿ ಕರೆತಂದೆವು.

---

ದ್ರಷ್ಟುಂ ಪ್ರಭುಂ ಸ್ವಂ ಸಹ ಯೋಗಿನೀಭಿಃ
ದೇವಂ ಮಹಾಕಾಲಮಯಂ ಗತಾಸಮ್ ।
ವ್ಯಜಿಜ್ಞಪತ್ತತ್ರ ಚ ಮತ್ಸಮಕ್ಷಮ್
ಆಗತ್ಯ ವೇತಾಲಪತಿಸ್ತಮೇಕಃ ॥ ೧೨೪
ಅಸ್ಮನ್ಮಹಾಸೈನ್ಯಪತೇಸ್ತನೂಜಾಂ
ವಿದ್ಯಾಧರೇಶೈರ್ನಿಹತಸ್ಯ ದೇವ ।
ಪಶ್ಯಾಗ್ನಿಕಾಖ್ಯಸ್ಯ ಹರತ್ಯಕಾಂಡೇ
ತೇಜಃಪ್ರಭೋ ನಾಮ ಮಹಾರ್ಘರೂಪಾಮ್ ॥ ೧೨೫
ಸಿದ್ಧೈಶ್ಚ ವಿದ್ಯಾಧರಚಕ್ರವರ್ತಿ
ಪತ್ನೀ ಭವಿತ್ರೀ ಗದಿತಾ ಪ್ರಭೋ ಸಾ ।
ತನ್ಮೋಚಯೈನಾಂ ಕುರು ನಃ ಪ್ರಸಾದಂ
ಯಾವನ್ನ ದೂರಂ ಹ್ರಿಯತೇ ಹಠೇನ ॥ ೧೨೬
ಇತ್ಯಾರ್ತವೇತಾಲವಚೋ ನಿಶಮ್ಯ
ಪ್ರಯಾತ ತಾಂ ಮೋಚಯತೇತಿ ಸೋऽಸ್ಮಾನ್ ।
ದೇವಃ ಸಮಾದಿಕ್ಷದಥಾಂಬರೇಣ
ಗತ್ವೈವ ಸಾಸ್ಮಾಭಿರವಾಪಿ ಕನ್ಯಾ ॥ ೧೨೭

೧೨೮. ಚಕ್ರವರ್ತಿಯಾದ ಶ್ರುತಶರ್ಮನಿಗಾಗಿ ಈಕೆಯನ್ನು ಕರೆದೊಯ್ಯುವೆ ಎಂದು ಹೇಳುತ್ತಿದ್ದ ತೇಜಃಪ್ರಭನನ್ನು ತಡೆದು ನಿಲ್ಲಿಸಿ, ಅವಳನ್ನು ಕರೆತಂದು ಪ್ರಭುವಿಗೆ ಒಪ್ಪಿಸಿದೆವು.

೧೨೯. ಆ ಕನ್ಯೆಯನ್ನು ಆಕೆಯ ಬಾಂಧವರಿಗೆ ಒಪ್ಪಿಸಲಾಯಿತು. ಇದು ನಿಜವಾಗಿಯೂ ಅಪೂರ್ವವಾದ ವೃತ್ತಾಂತವಲ್ಲವೆ ? ಇರಲಿ. ಅಲ್ಲಿ ಕೆಲ ದಿನಗಳಿದ್ದು ದೇವನನ್ನು ನಮಸ್ಕರಿಸಿ ಇಲ್ಲಿಗೆ ಬಂದಿದ್ದೇನೆ".

೧೩೦. ಹೀಗೆಂದು ಹೇಳಿದ ಯೋಗಿನಿಯಾದ ಶರಭಾನನೆಯನ್ನು ನಾವು ಮತ್ತೆ ಕೇಳಿದೆವು, "ವಿದ್ಯಾಧರ ಚಕ್ರವರ್ತಿಯಾಗುವವರು ಯಾರು ? ನಿನಗೆಲ್ಲ ತಿಳಿದಿದೆಯಲ್ಲ ಹೇಳು' ಎಂದು.

೧೩೧. "ಸೂರ್ಯಪ್ರಭನೇ ಚಕ್ರವರ್ತಿಯಾಗುತ್ತಾನೆ' ಎಂದು ಆಕೆ ಹೇಳಲಾಗಿ ಸಿಂಹಬಲನು ಹೇಳಿದನು, "ಇದು ಸುಳ್ಳು; ಇಂದ್ರಾದಿ ದೇವತೆಗಳೆಲ್ಲ ಶ್ರುತಶರ್ಮನ ಕಡೆಯೇ ಇದ್ದಾರಲ್ಲ' ! ಎಂದು.

---

ಸ ಚಕ್ರವರ್ತಿಶ್ರುತಶರ್ಮಹೇತೋಃ
ಏತಾಂ ಹರಾಮೀತಿ ಚ ತಂ ವದಂತಮ್ ।
ಸಂಸ್ತಭ್ಯ ತೇಜಃಪ್ರಭಮಾತ್ತಶಕ್ತ್ಯಾ
ಸಾಸ್ಮಾಭಿರಾನೀಯ ವಿಭೋರ್ವಿತೀರ್ಣಾ ॥ ೧೨೮

ತೇನಾರ್ಪಿತಾ ಚ ಸ್ವಜನಾಯ ಕನ್ಯಾ
ದೃಷ್ಟಂ ಮಯಾ ಕಾಮಮಪೂರ್ವಮೇತತ್ ।
ತತೋಽತ್ರ ಕಾಂಶ್ಚಿದ್ದಿವಸಾನುಷಿತ್ವಾ
ಪ್ರಣಮ್ಯ ದೇವಂ ತಮಿಹಾಗತಾಸ್ಮಿ ॥ ೧೨೯

ಇತ್ಯುಕ್ತವಾಕ್ಯಾ ಶರಭಾನನಾ ಸಾ
ಯೋಗಿನ್ಯಥಾಸ್ಮಾಭಿರಪೃಚ್ಛ್ಯತೈವಮ್ ।
ಕೋ ಬ್ರೂಹಿ ವಿದ್ಯಾಧರಚಕ್ರವರ್ತೀ
ಭವಿಷ್ಯತಿ ತ್ವಂ ಖಲು ವೇತ್ಸಿ ಸರ್ವಮ್ ॥ ೧೩೦

ಸೂರ್ಯಪ್ರಭೋ ಹಂತ ಭವಿಷ್ಯತೀತಿ
ಪ್ರೋಕ್ತೇ ತಯಾ ಸಿಂಹಬಲೋಽಬ್ರವೀನ್ನೌ ।
ಅಸತ್ಯಮೇತನ್ನನು ಬದ್ಧಕಕ್ಷ್ಯಾ
ದೇವಾ ಹಿ ಸೇಂದ್ರಾಃ ಶ್ರುತಶರ್ಮಪಕ್ಷೇ ॥ ೧೩೧

೧೩೨. ಅವನ ಮಾತನ್ನು ಕೇಳಿದ ಆರ್ಯೆಯು, "ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ ಕೇಳು ಹೇಳುತ್ತೇನೆ; ಇಷ್ಟರಲ್ಲೇ ಶ್ರುತಶರ್ಮನಿಗೂ ಸೂರ್ಯಪ್ರಭನಿಗೂ ಯುದ್ಧವಾಗಲಿದೆ.

೧೩೩ ಈ ಸಿಂಹಬಲನು ಮನುಷ್ಯನೊಬ್ಬನಿಂದ ನಿಮ್ಮ ಕಣ್ಣೆದುರೆ ಹೊಡೆತ ತಿಂದು ಸತ್ತಾಗ ನೀವಿಬ್ಬರು (ಈ ಗುರುತಿನಿಂದ) ನಾನು ಹೇಳಿದ್ದು ಸತ್ಯವೆಂದು ತಿಳಿಯುತ್ತೀರಿ' ಎಂದು ಹೇಳಿದಳು.

೧೩೪. ಇಷ್ಟು ಹೇಳಿ ಯೋಗಿನಿಯು ಹೊರಟುಹೋದಳು. ಹಾಗೆಯೇ ಎಷ್ಟೋ ದಿನಗಳು ಕಳೆದುವು. ಇಂದು ನಾವು ಒಬ್ಬ ಮರ್ತ್ಯನಿಂದ ಸಿಂಹಬಲನು ಹತನಾದದ್ದನ್ನು ಕಣ್ಣಾರೆ ಕಂಡೆವು.

೧೩೫ ಇದರಿಂದ ಆಕೆಯಲ್ಲಿ ವಿಶ್ವಾಸಮೂಡಿ, ಆಕೆ ಹೇಳಿದ್ದೇ ನಿಶ್ಚಯವೆಂದು ತಿಳಿದು, ಎಲ್ಲ ವಿದ್ಯಾಧರರಿಗೂ ನೀನೇ ರಾಜನೆಂದು ನಂಬಿ ನಾವಿಬ್ಬರೂ ನಿನ್ನ ಪಾದ ಕಮಲಗಳಲ್ಲಿ ಸೇವೆಗೈಯ್ಯಲು ಬಂದಿದ್ದೇವೆ. ನಿನ್ನ ಆಜ್ಞೆಯನ್ನು ಪಾಲಿಸುತ್ತೇವೆ."

---

ಶ್ರುತ್ವೈತದಾರ್ಯಾ ವದತಿ ಸ್ಮ ಸಾ ನೌ
ನ ಪ್ರತ್ಯಯಶ್ಚೇಚ್ಛೃಣುತಂ ಬ್ರವೀಮಿ ।
ಯಥಾ ಭವಿಷ್ಯತ್ಯಚಿರೇಣ ಯುದ್ಧಂ
ಸೂರ್ಯಪ್ರಭಸ್ಯ ಶ್ರುತಶರ್ಮಣಶ್ಚ ॥ ೧೩೨

ಹನಿಷ್ಯತೇ ಸಿಂಹಬಲೋ ಯದಾಯಂ
ಯುಷ್ಮತ್ಸಮಕ್ಷಂ ಯುಧಿ ಮಾನುಷೇಣ ।
ಯುವಾಮಭಿಜ್ಞಾನಮಿದಂ ವಿಲೋಕ್ಯ
ವಿಜ್ಞಾಸ್ಯಥಃ ಸತ್ಯಮಿದಂ ವಚೋ ಮೇ ॥ ೧೩೩

ಏತಾವದುಕ್ತ್ವಾ ಕಿಲ ಯೋಗಿನೀ ಸಾ
ಯಯೌ ಚ ಯಾತಾನಿ ಚ ತಾನ್ಯಹಾನಿ ।
ಪ್ರತ್ಯಕ್ಷಮದ್ಯೇಹ ಚ ದೃಷ್ಟಮೇತತ್
ಮರ್ತ್ಯೇನ ಯತ್ಸಿಂಹಬಲೋ ಹತೋಽಸೌ ॥ ೧೩೪

ತತ್ಪ್ರತ್ಯಯಾನ್ನಿಶ್ಚಿತಮೇವ ಮತ್ವಾ
ತ್ವಾಮೇವ ಸರ್ವದ್ಯುಚರಾಧಿರಾಜಮ್ ।
ಆವಾಮಿಮೌ ಪಾದಸರೋಜಯುಗ್ಮಂ
ಸಮಾಶ್ರಿತೌ ಶಾಸನವರ್ತಿನೌ ತೇ ॥ ೧೩೫

೧೩೬ ಎಂದು ಇಬ್ಬರೂ ವಿದ್ಯಾಧರರಾಜರು ನಿವೇದಿಸಿಕೊಂಡಾಗ ಮಯಾದಿಗಳೊಡನೆ ಇದ್ದ ಸೂರ್ಯಪ್ರಭನು ಅವರ ಮಾತಿನಲ್ಲಿ ಶ್ರದ್ಧೆಯಿರಿಸಿ, ಮಹಾಯಾನ, ಸುಮಾಯಕರನ್ನು ಸಂತೋಷದಿಂದ ಯಥೋಚಿತವಾಗಿ ಸನ್ಮಾನಿಸಿದನು.

೧೩೭ ಇದನ್ನು ಕೇಳಿದ ಶ್ರುತಶರ್ಮನು ತುಂಬ ಉದ್ವೇಗಕ್ಕೊಳಗಾದಾಗ, ಇಂದ್ರನು ವಿಶ್ವಾವಸುವನ್ನು ದೂತನನ್ನಾಗಿ ಕಳುಹಿಸಿ, ಅವನ ಮೇಲಿನ ಸ್ನೇಹದಿಂದ ಧೈರ್ಯ ತುಂಬುವ 'ಹೆದರಬೇಡ, ಎಲ್ಲ ದೇವತೆಗಳೂ ನಿನ್ನೊಂದಿಗಿದ್ದಾರೆ. ಬೆಳಗಾದಾಗ ಮುಖ್ಯ ಯುದ್ಧದಲ್ಲಿ ನಿನಗೆ ಸಹಾಯ ಒದಗಿಸುವೆ' ಎಂಬ ಸಂದೇಶ ಕಳುಹಿಸಿ ಸಂತೈಸಿದನು.

---

ಇತ್ಯುಕ್ತವಂತೌ ಸ ಮಯಾದಿಯುಕ್ತಃ
  ಸೂರ್ಯಪ್ರಭಸ್ತಾವಥ ಖೇಚರೇಂದ್ರೌ ।
ಶ್ರದ್ಧಾಯ ಸಂಮಾನಿತವಾನ್ಯಥಾರ್ಹಂ
  ಹೃಷ್ಟೌ ಮಹಾಯಾನಸುಮಾಯಕೌ ದ್ವೌ ॥ ೧೩೬

ತಚ್ಛ್ರುತ್ವಾ ಶ್ರುತಶರ್ಮಣೋಽತ್ರ ಸುತರಾಮುದ್ವೇಗಭಾಜೋ ವ್ಯಧಾ
  ದಾಶ್ವಾಸಂ ಕಿಲ ದೂತ್ಯಯಾ ಶತಮಖಃ ಸಂಪ್ರೇಷ್ಯ ವಿಶ್ವಾವಸುಮ್ ।
ಧೀರಸ್ತ್ವಂ ಭವ ಸರ್ವದೇವಸಹಿತಃ ಪ್ರಾತಃ ಕರಿಷ್ಯಾಮಿ ತೇ
  ಸಾಹಾಯ್ಯಂ ರಣಮೂರ್ಧನೀತಿ ಧೃತಿಕೃತ್ಸಂದೇಶ್ಯ ತತ್ಸ್ನೇಹತಃ ॥
೧೩೭

೧೩೮. ಸೂರ್ಯಪ್ರಭನು ಶತ್ರು ಪಾಳೆಯದಲ್ಲಿ ಉಂಟಾದ ಒಡಕಿನಿಂದ ಸಂತುಷ್ಟನಾಗಿ, ಯುದ್ಧದಲ್ಲಿ ಆದ ಶತ್ರುಗಳ ನಾಶದಿಂದ ಬೀಗುತ್ತಾ ಪುನಃ ಕಾಂತೆಯರನ್ನೆಲ್ಲ ಬಿಟ್ಟು ಸಚಿವರೊಡನೆ ತನ್ನ ಶಯನಗೃಹವನ್ನು ಪ್ರವೇಶಿಸಿದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಸೂರ್ಯಪ್ರಭಲಂಬಕದಲ್ಲಿ ಐದನೆಯ ತರಂಗವು ಮಗಿಯಿತು.

---

ಸ ಚ ಪರಬಲಭೇದಾಲೋಕನೋತ್ಪನ್ನತೋಷಃ
ಸಮರಶಿರಸಿ ದೃಬ್ಧಾರಾತಿಪಕ್ಷಕ್ಷಯಶ್ಚ ।
ಪುನರಪಿ ನಿಜಕಾಂತಾಃ ಪ್ರೋಜ್ಝ್ಯ ಸೂರ್ಯಪ್ರಭಸ್ತಾ
ನಿಶಿ ಸಚಿವಸಮೇತೋ ವಾಸಕಂ ಸ್ವಂ ವಿವೇಶ ॥ ೧೩೮

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಸೂರ್ಯಪ್ರಭಲಂಬಕೇ ಪಂಚಮಸ್ತರಂಗಃ

# ಆರನೆಯ ತರಂಗ

೧ ನಂತರ, ಅವನು ಸ್ತ್ರೀಸಂಗವಿಲ್ಲದೆ ಹಾಸಿಗೆಯಲ್ಲಿ ಮಲಗಿದ್ದು, ಯುದ್ಧವನ್ನೇ ಎದುರುನೋಡುತ್ತಾ ತನ್ನ ಸಚಿವನಾದ ವೀತಭೀತಿಯನ್ನು ಕುರಿತು ಹೇಳಿದನು.

೨. "ಮಿತ್ರನೇ, ನನಗೆ ನಿದ್ದೆ ಬರುತ್ತಿಲ್ಲ. ಈ ರಾತ್ರಿಯನ್ನು ಕಳೆಯಲು, ಮನೋವಿನೋದಕ್ಕಾಗಿ, ಸತ್ತ್ವವೀರಗಳಿಗೆ ಆಶ್ರಯವಾದ ಯಾವುದಾದರೂ ಒಳ್ಳೆಯ ಕಥೆಯನ್ನು ಹೇಳು'

೩ ಸೂರ್ಯಪ್ರಭ ಸಚಿವನಾದ ವೀತಭೀತಿಯು, "ನಿನ್ನ ಆಜ್ಞೆಯಂತೆ ಆಗಲಿ', ಎಂದು ಈ ಕಥೆಯನ್ನು ಹೇಳಿದನು.

೪. ಸಕಲ ವಿಧವಾದ ರತ್ನಗಳಿಂದ ಕೂಡಿ ನಿರ್ಮಲ ಗುಣಸಂಪನ್ನವೂ ಭೂಮಿಗೆ ಅಲಂಕಾರಪ್ರಾಯವೂ ಆಗಿರುವ ಉಜ್ಜಯನೀ ನಗರವಿದೆಯಷ್ಟೆ

---

# ಷಷ್ಠಸ್ತರಂಗಃ

ತತಃ ಸ ರಾತ್ರಾವಸ್ತ್ರೀಕಃ ಶಯನಸ್ಥೋ ರಣೋನ್ಮುಖಃ ।
ಸೂರ್ಯಪ್ರಭಃ ಸ್ವಸಚಿವಂ ವೀತಭೀತಿಮಭಾಷತ ॥ ೧
ನಿದ್ರಾ ಮೇ ನಾಸ್ತಿ ತತ್ಕಾಂಚಿತ್ಸತ್ತ್ವವೀರಾಶ್ರಿತಾಂ ಸಖೇ ।
ಕಥಾಮಪೂರ್ವಾಮಾಖ್ಯಾಹಿ ರಾತ್ರಾವಸ್ಯಾಂ ವಿನೋದಿನೀಮ್ ॥ ೨
ಏತತ್ಸೂರ್ಯಪ್ರಭವಚೋ ವೀತಭೀತಿರ್ನಿಶಮ್ಯ ಸಃ ।
ಯಥಾಜ್ಞಾಪಯಸೀತ್ಯುಕ್ತ್ವಾ ಕಥಾಂ ಕಥಿತವಾನಿಮಾಮ್ ॥ ೩
ಅಸ್ತ್ಯಲಂಕೃತಿರೇತಸ್ಯಾಂ ಪೃಥ್ವ್ಯಾಮುಜ್ಜಯಿನೀ ಪುರೀ ।
ರತ್ನೈರಶೇಷೈರ್ನಿಚಿತಾ ಸುನಿರ್ಮಲಗುಣೋಂಭಿತ್ತೈಃ ॥ ೪

೫. ಆ ನಗರದಲ್ಲಿ ಮಹಾಸೇನನೆಂಬ ರಾಜನಿದ್ದನು. ಅವನು ಗುಣಶಾಲಿಗಳಿಗೆ ಪ್ರಿಯನೂ, ಕಲೆಗಳಿಗೆ ಆಶ್ರಯದಾತನೂ, ಆಗಿದ್ದು, ಸೂರ್ಯ ಚಂದ್ರರಿಬ್ಬರ ರೂಪವನ್ನೂ ಧರಿಸಿದ್ದಾನೋ ಎಂಬಂತೆ ಇದ್ದನು.

೬. ಆತನಿಗೆ ಅಶೋಕವತಿಯೆಂಬ ರಾಣಿಯಿದ್ದಳು. ಆಕೆಯನ್ನು ಅವನು ಪ್ರಾಣದಂತೆ ಪ್ರೀತಿಸುತ್ತಿದ್ದನು. ಆಕೆಯ ರೂಪಕ್ಕೆ ಸಮಳಾದ ರೂಪವತಿಯು ಮೂಲೋಕದಲ್ಲಿ ಮತ್ತೋರ್ವಳು ಇರಲಿಲ್ಲ.

೭. ಆ ದೇವಿಯೊಡನೆ ರಾಜನು ರಾಜ್ಯಪಾಲನೆ ಮಾಡುತ್ತಿದ್ದನು. ಆತನಿಗೆ ಗುಣಶರ್ಮನೆಂಬ ವಿಪ್ರನು ಮಾನ್ಯನೂ, ಪ್ರಿಯನೂ ಆಗಿದ್ದನು.

೮. ಶೂರನೂ, ಅತಿರೂಪವಂತನೂ, ವೇದವಿದ್ಯಾಪಾರಂಗತನೂ ಕಲೆಗಳಲ್ಲಿಯೂ ಶಸ್ತ್ರಾಸ್ತ್ರಗಳಲ್ಲಿಯೂ ಒಳ್ಳೆಯ ಪ್ರವೇಶವುಳ್ಳವನೂ ಆದ ಆ ವಿಪ್ರಯುವಕನು ರಾಜನನ್ನು ನಿತ್ಯವೂ ಸೇವಿಸುತ್ತಿದ್ದನು.

೯. ಒಮ್ಮೆ ಅಂತಃಪುರದಲ್ಲಿ ನೃತ್ಯದ ಮಾತು ಬಂದಾಗ ರಾಜ ಮತ್ತು ರಾಣಿಯರು ತಮ್ಮ ಬಳಿಯಲ್ಲೇ ಇದ್ದ ಗುಣಶರ್ಮನನ್ನು ಕುರಿತು ಹೇಳಿದರು.

೧೦. "ನೀನು ಸರ್ವಜ್ಞನೆಂಬುದರಲ್ಲಿ ಸಂಶಯವಿಲ್ಲ. ನಮ್ಮ ಕುತೂಹಲ ಏನೆಂದರೆ ನಿನಗೆ ನರ್ತನ ಮಾಡಲು ಬರುವುದೇ ಎಂದು. ಬಂದಿದ್ದರೆ ನಮಗೆ ಇಂದು ನಿನ್ನ ನರ್ತನವನ್ನು ತೋರಿಸುವ ಕೃಪೆ ಮಾಡಬೇಕು;' ಎಂದು.

---

ತಸ್ಯಾಮಭೂನ್ಮಹಾಸೇನೋ ನಾಮ ರಾಜಾ ಗುಣಿಪ್ರಿಯಃ ।
ಕಲಾನಾಂ ಚೈಕನಿಲಯಃ ಸೂರ್ಯೇಂದೂಭಯರೂಪಧೃಕ್ ॥ ೫
ತಸ್ಯಾಶೋಕವತೀ ನಾಮ ರಾಜ್ಞೀ ಪ್ರಾಣಸಮಾಭವತ್ ।
ಯಸ್ಯಾ ರೂಪೇಣ ಸದೃಶೀ ನಾಸೀದನ್ಯಾ ಜಗತ್ರಯೇ ॥ ೬
ತಯಾ ದೇವ್ಯಾ ಸಮಂ ತಸ್ಯ ರಾಜ್ಯಂ ರಾಜ್ಞೋಽನುಶಾಸತಃ ।
ಗುಣಶರ್ಮಾಭಿಧಾನೋಽಭೂದ್ವಿಪ್ರೋ ಮಾನ್ಯಸ್ತಥಾ ಪ್ರಿಯಃ ॥ ೭
ಸ ಚ ಶೂರೋಽತಿರೂಪಶ್ಚ ವೇದವಿದ್ಯಾಂತಗೋ ಯುವಾ ।
ಕಲಾಶಸ್ತ್ರವಿದ್ವಿಪ್ರಃ ಸಿಷೇವೇ ತಂ ನೃಪಂ ಸದಾ ॥ ೮
ಏಕದಾಂತಃಪುರೇ ನೃತ್ತಕಥಾಪ್ರಸ್ತಾವತಃ ಸ ತಮ್ ।
ರಾಜಾ ರಾಜ್ಞೀ ಚ ಪಾರ್ಶ್ವಸ್ಥಂ ಗುಣಶರ್ಮಾಣಮೂಚತುಃ ॥ ೯
ಸರ್ವಜ್ಞಸ್ತ್ವಂ ನ ದೋಲಾತ್ರ ತದಸ್ಮಾಕಂ ಕುತೂಹಲಮ್ ।
ನರ್ತಿತುಂ ಚೇದ್ವಿಜಾನಾಸಿ ತತ್ಪ್ರಸೀದಾದ್ಯ ದರ್ಶಯ ॥ ೧೦

೧೧. ಇದನ್ನು ಕೇಳಿದ ಗುಣಶರ್ಮನು ನಗುಮೊಗದಿಂದ, 'ನನಗೆ ನೃತ್ಯ ತಿಳಿದಿದೆ. ಆದರೆ ಜನರ ನಡುವೆ ಮಾಡಿ ತೋರಿಸುವುದು ಸರಿಯಲ್ಲ.

೧೨–೧೩. ನಗಿಸುವುದು, ಮೂಢ ನೃತ್ತ ಮಾಡುವುದು ಸಾಧಾರಣವಾಗಿ ಶಾಸ್ತ್ರಗಳಲ್ಲಿ ನಿಂದೆಗೀಡಾಗಿದೆ. ಅದರಲ್ಲೂ ರಾಜ ಮತ್ತು ರಾಣಿಯರ ಮುಂದೆ ನೃತ್ಯ ಮಾಡಲು ನಾಚಿಕೆಯಾಗುತ್ತದೆ', ಎಂದು ಅವನು ಹೇಳಿದಾಗ ರಾಣಿಯು ಕುತೂಹಲ ತಡೆಯಲಾರದೆ, ರಾಜನನ್ನು ಒತ್ತಾಯಿಸಿದಾಗ ರಾಜನು ಅವನಿಗೆ ಉತ್ತರಿಸಿದನು.

೧೪. ಇದು ರಂಗದಲ್ಲಿ ನಡೆಯುವುದಲ್ಲ. ಹಾಗಿದ್ದರೆ ಮಾತ್ರ ಗಂಡಸಿಗೆ ನಾಚಿಕೆಯಾಗಬೇಕು. ಇದು ಆತ್ಮೀಯವಾದ ಸ್ನೇಹಕೂಟ. ರಹಸ್ಯವಾಗಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುವಂತಹುದು.

೧೫. ನಾನೇನೂ ನಿನ್ನನ್ನು ಶಾಸನ ಮಾಡುವ ರಾಜನಲ್ಲ, ನಿನ್ನ ಸಲುಗೆಯ ಮಿತ್ರ ಇಂದು ನಿನ್ನ ಕಲಾಚಾತುರ್ಯವನ್ನು ನೋಡದೆ ನಾನು ಊಟವನ್ನೇ ಮಾಡುವುದಿಲ್ಲ', ಎಂದು ರಾಜನು ಪಟ್ಟು ಹಿಡಿದನು.

೧೬ ಆಗ ಬ್ರಾಹ್ಮಣನು ನರ್ತಿಸಲು ಒಪ್ಪಿದನು. ಸೇವೆಯಲ್ಲಿರುವವರು ಒಡೆಯನ ಆಣತಿಯನ್ನು ಮೀರುವುದಾದರೂ ಹೇಗೆ ?

---

ಏತಚ್ಛ್ರುತ್ವಾ ಸ್ಮಿತಮುಖೋ ಗುಣಶರ್ಮಾ ಜಗಾದ ತೌ ।
ಜಾನಾಮಿ ಕಿಂ ತು ತದ್ಯುಕ್ತಮಸ್ತಿ ನೃತ್ತಂ ನ ಸಂಸದಿ ॥ ೧೧
ಹಾಸನಂ ಮೂಢನೃತ್ತಂ ತತ್ಪ್ರಾಯಶಃ ಶಾಸ್ತ್ರಗರ್ಹಿತಮ್ ।
ತತ್ರಾಪಿ ರಾಜ್ಞಃ ಪುರತೋ ರಾಜ್ಞ್ಯಾಶ್ಚ ಧಿಗಹೋ ತ್ರಪಾ ॥ ೧೨
ಇತ್ಯುಕ್ತವಂತಂ ತಂ ರಾಜಾ ಗುಣಶರ್ಮಾಣಮತ್ರ ಸಃ ।
ಪ್ರತ್ಯುವಾಚ ತಯಾ ರಾಜ್ಞ್ಯಾ ಪ್ರೇರ್ಯಮಾಣಃ ಕುತೂಹಲಾತ್ ॥ ೧೩
ನೇದಂ ರಂಗಾದಿನೃತ್ತಂ ತದ್ಯತ್ಸ್ಯಾತ್ಪುಂಸಸ್ತ್ರಪಾವಹಮ್ ।
ಮಿತ್ರಗೋಷ್ಠೀ ರಹಸ್ಯೇಷಾ ಸ್ವವೈದಗ್ಧ್ಯಪ್ರದರ್ಶಿನೀ ॥ ೧೪
ನ ಚಾಹಂ ಭವತೋ ರಾಜಾ ತ್ವಂ ಮೇ ಮಿತ್ರಂ ಹ್ಯಯಂತ್ರಣಮ್ ।
ತನ್ನಾದ್ಯ ಭೋಕ್ಷ್ಯೇ ಭಾವತ್ಕಮದೃಷ್ಟ್ವಾ ನೃತ್ತಕೌತುಕಮ್ ॥ ೧೫
ಇತಿ ಬದ್ಧಗ್ರಹೇ ರಾಜ್ಞಿ ಸ ವಿಪ್ರೋಽಂಗೀಚಕಾರ ತತ್ ।
ಕಥಂ ಹಿ ಲಂಘ್ಯತೇ ಭೃತ್ಯೈರ್ಗ್ರಹಿಕಸ್ಯ ಪ್ರಭೋರ್ವಚಃ ॥ ೧೬

೧೭. ನಂತರ ಗುಣಶರ್ಮನು ಅಂಗಾಂಗ ವಿಕ್ಷೇಪಮಾಡುತ್ತಾ ನರ್ತಿಸಲು (ಅದನ್ನು ನೋಡುತ್ತಿದ್ದ) ರಾಜನೂ, ರಾಣಿಯೂ ಮನದಲ್ಲಿ ಹಾಗೆಯೇ ನೃತ್ಯ ಮಾಡಲಾರಂಭಿಸಿದರು.

೧೮. ನಂತರ, ರಾಜನು ಆತನಿಗೆ ವೀಣೆಯನ್ನು ಕೊಟ್ಟು ನುಡಿಸಲು ಹೇಳಿದನು. ಅದನ್ನು ಶ್ರುತಿ ಮಾಡುತ್ತಾ ರಾಜನನ್ನು ಕುರಿತು ಆ ವಿಪ್ರನು ಹೀಗೆಂದನು.

೧೯-೨೦. "ದೇವ, ಇದು ಪ್ರಶಸ್ತವಲ್ಲದ ವೀಣೆ, ಬೇರೆ ವೀಣೆ ಕೊಡಿ. ಇದರ ತಂತಿಯಲ್ಲಿ ನಾಯಿಬಾಲದ ಕೂದಲು ಸೇರಿದೆ. ತಂತಿಯ ಝೇಂಕಾರದಿಂದ ಇದು ನನಗೆ ತಿಳಿಯುತ್ತಿದೆ", ಎಂದು ಹೇಳುತ್ತಾ ಗುಣಶರ್ಮನು ತನ್ನ ಮಡಿಲಲ್ಲಿದ್ದ ವೀಣೆಯನ್ನು ಕೆಳಗಿಟ್ಟನು.

೨೧. ಆಗ ರಾಜನು ತಂತಿಯನ್ನು ಕಿತ್ತು ನೋಡಲಾಗಿ, ಅದರಿಂದ ನಾಯಿಬಾಲದ ಕೂದಲು ಹೊರಬಂದಿತು.

೨೨. ಆತನ ಸರ್ವಜ್ಞತೆಯನ್ನು ಮೆಚ್ಚಿಕೊಂಡ ರಾಜಾ ಮಹಾಸೇನನು ಅತ್ಯಾಶ್ಚರ್ಯಗೊಂಡವನಾಗಿ ಮತ್ತೊಂದು ವೀಣೆಯನ್ನು ಅವನಿಗಾಗಿ ತರಿಸಿದನು.

೨೩. ಗುಣಶರ್ಮನು ಹಾಡುತ್ತಲೇ ಅದನ್ನು ಮೂರುಸ್ಥಾಯಿಗಳಲ್ಲೂ ನುಡಿಸಿದನು. ಕರ್ಣಮನೋಹರವಾದ ಆ ಇಂಚರದಿಂದ ಗಂಗಾಪ್ರವಾಹದಂತೆ ವೀಣಾನಾದವು ಪಾವನಕರವಾಗಿತ್ತು.

---

ತತಃ ಸ ಗುಣಶರ್ಮಾತ್ರ ನನರ್ತಾಂಗೈರ್ಯುವಾ ತಥಾ ।
ರಾಜಾ ರಾಜ್ಞೀ ಚ ಚಿತ್ತೇನ ತೌ ದ್ವೌ ನನೃತತುರ್ಯಥಾ ॥ ೧೭
ತದಂತೇ ಚ ದದೌ ರಾಜಾ ವಾದನಾಯಾಸ್ಯ ವಲ್ಲಕೀಮ್ ।
ತಸ್ಯಾಂ ಚ ಸಾರಣಾಮೇಷ ದದದೇವಾಬ್ರವೀನ್ನೃಪಮ್ ॥ ೧೮
ದೇವಾಪ್ರಶಸ್ತಾ ವೀಣೇಯಂ ತದನ್ಯಾ ದೀಯತಾಂ ಮಮ ।
ಅಸ್ಯಾಸ್ತಂತ್ರ್ಯಾಂ ಯದೇತಸ್ಯಾಂ ಶ್ವವಾಲೋ ವಿದ್ಯತೇಽಂತರೇ ॥ ೧೯
ಅಹಂ ಹ್ಯೇತದ್ವಿಜಾನಾಮಿ ತಂತ್ರೀಝಾಂಕಾರಲಕ್ಷಣೈಃ ।
ಇತ್ಯುಕ್ತ್ವಾ ಗುಣಶರ್ಮಾಂಕಾತ್ತಾಂ ವಿಪಂಚೀಂ ಮುಮೋಚ ಸಃ ॥ ೨೦
ತತಃ ಸ ಸಿಕ್ತ್ವಾ ತಂತ್ರೀಂ ತಾಂ ಯಾವದುದ್ವೇಷ್ಟ್ಯ ಭೂಪತಿಃ ।
ವೀಕ್ಷತೇ ನಿರಗಾತ್ತಾವದ್ವಾಲಸ್ತದ್ಗರ್ಭತಃ ಶುನಃ ॥ ೨೧
ತತಃ ಸರ್ವಜ್ಞತಾಂ ತಸ್ಯ ಪ್ರಶಂಸನ್ಸೋಽತಿವಿಸ್ಮಿತಃ ।
ವೀಣಾಮಾನಾಯಯಾಮಾಸ ಮಹಾಸೇನನೃಪೋಽಪರಾಮ್ ॥ ೨೨
ತಾಂ ಸ ವಾದಿತವಾನ್ಗಾಯನ್ ಗುಣಶರ್ಮಾ ತ್ರಿಮಾರ್ಗಗಾಮ್ ।
ಗಂಗಾಮಿವೌಘಸುಭಗಾಂ ಕರ್ಣಪಾವನನಿಃಸ್ವನಾಮ್ ॥ ೨೩

೨೪. ರಾಣಿಯೊಡನೆ ಪರಮವಿಸ್ಮಿತನಾದ ರಾಜನಿಗೆ ಕ್ರಮವಾಗಿ ತನ್ನ ಶಸ್ತ್ರಾಸ್ತ್ರ ವಿದ್ಯೆಗಳನ್ನು ತೋರಿಸಿದನು.

೨೫. ಆಗ ರಾಜನು "ದ್ವಂದ್ವ ಯುದ್ಧವನ್ನು ನೀನು ಬಲ್ಲೆಯಾದರೆ ಬರಿಗೈಯಲ್ಲೇ ಒಂದು "ಬಂಧಕರಣ' ವನ್ನು ಮಾಡಿ ತೋರಿಸು' ಎಂದನು.

೨೬. ಆಗ, "ದೇವ, ಶಸ್ತ್ರಗಳನ್ನು ನೀನು ಹಿಡಿದುಕೊ. ನನ್ನನ್ನು ಕ್ರಮವಾಗಿ ಹೊಡೆಯುತ್ತಾ ಹೋಗು. ಆಗ ನಿನಗೆ ತೋರಿಸುತ್ತೇನೆ' ಎಂದು ಗುಣಶರ್ಮನು ಹೇಳಿದನು.

೨೭–೨೮. ಆಗ ರಾಜನು ಖಡ್ಗವೇ ಮುಂತಾದ ಯಾವ ಯಾವ ಆಯುಧವನ್ನು ಹಿಡಿದು ಪ್ರಹಾರ ಮಾಡುತ್ತಿದ್ದನೋ ಅದನ್ನು ಅತ್ಯಂತ ಸುಲಭವಾಗಿ, ಏನೂ ಆಗುತ್ತಿಲ್ಲ ಎಂಬಂತೆ, ಅದದೇ ಬಂಧಕರಣದಿಂದ ನಿವಾರಿಸಿಕೊಂಡು ರಾಜನ ಕೈಯನ್ನೂ, ದೇಹವನ್ನೂ ಮತ್ತೆ ಮತ್ತೆ ಕಟ್ಟಿಹಾಕಿದನು. ತಾನು ಮಾತ್ರ ಯಾವ ಗಾಯವೂ ಆಗದೆ ಉಳಿದನು.

೨೯. ನಂತರ ಆ ದ್ವಿಜೋತ್ತಮನನ್ನು ರಾಜ್ಯಕ್ಕೆ ಎಲ್ಲರನ್ನೂ ಮೀರಿಸಿರುವ ಇವನು ಸಹಾಯಕಾರಿ ಎಂದು ಬಗೆದು ಪ್ರಶಂಸೆಮಾಡಿ ರಾಜನು ಬಹುವಾಗಿ ಗೌರವಿಸಿದನು.

೩೦. ರಾಜನ ರಾಣಿಯಾದ ಅಶೋಕವತಿಯು ವಿಪ್ರನ ರೂಪವನ್ನೂ ಗುಣಗಣಗಳನ್ನೂ ನೋಡುತ್ತ ನೋಡುತ್ತ ಅವನಲ್ಲಿಯೇ ನೆಟ್ಟ ಮನಸ್ಸುಳ್ಳವಳಾದಳು.

---

ತತಶ್ಚಿತ್ರೀಯಮಾಣಾಯ ರಾಜ್ಞೇ ತಸ್ಮೈ ಸಜಾನಯೇ ।
ದರ್ಶಯಾಮಾಸ ಶಸ್ತ್ರಾಸ್ತ್ರವಿದ್ಯಾ ಅಪಿ ಸ ತತ್ಕ್ರಮಾತ್ ॥ ೨೪
ಅಥಾವೋಚತ್ಸ ರಾಜಾ ತಂ ನಿಯುದ್ಧಂ ಯದಿ ವೇತ್ಸಿ ತತ್ ।
ಏಕಂ ಮೇ ಬಂಧಕರಣಂ ಶೂನ್ಯಹಸ್ತಂ ಪ್ರದರ್ಶಯ ॥ ೨೫
ಗೃಹಾಣ ದೇವ ಶಸ್ತ್ರಾಣಿ ಮಯಿ ಪ್ರಹರ ಚ ಕ್ರಮಾತ್ ।
ಯಾವತ್ತೇ ದರ್ಶಯಾಮೀತಿ ಸ ವಿಪ್ರಃ ಪ್ರತ್ಯುವಾಚ ತಮ್ ॥ ೨೬
ತತಃ ಸ ರಾಜಾ ಖಡ್ಗಾದಿ ಯದ್ಯದಾಯುಧಮಗ್ರಹೀತ್ ।
ತತ್ತತ್ಪ್ರಹರತಸ್ತಸ್ಯ ಗುಣಶರ್ಮಾವಹೇಲಯಾ ॥ ೨೭
ತೇನೈವ ಬಂಧಕರಣೇನಾಪಹೃತ್ಯಾಪಹೃತ್ಯ ಸಃ ।
ಬಬಂಧ ರಾಜ್ಞೋ ಹಸ್ತಂ ಚ ಗಾತ್ರಂ ಚಾಪ್ಯಕ್ಷತೋ ಮುಹುಃ ॥ ೨೮
ತತಸ್ತಂ ರಾಜ್ಯಸಾಹಾಯ್ಯಸಹಂ ಮತ್ವಾ ದ್ವಿಜೋತ್ತಮಮ್ ।
ಸಂಸ್ತುವನ್ಬಹು ಮೇನೇ ಸ ರಾಜಾ ಸರ್ವಾತಿಶಾಯಿನಮ್ ॥ ೨೯
ಸಾ ತ್ವಶೋಕವತೀ ರಾಜ್ಞೀ ತಸ್ಯ ರೂಪಂ ಗುಣಾಂಶ್ಚ ತಾನ್ ।
ದೃಷ್ಟ್ವಾ ದೃಷ್ಟ್ವಾ ದ್ವಿಜಸ್ಯಾಭೂತ್ತದ್ವ್ಯಸ್ತದ್ಗತಮಾನಸಾ ॥ ೩೦

೩೧. "ಈತನನ್ನು ನಾನು ಪಡೆಯದೆ ಇದ್ದರೆ ನನ್ನ ಜೀವನದ ಫಲವೇನು ?' ಎಂದು ಆಲೋಚಿಸಿದ ಅವಳು ಉಪಾಯವಾಗಿ ರಾಜನಿಗೆ ಹೇಳಿದಳು.

೩೨–೩೩. "ಆರ್ಯಪುತ್ರ ಪ್ರಸನ್ನನಾಗು, ಈ ಗುಣಶರ್ಮನಿಗೆ ನನಗೆ ವೀಣಾ ಪಾಠವನ್ನು ಹೇಳಿಕೊಡಲು ಆಜ್ಞೆಮಾಡು. ಇಂದು ಈತನ ವೀಣಾವಾದನ ಕೌಶಲವನ್ನು ಕಂಡು ನನ್ನ ಜೀವಕ್ಕಿಂತ ಹೆಚ್ಚಿನ ಆಸೆ ವೀಣೆಯಲ್ಲಿ ನನಗೆ ಉಂಟಾಗಿದೆ'

೩೪–೩೫ ಅದನ್ನು ಕೇಳಿದ ರಾಜನು ಗುಣಶರ್ಮನಿಗೆ ಹೇಳಿದನು, "ಈ ನನ್ನ ರಾಣಿಗೆ ವೀಣಾವಾದನ ಮಾಡುವುದನ್ನು ಹೇಳಿಕೊಡಬೇಕು' ಎಂದು. "ನೀನು ಹೇಳಿದ್ದನ್ನು ನಾನು ಮಾಡುತ್ತೇನೆ. ಒಂದು ಶುಭದಿನದಂದು ಆರಂಭವಾಗಲಿ ಎಂದು ಹೇಳಿ ಗುಣಶರ್ಮನು ರಾಜನಿಂದ ಬೀಳ್ಕೊಂಡು ಮನೆಗೆ ಹೋದನು.

೩೬ ಆದರೆ, ವೀಣೆಯ ಪಾಠ ಆರಂಭಿಸುವುದನ್ನು ಅನೇಕ ದಿನಗಳ ಕಾಲ ಮುಂದೂಡುತ್ತಾ ಇದ್ದನು. ಕಾರಣ ರಾಣಿಯ ದೃಷ್ಟಿಯು ಆತನಿಗೆ ಸರಿ ಕಾಣದಿದ್ದುದು. ಆಕೆಯ ವರ್ತನೆಯಲ್ಲಿ ಅವನಿಗೆ ಯಾವುದೋ ಅನೀತಿಯ ಸುಳಿವು ಕಾಣಿಸತೊಡಗಿತು.

೩೭ ಒಂದು ದಿನ ಊಟಮಾಡುತ್ತಿದ್ದ ರಾಜನ ಬಳಿ ನಿಂತಿದ್ದಾಗ, ವ್ಯಂಜನವನ್ನು ಬಡಿಸುತ್ತಿದ್ದ ಅಡಿಗೆಯ ಪರಿಚಾರಕನನ್ನು, "ಬೇಡ, ಬೇಡ' ಎಂದು ನಿವಾರಿಸಿದನು.

---

ಏತಂ ಚೇತ್ಪ್ರಾಪ್ನುಯಾಂ ನಾಹಂ ತತ್ಕಿಂ ಮೇ ಜೀವಿತೇ ಫಲಮ್ ।
ಇತಿ ಸಂಚಿಂತ್ಯ ಯುಕ್ತ್ಯಾ ಸಾ ರಾಜಾನಮಿದಮಬ್ರವೀತ್ ॥ ೩೧
ಆರ್ಯಪುತ್ರ ಪ್ರಸೀದಾಜ್ಞಾಂ ದೇಹ್ಯಸ್ಮೈ ಗುಣಶರ್ಮಣೇ ।
ಯಥಾ ಮಾಂ ಶಿಕ್ಷಯತ್ಯೇಷ ವೀಣಾಂ ವಾದಯಿತುಂ ಪ್ರಭೋ ॥ ೩೨
ಅಸ್ಯೈತದದ್ಯ ದೃಷ್ಟ್ವಾ ಹಿ ವೀಣಾವಾದನನೈಪುಣಮ್ ।
ಉತ್ಪನ್ನಃ ಕೋಽಪ್ಯಯಂ ತತ್ರ ಮಮ ಪ್ರಾಣಾಧಿಕೋ ರಸಃ ॥ ೩೩
ತಚ್ಛ್ರುತ್ವಾ ಗುಣಶರ್ಮಾಣಂ ಸ ರಾಜಾ ನಿಜಗಾದ ತಮ್ ।
ವಲ್ಲಕೀವಾದನಂ ದೇವೀಮಿಮಾಂ ಶಿಕ್ಷಯ ಸರ್ವಥಾ ॥ ೩೪
ಯಥಾ ದಿಶಸಿ ಕುರ್ಮೋಽತ್ರ ಪ್ರಾರಂಭಂ ಸುಶುಭೇಽಹನಿ ।
ಇತ್ಯುಕ್ತ್ವಾಮಂತ್ರ್ಯ ಸ ನೃಪಂ ಗುಣಶರ್ಮಾ ಗೃಹಂ ಯಯೌ ॥ ೩೫
ವೀಣಾರಂಭಾಪಹಾರಂ ತು ಚಕ್ರೇ ಸ ದಿವಸಾನ್ಬಹೂನ್ ।
ದೃಷ್ಟಿಮನ್ಯಾದೃಶೀಂ ರಾಜ್ಞ್ಯಾಃ ಪ್ರೇಕ್ಷ್ಯಾಪನಯಶಂಕಿತಃ ॥ ೩೬
ಏಕಸ್ಮಿಂಶ್ಚ ದಿನೇ ರಾಜ್ಞೋ ಭುಂಜಾನಸ್ಯಾಂತಿಕೇ ಸ್ಥಿತಃ ।
ವ್ಯಂಜನಂ ದದತಂ ಸೂದಮೇಕಂ ಮಾ ಮೇತ್ಯವಾರಯತ್ ॥ ೩೭

೩೮–೩೯. "ಏಕೆ ಬೇಡವೆನ್ನುತ್ತಿರುವೆ', ಎಂದು ರಾಜನು ಕೇಳಲಾಗಿ ಪ್ರಾಜ್ಞನಾದ ಆತನು ಹೇಳಿದನು. "ಇದು ವಿಷ ಸೇರಿರುವ ವ್ಯಂಜನ. ನೋಟದಿಂದಲೇ ಅದನ್ನು ತಿಳಿಯಬಲ್ಲೆ. ಇದನ್ನು ಬಡಿಸಲು ಬಂದ ಸೂದನು ಭಯಕಂಪಿತನಾಗಿ ಸಂದೇಹಾಸ್ಪದವಾದ ದೃಷ್ಟಿ ಮತ್ತು ಮುಖಚರ್ಯೆಯಿಂದ ಕೂಡಿರುವುದನ್ನು ಗಮನಿಸಿದೆ.

೪೦. ಇದೀಗಲೇ ಯಾರಿಗಾದರೂ ಇದನ್ನು ನೀಡಿ ಪರೀಕ್ಷಿಸೋಣ; ವಿಷವನ್ನು ತಿಂದ ಅವನನ್ನು ನಾನು ವಿಷದಿಂದ ಪಾರುಮಾಡುತ್ತೇನೆ.'

೪೧. ಇದನ್ನು ಕೇಳಿದ ರಾಜನು ಅದೇ ಪರಿಚಾರಕನಿಗೆ ಅದನ್ನು ತಿನ್ನಿಸಿದನು. ತಿಂದನಂತರ ಅವನು ಮೂರ್ಛೆ ಹೋದನು.

೪೨. ಮಂತ್ರದಿಂದ ವಿಷವನ್ನು ತೆಗೆದನಂತರ, ಗುಣಶರ್ಮನೂ ರಾಜನೂ ಅವನನ್ನು ಪ್ರಶ್ನಿಸಲಾಗಿ, ಅಡಿಗೆಯವನು ಇದ್ದದ್ದನ್ನು ಇದ್ದಂತೆಯೆ ಹೇಳಿದನು.

೪೩. "ದೇವ, ನಿಮ್ಮ ವೈರಿಯಾದ ಗೌಡದೇಶದ ರಾಜ ವಿಕ್ರಮಪತಿಯು ನಿಮಗೆ ವಿಷ ಪ್ರಯೋಗ ಮಾಡಿಸಲೆಂದು ನನ್ನನ್ನಿಲ್ಲಿ ಕಳಿಸಿದ್ದಾನೆ.

೪೪. ಪಾಕಕಾರ್ಯದಲ್ಲಿ ಕುಶಲನಾದ ನಾನು ಬೇರೆ ದೇಶದವನಾದರೂ ನಿಮ್ಮ ಬಳಿ ನಿಮ್ಮವನೆಂದು ಹೇಳಿಕೊಂಡು ಬಂದು ಅಡಿಗೆ ಮನೆ ಸೇರಿಕೊಂಡಿದ್ದೇನೆ.

---

ಕಿಮೇತದಿತಿ ಪೃಷ್ಟಶ್ಚ ರಾಜ್ಞಾ ಪ್ರಾಜ್ಞೋ ಜಗಾದ ಸಃ ।
ಸವಿಷಂ ವ್ಯಂಜನಮಿದಂ ಮಯಾ ಜ್ಞಾತಂ ಚ ಲಕ್ಷಣೈಃ ॥ ೩೮
ಸೂದೇನ ಮಮ ದೃಷ್ಟಂ ಹಿ ವ್ಯಂಜನಂ ದದತಾಮುನಾ ।
ಮುಖಂ ಭಯಸಕಂಪೇನ ಶಂಕಾಚಕಿತದೃಷ್ಟಿನಾ ॥ ೩೯
ದೃಶ್ಯತೇ ಚಾಧುನೈವೈತತ್ಕಸ್ಮೈಚಿದ್ದೀಯತಾಮಿದಮ್ ।
ಭೋಜನವ್ಯಂಜನಂ ಯಸ್ಯ ನಿರ್ಹರಿಷ್ಯಾಮ್ಯಹಂ ವಿಷಮ್ ॥ ೪೦
ಇತ್ಯುಕ್ತೇ ತೇನ ರಾಜಾ ಸ ಸೂಪಕಾರಂ ತಮೇವ ತತ್ ।
ವ್ಯಂಜನಂ ಭೋಜಯಾಮಾಸ ಭುಕ್ತ್ವಾ ತಚ್ಚ ಮುಮೂರ್ಛ ಸಃ ॥ ೪೧
ಮಂತ್ರಾಪಾಸ್ತವಿಷಸ್ತೇನ ತತಃ ಸ ಗುಣಶರ್ಮಣಾ ।
ರಾಜ್ಞಾ ಪೃಷ್ಟೋ ಯಥಾತತ್ತ್ವಮೇವಂ ವಕ್ತಿ ಸ್ಮ ಸೂಪಕೃತ್ ॥ ೪೨
ದೇವಾಹಂ ಗೌಡಪತಿನಾ ರಾಜ್ಞಾ ವಿಕ್ರಮಶಕ್ತಿನಾ ।
ವಿಷಂ ಪ್ರಯೋಕ್ತುಂ ಪ್ರಹಿತೋ ಯುಷ್ಮಾಕಮಿಹ ವೈರಿಣಾ ॥ ೪೩
ಸೋಽಹಂ ವೈದೇಶಿಕೋ ಭೂತ್ವಾ ಕುಶಲಃ ಸೂದಕರ್ಮಣಿ ।
ದೇವಾಯಾತ್ಮಾನಮಾವೇದ್ಯ ಪ್ರವಿಷ್ಟೋಽತ್ರ ಮಹಾನಸೇ ॥ ೪೪

೪೫. ಇಂದು ವ್ಯಂಜನದೊಳಗೆ ವಿಷ ಬೆರಸಿ ಬಡಿಸುತ್ತಿರುವಾಗ, ಈ ಮೇಧಾವಿಯು ನನ್ನನ್ನು ಹಿಡಿದುಬಿಟ್ಟನು. ನಂತರ ಏನಾಯಿತೆಂದು ನಿಮಗೆ ತಿಳಿದೇ ಇದೆ.

೪೬. ರಾಜನು ಸುಪ್ರೀತನಾಗಿ ಅಡಿಗೆಯವನನ್ನು ಬಂಧಿಸಿ ಪ್ರಾಣದಾನ ಮಾಡಿದ ಗುಣಶರ್ಮನಿಗೆ ಸಾವಿರ ಹಳ್ಳಿಗಳ ಉಂಬಳಿಯನ್ನು ನೀಡಿದನು.

೪೭. ಮಾರನೆಯ ದಿನ ರಾಜನನ್ನು ರಾಣಿಯು ಪೀಡಿಸತೊಡಗಿದಾಗ ರಾಜನು ಗುಣಶರ್ಮನ ವೀಣಾಶಿಕ್ಷಣ ಆರಂಭಿಸುವಂತೆ ಮಾಡಿದನು.

೪೮. ವೀಣೆ ಹೇಳಿಸಿಕೊಳ್ಳತೊಡಗಿದ ರಾಣಿ ಅಶೋಕವತಿಯು ಗುಣಶರ್ಮನನ್ನು ಸದಾ ವಿಲಾಸದಲ್ಲೂ, ಹಾಸ್ಯದಲ್ಲೂ ತೊಡಗಿಸಿದಳು.

೪೯. ಒಮ್ಮೆ, ಕಾಮಪೀಡಿತಳಾದ ಅವಳು ಯಾರೂ ಇಲ್ಲದಿರುವಾಗ ತನ್ನ ನಖಗಳಿಂದ ಅವನನ್ನು ತಿವಿಯುತ್ತಾ, ಬೇಡವೆಂದು ಹೇಳುತ್ತಿದ್ದ ಅವನನ್ನು ಕುರಿತು ಹೇಳಿದಳು,

೫೦. "ಸುಂದರನೆ, ವೀಣೆ ಹೇಳಿಸಿಕೊಳ್ಳುವ ನೆಪದಿಂದ ನಿನ್ನನ್ನು ನಾನು ಬಯಸಿದ್ದೇನೆ. ನಿನ್ನಲ್ಲಿ ನನಗೆ ಗಾಢವಾದ ಅನುರಾಗ ಉಂಟಾಗಿದೆ. ನನ್ನನ್ನು ಪರಿಗ್ರಹಿಸು'.

---

ತಚ್ಚಾದ್ಯ ದದದೇವಾಹಂ ವಿಷಂ ವ್ಯಂಜನಮಧ್ಯಗಮ್ ।
ಲಕ್ಷಿತೋ ಧೀಮತಾನೇನ ಪ್ರಭುರ್ಜಾನಾತ್ಯತಃ ಪರಮ್ ॥ ೪೫
ಇತ್ಯುಕ್ತವಂತಂ ತಂ ಸೂದಂ ನಿಗೃಹ್ಯ ಗುಣಶರ್ಮಣೇ ।
ಪ್ರೀತೋ ಗ್ರಾಮಸಹಸ್ರಂ ಸ ಪ್ರಾಣದಾಯ ದದೌ ನೃಪಃ ॥ ೪೬
ಅನ್ಯೇದ್ಯುಶ್ಚಾನುಬಂಧುತ್ಯಾ ರಾಜ್ಞ್ಯಾ ರಾಜಾ ಸ ಯತ್ನತಃ ।
ವೀಣಾಯಾ ಗುಣಶರ್ಮಾಣಂ ಶಿಕ್ಷಾರಂಭಮಕಾರಯತ್ ॥ ೪೭
ತತಃ ಶಿಕ್ಷಯತಸ್ತಸ್ಯ ವೀಣಾ ಸಾ ಗುಣಶರ್ಮಣಂ ।
ರಾಜ್ಞೀ ವಿಲಾಸಹಾಸಾದಿ ಚಕ್ರೇಽಶೋಕವತೀ ಸದಾ ॥ ೪೮
ಏಕದಾ ಸಾ ಕರರುಹೈರ್ವಿಧ್ಯಂತೀ ವಿಜನೇ ಮುಹುಃ ।
ಉವಾಚ ವಾರಯಂತಂ ತಂ ಧೀರಂ ಸ್ಮರಶರಾತುರಾ ॥ ೪೯
ವೀಣಾವಾದ್ಯಾಪದೇಶೇನ ತ್ವಂ ಸುಂದರ ಮಯಾರ್ಥಿತಃ ।
ತ್ವಯಿ ಗಾಢೋಽನುರಾಗೋ ಹಿ ಜಾತೋ ಮೇ ತದ್ಭಜಸ್ವ ಮಾಮ್ ॥ ೫೦

೫೧–೫೨. ಹೀಗೆಂದ ರಾಣಿಯನ್ನು ಕುರಿತು ಗುಣಶರ್ಮನು ಹೇಳಿದನು, "ಹೀಗೆಲ್ಲ ಹೇಳಬೇಡ ನೀನು ನನಗೆ ಸ್ವಾಮಿ ಪತ್ನಿ, ಇಂತಹ ಪ್ರಭುದ್ರೋಹವನ್ನು ನಮ್ಮಂಥವರು ಮಾಡುವುದಿಲ್ಲ. ಕೆಟ್ಟಕಾರ್ಯವನ್ನು ನಿಲ್ಲಿಸು' ಆಗ ರಾಣಿ ಎಂದಳು;

೫೩. "ಏನು ! ಈ ನಿನ್ನ ರೂಪು, ಕಲೆಗಳಲ್ಲಿ ನಿನಗಿರುವ ಪಾಂಡಿತ್ಯ ಎಲ್ಲ ನಿಷ್ಫಲವಾಗಬೇಕೆ? ನಿನ್ನಲ್ಲಿ ಪ್ರಣಯಭಿಕ್ಷೆಯನ್ನು ಕೇಳುತ್ತಿರುವ ನನ್ನನ್ನು ನೀರಸನಾಗಿ ನೀನು ಉಪೇಕ್ಷಿಸಬಹುದೆ ?'

೫೪–೫೫. ಅದನ್ನು ಕೇಳಿದ ಗುಣಶರ್ಮನು ಅವಳನ್ನು ಅಪಹಾಸ್ಯಮಾಡಿ ಇಂತೆಂದನು, "ಹೌದು, ಹೌದು ! ಚೆನ್ನಾಗಿ ಹೇಳಿದೆ. ಈ ರೂಪ ಪಾಂಡಿತ್ಯಗಳಿಂದೇನು ಪ್ರಯೋಜನ ! ಪರಸ್ತ್ರೀಯನ್ನ ಅಪಹರಿಸಿ ಇಹದಲ್ಲೂ ಪರದಲ್ಲೂ ಕೀರ್ತಿಯನ್ನು ಕಳಂಕಿತವಾಗಿಸಿಕೊಂಡು ನರಕಾರ್ಣವದಲ್ಲಿ ಬೀಳದಿದ್ದರೆ ಏನು ಫಲ !?'

---

ಏವಮುಕ್ತವತೀಂ ರಾಜ್ಞೀಂ ಗುಣಶರ್ಮಾ ಜಗಾದ ತಾಮ್ ।
ಮೈವಂ ವಾದೀರ್ಮಮ ತ್ವಂ ಹಿ ಸ್ವಾಮಿದಾರಾ ನ ಚೇದೃಶಮ್ ॥ ೫೧
ಅಸ್ಮಾದೃಶಃ ಪ್ರಭುದ್ರೋಹಂ ಕುರ್ಯಾದ್ವಿರಮ ಸಾಹಸಾತ್ ।
ಇತ್ಯೂಚಿವಾಂಸಂ ಸಾ ರಾಜ್ಞೀ ಗುಣಶರ್ಮಾಣಮಾಹ ತಮ್ ॥ ೫೨
ಕಿಮಿದಂ ನಿಷ್ಫಲಂ ರೂಪಂ ವೈದಗ್ಧ್ಯಂ ಚ ಕಲಾಸು ತೇ ।
ಮಾಮೀದೃಶೀಂ ಪ್ರಣಯಿನೀಂ ನೀರಸೋಪೇಕ್ಷಸೇ ಕಥಮ್ ॥ ೫೩
ತಚ್ಛ್ರುತ್ವಾ ಗುಣಶರ್ಮಾ ತಾಂ ಸೋಪಹಾಸಮಭಾಷತ ।
ಸುಷ್ಠೂಕ್ತಂ ತಸ್ಯ ರೂಪಸ್ಯ ವೈದಗ್ಧ್ಯಸ್ಯ ಚ ಕಿಂ ಫಲಮ್ ॥ ೫೪
ಪರದಾರಾಪಹಾರೇಣ ಯನ್ನಾಕೀರ್ತಿಮಲೀಮಸಮ್ ।
ಇಹಾಮುತ್ರ ಚ ಯನ್ನ ಸ್ಯಾತ್ಪಾತಾಯ ನರಕಾರ್ಣವೇ ॥ ೫೫

೫೬–೫೯. ಅವನು ಹಾಗೆ ಹೇಳಿದಾಗ ರಾಣಿಯು ಕೋಪಬಂದಂತೆ ನಟಿಸಿ ಹೇಳಿದಳು, "ನನ್ನ ಮಾತನ್ನು ನೀನು ಕೇಳದ ಮೇಲೆ ನಾನು ಸಾಯುವುದು ನಿಶ್ಚಿತ. ಆದ್ದರಿಂದ ಅಪಮಾನಿತಳಾದ ನಾನು ಮೊದಲು ನಿನ್ನನ್ನು ಕೊಂದು ನಂತರ ಪ್ರಾಣ ಕಳೆದುಕೊಳ್ಳುವೆ' ಗುಣಶರ್ಮನು, "ಆಗಲಿ, ನಿನ್ನಿಷ್ಟದಂತೆಯೇ ಮಾಡು. ಧರ್ಮದಿಂದ ಬಾಳುವವನ ಪ್ರಾಣ ಒಂದು ಕ್ಷಣ ಮಾತ್ರವಿದ್ದರೂ ಅದು ಸಾರ್ಥಕವೆ! ಅಧರ್ಮದಿಂದ ಶತಕೋಟಿಕಲ್ಪಗಳು ತಾನೆ ಬದುಕಿ ಆಗಬೇಕಾದ್ದೇನು ? ಶ್ಲಾಘ್ಯನೂ, ಪಾಪರಹಿತನೂ ಆದ ನನ್ನ ಸಾವು ನನಗೆ ನಿಂದನೀಯವಲ್ಲ. ಅದು ಪಾಪಿಯಾಗಿ ರಾಜ ಶಾಸನದಿಂದ ದಂಡನೆಗೆ ಒಳಗಾಗುವುದಕ್ಕಿಂತ ಮೇಲು' ಎಂದನು.

೬೦. ಇಂತಹ ಮಾತನ್ನು ಕೇಳಿದ ನಂತರವೂ ರಾಣಿಯು ಅವನನ್ನು ಕುರಿತು ಹೀಗೆಂದಳು, "ನಿನ್ನ ಅಥವಾ ನನ್ನ ದ್ರೋಹದ ಬಗ್ಗೆ ಮಾತನ್ನಾಡಬೇಡ. ನಾನು ಹೇಳುವುದನ್ನು ಕೇಳು.

೬೧. ರಾಜನು ನಾನು ಹೇಳಿದ್ದು ಅಸಾಧ್ಯವಾದರೂ ಮಾಡದೆ ಇರಲಾರ. ಅವನಲ್ಲಿ ನಾನು ವಿಜ್ಞಾಪನೆ ಸಲ್ಲಿಸಿ ನಿನಗೆ ರಾಜ್ಯವನ್ನು ಕೊಡಿಸುತ್ತೇನೆ.

೬೨. ಎಲ್ಲ ಸಾಮಂತರೂ ನಿನ್ನ ಅನುಯಾಯಿಗಳಾಗುವಂತೆ ಮಾಡುತ್ತೇನೆ. ಇದರಿಂದ ಗುಣಶಾಲಿಯಾದ ನೀನೇ ರಾಜನಾಗುವೆ.

---

ಇತ್ಯುಕ್ತೇ ತೇನ ಸಾ ರಾಜ್ಞೀ ಸಕೋಪೇವ ತಮಬ್ರವೀತ್ ।
ಮರಣಂ ಮೇ ಧ್ರುವಂ ತಾವನ್ಮದ್ವಚಸ್ಯಕೃತೇ ತ್ವಯಾ ॥ ೫೬
ತದಹಂ ಮಾರಯಿತ್ವಾ ತ್ವಾಂ ಮರಿಷ್ಯಾಮ್ಯವಮಾನಿತಾ ।
ಗುಣಶರ್ಮಾ ತತೋಽವಾದೀತ್ಕಾಮಂ ಭವತು ನಾಮ ತತ್ ॥ ೫೭
ವರಂ ಯದ್ಧರ್ಮಪಾಶೇನ ಕ್ಷಣಮೇಕಂ ಹಿ ಜೀವಿತಮ್ ।
ಪರಂ ನ ಯದಧರ್ಮೇಣ ಕಲ್ಪಕೋಟಿಶತಾನ್ಯಪಿ ॥ ೫೮
ಶ್ಲಾಘ್ಯಶ್ಚಾಕೃತಪಾಪಸ್ಯ ಮಮ ಮೃತ್ಯುರಗರ್ಹಿತಃ ।
ನ ಪುನಃ ಕೃತಪಾಪಸ್ಯ ಗರ್ಹಿತಂ ರಾಜಶಾಸನಮ್ ॥ ೫೯
ಏತಚ್ಛ್ರುತ್ವಾಪಿ ಸಾ ರಾಜ್ಞೀ ಪುನರೇವಮುವಾಚ ತಮ್ ।
ಆತ್ಮನೋ ಮಮ ಚ ದ್ರೋಹಂ ಮಾ ಕೃಥಾಃ ಶೃಣು ವಚ್ಮಿ ತೇ ॥ ೬೦
ನಾತಿಕ್ರಾಮತಿ ರಾಜಾಯಮಶಕ್ಯಮಪಿ ಮದ್ವಚಃ ।
ತದಸ್ಯ ಕೃತ್ವಾ ವಿಜ್ಞಪ್ತಿಂ ವಿಷಯಾನ್ದಾಪಯಾಮಿ ತೇ ॥ ೬೧
ಕಾರಯಾಮಿ ಚ ಸಾಮಂತಾನ್ಸರ್ವಾಂಸ್ತ್ವದನುಯಾಯಿನಃ ।
ತೇನ ಸಂಪತ್ಸ್ಯಸೇ ರಾಜಾ ತ್ವಮೇವೇಹ ಗುಣೋಜ್ಜ್ವಲಃ ॥ ೬೨

೬೩. ಅಂದಮೇಲೆ ನಿನಗೇನು ಭಯ ? ಯಾರು ತಾನೆ ನಿನ್ನನ್ನು ಅಪಮಾನಗೊಳಿಸಲು ಸಾಧ್ಯ ? ಆದ್ದರಿಂದ ಎಲ್ಲ ಭಯ ಶಂಕೆಗಳನ್ನು ಬಿಟ್ಟು ನನ್ನನ್ನು ಸೇರು ಇಲ್ಲದಿದ್ದರೆ ನೀನೇ ಇರುವುದಿಲ್ಲ !'

೬೪. ಹೀಗೆ ಹೇಳುತ್ತಿದ್ದ, ತನ್ನಲ್ಲಿ ಅನುರಾಗದಿಂದ ಕೂಡಿದ ರಾಜಪತ್ನಿಯನ್ನು ಕುರಿತು ಗುಣಶರ್ಮನು ಆ ಕ್ಷಣದಲ್ಲಿ ಬೀಸುವ ದೊಣ್ಣೆ ತಪ್ಪಿದರೆ ಸಾಕೆಂದುಕೊಂಡು ಹೇಳಿದನು. 'ನೀನು ನನ್ನನ್ನು ಬಹುವಾಗಿ ನಿರ್ಬಂಧಿಸಿದ್ದೀ ಆದರೆ ನಿನ್ನ ಮಾತಿನಂತೆ ನಡೆಯುವೆ. ಆದರೆ ದೇವಿ, ಇದು ಬಯಲಾಗಿಬಿಡುವ ಭಯದಿಂದ ಈ ಕ್ಷಣದಲ್ಲಿ ನಿನ್ನಾಸೆಯನ್ನು ನೆರವೇರಿಸಲಾಗುವುದಿಲ್ಲ !'

೬೬–೬೭. 'ಕೆಲವು ದಿನಗಳ ಕಾಲ ಸಹಿಸಿಕೊ. ನನ್ನ ಮಾತನ್ನು ನಂಬು. ಸರ್ವನಾಶವನ್ನು ಮಾಡಬಲ್ಲ ನಿನ್ನ ವಿರೋಧವನ್ನು ನಾನೇಕೆ ಕಟ್ಟಿಕೊಳ್ಳಲಿ ?' ಎಂಬ ಆಸೆಯ ಮಾತಿನಿಂದ ಆಕೆಯನ್ನು ಸಂತೋಷಗೊಳಿಸಿ, ಅವಳಿಗೆ ಮಾತುಕೊಟ್ಟು, ಅಲ್ಲಿಂದ ನಿಟ್ಟುಸಿರಿನೊಂದಿಗೆ ಹೊರಬಿದ್ದನು.

೬೮. ನಂತರ ಕೆಲವು ದಿನಗಳು ಕಳೆದಿರಲು ಮಹಾಸೇನ ರಾಜನು ಕೋಟ್ಟದ ಸೋಮಕೇಶ್ವರನ ಮೇಲೆ ಮುತ್ತಿಗೆ ಹಾಕಿದನು.

೬೯. ಮಹಾಸೇನನು ಕೋಟ್ಟದಲ್ಲಿದ್ದುದನ್ನು ತಿಳಿದ ಗೌಡ ದೇಶದ ರಾಜನಾದ ವಿಕ್ರಮಶಕ್ತಿಯು ಬಂದು ಮಹಾಸೇನನನ್ನು ಮುತ್ತಿದನು.

---

ತತಸ್ತೇ ಕಿಂ ಭಯಂ ಕಸ್ತ್ವಾಂ ಕಥಂ ಪರಿಭವಿಷ್ಯತಿ ।
ತನ್ಮಾಂ ಭಜಸ್ವ ನಿಃಶಂಕಮನ್ಯಥಾ ನ ಭವಿಷ್ಯಸಿ ॥ ೬೩
ಇತಿ ತಾಂ ಬ್ರುವತೀಂ ಮತ್ವಾ ಸಾನುಬಂಧಾಂ ನೃಪಾಂಗನಾಮ್ ।
ಗುಣಶರ್ಮಾಬ್ರವೀದ್ಯುಕ್ತ್ಯಾ ತತ್ಕ್ಷಣಂ ಸ ವ್ಯಪೋಹಿತುಮ್ ॥ ೬೪
ಯದಿ ತೇಽತ್ಯಂತನಿರ್ಬಂಧಸ್ತತ್ಕರಿಷ್ಯೇ ವಚಸ್ತವ ।
ಪ್ರತಿಭೇದಭಯಾದ್ದೇವಿ ಸಹಸಾ ತು ನ ಯುಜ್ಯತೇ ॥ ೬೫
ಸಹಸ್ವ ದಿವಸಾನ್ಕಾಂಶ್ಚಿತ್ತ್ವಂ ಜಾನೀಹಿ ಮದ್ವಚಃ ।
ಸರ್ವನಾಶಫಲೇನಾರ್ಥಸ್ತ್ವದ್ವಿರೋಧೇನ ಕೋ ಮಮ ॥ ೬೬
ಇತ್ಯಾಶಯಾ ತಾಂ ಸಂತೋಷ್ಯ ಪ್ರತಿಪನ್ನವಚಾಸ್ತಯಾ ।
ಗುಣಶರ್ಮಾ ಸ ನಿರ್ಗತ್ಯ ಯಯಾವುಚ್ಛ್ವಸಿತಸ್ತತಃ ॥ ೬೭
ತತೋ ದಿನೇಷು ಗಚ್ಛತ್ಸು ಸ ಮಹಾಸೇನಭೂಪತಿಃ ।
ಗತ್ವೈವ ವೇಷ್ಟಯಾಮಾಸ ಕೋಟ್ಟಸ್ಥಂ ಸೋಮಕೇಶ್ವರಮ್ ॥ ೬೮
ತತ್ರ ಪ್ರಾಪ್ತಂ ವಿದಿತ್ವಾ ಚ ಗೌಡನಾಥಃ ಸ ಭೂಪತಿಃ ।
ಏತ್ಯ ವಿಕ್ರಮಶಕ್ತಿಸ್ತಂ ಮಹಾಸೇನಮವೇಷ್ಟಯತ್ ॥ ೬೯

೭೦. ಆಗ ಮಹಾಸೇನ ರಾಜನು ಗುಣಶರ್ಮನಿಗೆ ಹೇಳಿದನು, "ಒಬ್ಬನನ್ನು ನಾವು ಮುತ್ತಿದರೆ ನಮ್ಮನ್ನೇ ನಮ್ಮ ಶತ್ರು ಸುತ್ತುವರಿದಿದ್ದಾನೆ.

೭೧–೭೨. ನಾವು ಕಾದಾಡುವುದಾದರೂ ಹೇಗೆ ? ಯುದ್ಧಮಾಡದೆ ಹೀಗೆ ಮುತ್ತಿಗೆಯಲ್ಲೇ ಎಷ್ಟು ದಿನ ಇರಲು ಸಾಧ್ಯ ? ಈ ಸಂಕಟಕಾಲದಲ್ಲಿ ನಾವೇನು ಮಾಡಬೇಕು ?' ಎಂದು ಅವನೊಡನೆ ಕೇಳಿದಾಗ ಗುಣಶರ್ಮನು ಹೇಳಿದನು.

೭೩–೭೪. "ದೇವ, ಧೈರ್ಯಗುಂದಬೇಡ. ಎಂಥಹ ಉಪಾಯವನ್ನು ಮಾಡುತ್ತೇವೆಂದರೆ ನಾವು ಸಂಕಟದಿಂದಲೂ ಪಾರಾಗಿ ನಮ್ಮ ಕಾರ್ಯವನ್ನೂ ಸಾಧಿಸಿಕೊಳ್ಳಬಹುದು' ಎಂದು ರಾಜನಿಗೆ ಆಶ್ವಾಸನೆಯನ್ನು ನೀಡಿ, ಅಂತರ್ಧಾನ ಮಾಡುವ ಶಕ್ತಿಯುಳ್ಳ ಅಂಜನವನ್ನು ಕಣ್ಣಿಗೆ ಲೇಪಿಸಿಕೊಂಡು ರಾತ್ರಿಯಲ್ಲಿ ವಿಕ್ರಮ ಶಕ್ತಿಯ ಸೇನಾಶಿಬಿರಕ್ಕೆ ಹೋದನು.

೭೫. ಅವನ ಬಳಿ ಹೋಗಿ ನಿದ್ದೆ ಮಾಡುತ್ತಿದ್ದ ಅವನನ್ನು ಎಬ್ಬಿಸಿ ಹೇಳಿದನು, "ರಾಜನೇ, ನನ್ನನ್ನು ಯಾರೆಂದು ತಿಳಿದಿರುವಿ ? ದೇವದೂತ ನಾನು.

೭೬. ಮಹಾಸೇನರಾಜನೊಡನೆ ಸಂಧಿಯನ್ನು ಮಾಡಿಕೊಂಡು ಆದಷ್ಟು ಶೀಘ್ರದಲ್ಲಿ ಇಲ್ಲಿಂದ ಕಾಲುಕೀಳು. ಇಲ್ಲದಿದ್ದರೆ ಸೈನ್ಯ ಸಹಿತನಾದ ನಿನ್ನ ನಾಶ ಕಟ್ಟಿಟ್ಟದ್ದು.

---

ತತಃ ಸ ಗುಣಶರ್ಮಾಣಂ ಮಹಾಸೇನನೃಪೋಽಬ್ರವೀತ್ ।
ಏಕಂ ರುದ್ಧ್ವಾ ಸ್ಥಿತಾಃ ಸಂತೋ ರುದ್ಧಾಃ ಸ್ಮೋಽನ್ಯೇನ ಶತ್ರುಣಾ ॥ ೭೦
ತದಿದಾನೀಮಪರ್ಯಾಪ್ತಾಃ ಕಥಂ ಯುದ್ಧ್ಯಾಮುಹೇ ದ್ವಯೋಃ ।
ಅಯುದ್ಧೇ ರುದ್ಧಕೇ ವೀರ ಸ್ಥಾಸ್ಯಾಮಶ್ಚ ಕಿಯಚ್ಚಿರಮ್ ॥ ೭೧
ತದಸ್ಮಿನ್ಸಂಕಟೇಽಸ್ಮಾಭಿಃ ಕಿಂ ಕಾರ್ಯಮಿತಿ ತೇನ ಸಃ ।
ಪೃಷ್ಟಃ ಪಾರ್ಶ್ವಸ್ಥಿತೋ ರಾಜ್ಞಾ ಗುಣಶರ್ಮಾಭ್ಯಭಾಷತ ॥ ೭೨
ಧೀರೋ ಭವ ಕರಿಷ್ಯಾಮಿ ದೇವೋಪಾಯಂ ತಥಾವಿಧಮ್ ।
ಯೇನಾಸ್ಮಾನ್ನಿಸ್ತರಿಷ್ಯಾಮಃ ಸಂಕಟಾದಪಿ ಕಾರ್ಯತಃ ॥ ೭೩
ಇತ್ಯಾಶ್ವಾಸ್ಯ ನೃಪಂ ದತ್ತ್ವಾ ಸೋಽಂತರ್ಧಾನಾಂಜನಂ ದೃಶೋಃ ।
ರಾತ್ರೌ ವಿಕ್ರಮಶಕ್ತೇಸ್ತದದೃಶ್ಯಃ ಕಟಕಂ ಯಯೌ ॥ ೭೪
ಪ್ರವಿಶ್ಯ ಚಾಂತಿಕಂ ತಸ್ಯ ಸುಪ್ತಂ ಚ ಪ್ರತಿಬೋಧ್ಯ ತಮ್ ।
ಜಗಾದ ವಿದ್ಧಿ ಮಾಂ ರಾಜನ್‌ದೇವದೂತಮುಪಾಗತಮ್ ॥ ೭೫
ಸಂಧಿಂ ಕೃತ್ವಾ ಮಹಾಸೇನನೃಪೇಣಾಪಸರ ದ್ರುತಮ್ ।
ಅನ್ಯಥಾ ತೇ ಸಸೈನ್ಯಸ್ಯ ನಾಶಃ ಸ್ಯಾದಿಹ ನಿಶ್ಚಿತಮ್ ॥ ೭೬

೭೭,೭೮. ನೀನೇ ದೂತನನ್ನು ಅಟ್ಟಿದರೆ ಅವನು ಸಂಧಿ ಮಾಡಿಕೊಳ್ಳಬಹುದು. ಈ ಮಾತನ್ನು ನಿನ್ನಲ್ಲಿ ನಿವೇದಿಸಿಕೊಳ್ಳಲು ಸಾಕ್ಷಾತ್ ಮಹಾವಿಷ್ಣುವೇ ನನ್ನನ್ನಿಲ್ಲಿ ಕಳುಹಿಸಿದ್ದಾನೆ. ನೀನು ಭಕ್ತ ಭಗವಂತನೇ ಭಕ್ತರ ಯೋಗಕ್ಷೇಮವನ್ನು ಕಾಯುತ್ತಾನೆ' ಎಂಬ ಮಾತನ್ನು ಕೇಳಿ ರಾಜಾ ವಿಕ್ರಮಶಕ್ತಿಯು ಹೀಗೆ ಆಲೋಚಿಸಿದನು.

೭೯. "ಇದು ಸತ್ಯವೇ ಇರಬೇಕು. ಒಳಗೆ ಬರಲು ಸಾಧ್ಯವೇ ಇಲ್ಲದ ಈ ನನ್ನ ಬಿಡಾರಕ್ಕೆ ಯಾರು ತಾನೆ ಬರಲು ಸಾಧ್ಯ ? ಈತನ ರೂಪವೂ ಕೂಡ ಮನುಷ್ಯ ಮಾತ್ರದಲ್ಲ, ದಿವ್ಯವಾಗಿದೆ

೮೦. ಹೀಗೆಂದುಕೊಂಡ ರಾಜನು ಅವನಿಗೆ ಹೇಳಿದನು, "ಧನ್ಯನಾದೆ, ದೇವನು ಈ ರೀತಿಯಾಗಿ ನನಗೆ ಆದೇಶ ನೀಡಿರುವುದಾದರೆ ಹಾಗೆಯೇ ಮಾಡುವೆ'

೮೧. ಹೀಗೆ ಆಲೋಚಿಸುತ್ತಿರುವಂತೆಯೇ ಅವನಿಗೆ ನಂಬಿಕೆ ಹುಟ್ಟಿಸುವಂತೆ ಗುಣಶರ್ಮನು ಅಂಜನ ಹಾಕಿಕೊಂಡು ಅಂತರ್ಹಿತನಾಗಿ ಅಲ್ಲಿಂದ ಹೊರಬಿದ್ದನು.

೮೨. ಬಂದು ತಾನು ಮಾಡಿದ್ದೆಲ್ಲವನ್ನು ಮಹಾಸೇನನಿಗೆ ಹೇಳಿದನು. ಆಗ ಅವನು ಪ್ರಾಣವನ್ನೂ, ರಾಜ್ಯವನ್ನೂ ಕೊಟ್ಟ ಅವನನ್ನು ಗಾಢವಾಗಿ ಆಲಿಂಗಿಸಿ ಅಭಿನಂದಿಸಿದನು.

೮೩. ಬೆಳಗಾದಾಗ ವಿಕ್ರಮಶಕ್ತಿಯು ದೂತನನ್ನು ಕಳುಹಿಸಿ ಮಹಾಸೇನನೊಡನೆ ಸಂಧಿಮಾಡಿಕೊಂಡು ತನ್ನ ಸೇನಾಬಲದೊಡನೆ ಹಿಂತಿರುಗಿದನು.

---

ಪ್ರೇಷಿತೇ ಚ ತ್ವಯಾ ದೂತೇ ಸ ಸಂಧಿಂ ತೇಽನುಮಂಸ್ಯತೇ ।
ಇತಿ ವಕ್ತುಂ ಭಗವತಾ ವಿಷ್ಣುನಾ ಪ್ರಹಿತೋಽಸ್ಮಿ ತೇ ॥ ೭೭
ಭಕ್ತಸ್ತ್ವಂ ಚ ಸ ಭಕ್ತಾನಾಂ ಯೋಗಕ್ಷೇಮಮವೇಕ್ಷತೇ ।
ತಚ್ಛ್ರುತ್ವಾ ಚಿಂತಿತಂ ತೇನ ರಾಜ್ಞಾ ವಿಕ್ರಮಶಕ್ತಿನಾ ॥ ೭೮
ನಿಶ್ಚಿತಂ ಸತ್ಯಮೇವೈತದ್ದುಷ್ಪ್ರವೇಶೇಽನ್ಯಥಾ ಕಥಮ್ ।
ಇಹ ಯಃ ಪ್ರವಿಶೇತ್ಕಶ್ಚಿನ್ನೈಷಾ ಮರ್ತ್ಯೋಚಿತಾಕೃತಿಃ ॥ ೭೯
ಇತ್ಯಾಲೋಚ್ಯ ಸ ತಂ ಪ್ರಾಹ ರಾಜಾ ಧನ್ಯೋಽಸ್ಮಿ ಯಸ್ಯ ಮೇ ।
ದೇವಃ ಸಮಾದಿಶತ್ಯೇವಂ ಯಥಾದಿಷ್ಟಂ ಕರೋಮಿ ತತ್ ॥ ೮೦
ಇತಿ ವಾದಿನ ಏವಾಸ್ಯ ರಾಜ್ಞಃ ಪ್ರತ್ಯಯಮಾದಧತ್ ।
ಅಂಜನಾಂತರ್ಹಿತೋ ಭೂತ್ವಾ ಗುಣಶರ್ಮಾ ತತೋ ಯಯೌ ॥ ೮೧
ಗತ್ವಾ ಯಥಾಕೃತಂ ತಚ್ಚ ಮಹಾಸೇನಾಯ ಸೋಽಭ್ಯಧಾತ್ ।
ಸೋಽಪ್ಯಭ್ಯನಂದತ್ಕಂಠೇ ತಂ ಗೃಹೀತ್ವಾ ಪ್ರಾಣರಾಜ್ಯದಮ್ ॥ ೮೨
ಪ್ರಾತರ್ವಿಕ್ರಮಶಕ್ತಿಶ್ಚ ಸ ದೂತಂ ಪ್ರೇಷ್ಯ ಭೂಪತಿಃ ।
ಮಹಾಸೇನೇನ ಸಂಧಾಯ ಸಸೈನ್ಯಃ ಪ್ರಯಯೌ ತತಃ ॥ ೮೩

೭೪. ಗುಣಶರ್ಮನ ಪ್ರಭಾವದಿಂದ ಮಹಾಸೇನನು ಸೋಮಕನನ್ನು ಸುಲಭವಾಗಿ ಗೆದ್ದು, ಆನೆ ಕುದುರೆಗಳನ್ನು ಯಥೇಚ್ಛವಾಗಿ ಪಡೆದುಕೊಂಡು ವಿಜಯಿಯಾಗಿ ಉಜ್ಜಯಿನಿಗೆ ಮರಳಿದನು.

೭೫. ಅಲ್ಲಿರುವಾಗ ಒಮ್ಮೆ ನದೀ ಸ್ನಾನ ಮಾಡುವಾಗ ಮೊಸಳೆಯ ಹಿಡಿತದಿಂದಲೂ ಮತ್ತೊಮ್ಮೆ ಉಪವನದಲ್ಲಿದ್ದಾಗ ಸರ್ಪದಂಶನದಿಂದಲೂ ಗುಣಶರ್ಮನು ಪಾರುಮಾಡಿದನು.

೭೬. ಕೆಲವು ದಿನಗಳಾದ ನಂತರ ಸೈನ್ಯವನ್ನು ಬಲಪಡಿಸಿಕೊಂಡು ರಾಜನು ತನ್ನ ವೈರಿಯಾದ ವಿಕ್ರಮಶಕ್ತಿಯನ್ನು ಆಕ್ರಮಿಸಲು ಹೊರಟನು.

೭೭. ಇದನ್ನು ತಿಳಿದೊಡನೆ ಅವನೂ ಯುದ್ಧಕ್ಕಾಗಿ ನಿಂತನು. ಬಳಿಕ ಇವರೀರ್ವರ ನಡುವೆ ಮಹಾಯುದ್ಧವೇರ್ಪಟ್ಟಿತು.

೭೮. ಕ್ರಮೇಣ ದ್ವಂದ್ವಯುದ್ಧದಲ್ಲಿ ಇಬ್ಬರೂ ಕಲೆತರು. ಪರಸ್ಪರ ಕಾದಾಟದಲ್ಲಿ ಇಬ್ಬರೂ ರಥಹೀನರಾದರು.

೭೯. ನಂತರ ಕೋಪದಿಂದ ಇಬ್ಬರೂ ಖಡ್ಗಧಾರಿಗಳಾಗಿ ಒಬ್ಬರ ಮೇಲೊಬ್ಬರು ಏರಿ ಬರುತ್ತಿರುವಾಗ ಗಾಬರಿಯಿಂದ ಮಹಾಸೇನರಾಜನು ನೆಲದ ಮೇಲೆ ಎಡವಿ ಬಿದ್ದು ಬಿಟ್ಟನು.

---

ಮಹಾಸೇನೋಽಪಿ ಜಿತ್ವಾ ತಂ ಸೋಮಕಂ ಪ್ರಾಪ್ಯ ಹಸ್ತಿನಃ ।
ಅಶ್ವಾಂಶ್ಚೋಜ್ಜಯಿನೀಮಾಗಾತ್ಪ್ರಭಾವಾದ್ಗುಣಶರ್ಮಣಃ ॥ ೭೪
ತತ್ರಸ್ಥಂ ಚ ನದೀಸ್ನಾನೇ ಗ್ರಾಹಾದುಪವನೇ ಚ ತಮ್ ।
ಸರ್ಪದಂಶವಿಷಾದ್ಭೂಪಂ ಗುಣಶರ್ಮಾ ರರಕ್ಷ ಸಃ ॥ ೭೫
ಗತೇಷ್ವಥ ದಿನೇಷ್ವಾಪ್ತಬಲೋ ರಾಜಾ ಸ ವೈರಿಣಮ್ ।
ಮಹಾಸೇನೋಽಭಿಯೋಕ್ತುಂ ತಂ ಯಯೌ ವಿಕ್ರಮಶಕ್ತಿಕಮ್ ॥ ೭೬
ಸೋಽಪಿ ಬುದ್ಧ್ವೈವ ತಸ್ಯಾಗ್ರೇ ನೃಪೋ ಯುದ್ಧಾಯ ನಿರ್ಯಯೌ ।
ತತಃ ಪ್ರವವೃತೇ ತತ್ರ ಸಂಗ್ರಾಮೋಽತಿಮಹಾಂಸ್ತಯೋಃ ॥ ೭೭
ಕ್ರಮಾಚ್ಚ ದ್ವಂದ್ವಯುದ್ಧೇನ ಮಿಲಿತೌ ತಾವುಭಾವಪಿ ।
ರಾಜಾನೌ ಸಹಸಾಭೂತಾಮನ್ಯೋನ್ಯಂ ವಿರಥೀಕೃತೌ ॥ ೭೮
ತತಸ್ತಯೋರ್ಧಾವಿತಯೋಃ ಪ್ರಕೋಪಾತ್ಖಡ್ಗಹಸ್ತಯೋಃ ।
ಆಕುಲತ್ವೇನ ಚಸ್ಖಾಲ ಮಹಾಸೇನನೃಪಃ ಕ್ಷಿತೌ ॥ ೭೯

೯೦. ಇವನು ಬಿದ್ದಾಗ ವಿಕ್ರಮಶಕ್ತಿಯ ಕತ್ತಿಹಿರಿದ ಕೈಯನ್ನು ಗುಣಶರ್ಮನು ಚಕ್ರಾಯುಧದಿಂದ ಕತ್ತರಿಸಿಬಿಟ್ಟನು.

೯೧. ಮತ್ತೆ ಪರಿಘಾಯುಧದಿಂದ ಅವನ ಎದೆಗೆ ಹೊಡೆದು ಬೀಳಿಸಿದನು. ಇಷ್ಟು ಹೊತ್ತಿಗೆ ಎದ್ದು ನಿಂತ ಮಹಾಸೇನನು ಅದೆಲ್ಲವನ್ನೂ ನೋಡಿ ಸಂತೋಷಪಟ್ಟನು.

೯೨. "ವಿಪ್ರ ವೀರನೆ, ನಾನೇನು ತಾನೆ ಹೇಳಲಿ? ಇದು ಐದನೆಯ ಬಾರಿ ನೀನು ನನಗೆ ಪ್ರಾಣದಾನ ಮಾಡುತ್ತಿರುವುದು' ಎಂದು ಮತ್ತೆ ಮತ್ತೆ ಹೇಳಿದನು.

೯೩. ಗುಣಶರ್ಮನಿಂದ ಹತನಾದ ವಿಕ್ರಮಶಕ್ತಿಯ ಸೈನ್ಯವನ್ನೂ ರಾಜ್ಯವನ್ನೂ ಮಹಾಸೇನನು ಆಕ್ರಮಿಸಿಕೊಂಡನು.

೯೪. ಇನ್ನೂ ಅನೇಕ ರಾಜರನ್ನು ಗುಣಶರ್ಮನ ಸಹಾಯದಿಂದ ಗೆದ್ದುಕೊಂಡು ಉಜ್ಜಯಿನಿಗೆ ಬಂದು ಸುಖವಾಗಿ ರಾಜ್ಯವಾಳಿದನು.

೯೫. ಇತ್ತ ರಾಣಿ ಅಶೋಕವತಿಯು ಉತ್ಸುಕಳಾಗಿ, ಹಗಲುರಾತ್ರಿ ಗುಣಶರ್ಮನನ್ನು ಒತ್ತಾಯಿಸುವುದನ್ನು ನಿಲ್ಲಿಸಲಿಲ್ಲ.

೯೬. ಆದರೆ ಅವನು ಆ ಅಕಾರ್ಯವನ್ನು ಮಾಡಲು ಸುತಾರಾಂ ಒಪ್ಪಲಿಲ್ಲ. ಸಜ್ಜನರು ಸಾವನ್ನಾದರೂ ಅಪ್ಪುತ್ತಾರೆ, ಅಕಾರ್ಯವನ್ನು ಮಾಡುವುದಿಲ್ಲ !

---

ಸ್ಖಲಿತೇಽಸ್ಮಿನ್ಪ್ರಹರತಶ್ಚಕ್ರೇಣ ಭುಜಮಚ್ಛಿನತ್ ।
ರಾಜ್ಞೋ ವಿಕ್ರಮಶಕ್ತೇಃ ಸ ಗುಣಶರ್ಮಾ ಸುಖಡ್ಗಕಮ್ ॥ ೯೦
ಪುನಶ್ಚ ಹೃದಿ ಹತ್ವಾ ತಂ ಪರಿಘೇಣ ನ್ಯಪಾತಯತ್ ।
ತಚ್ಚೋತ್ಥಾಯ ಮಹಾಸೇನೋ ರಾಜಾ ದೃಷ್ಟ್ವಾ ತುತೋಷ ಸಃ ॥ ೯೧
ಕಿಂ ವಚ್ಮಿ ಪಂಚಮಂ ವಾರಮಿದಂ ಪ್ರಾಣಾ ಇಮೇ ಮಮ ।
ವಿಪ್ರವೀರ ತ್ವಯಾ ದತ್ತಾ ಇತಿ ತಂ ಚಾವದನ್ಮುಹುಃ ॥ ೯೨
ತತೋ ವಿಕ್ರಮಶಕ್ತೇಸ್ತಸ್ಯ ಸೈನ್ಯಂ ಸರಾಷ್ಟ್ರಕಮ್ ।
ಆಚಕ್ರಾಮ ಮಹಾಸೇನೋ ಹತಸ್ಯ ಗುಣಶರ್ಮಣಾ ॥ ೯೩
ಆಕ್ರಮ್ಯ ಚಾನ್ಯಾನ್ನೃಪತೀನ್ಸಹಾಯೇ ಗುಣಶರ್ಮಣಿ ।
ಆಗತ್ಯೋಜ್ಜಯಿನೀಂ ತಸ್ಥೌ ಸ ರಾಜಾ ಸುಖಿತಸ್ತದಾ ॥ ೯೪
ಸಾತ್ವಶೋಕವತೀ ರಾಜ್ಞೀ ಸೋತ್ಸುಕಾ ಗುಣಶರ್ಮಣಃ ।
ವಿರರಾಮ ನ ನಿರ್ಬಂಧಪ್ರಾರ್ಥನಾತೋ ದಿವಾನಿಶಮ್ ॥ ೯೫
ಸ ತು ನಾಂಗೀಚಕಾರೈವ ತದಕಾರ್ಯಂ ಕಥಂಚನ ।
ದೇಹಪಾತಮಪೀಚ್ಛಂತಿ ಸಂತೋ ನಾವಿನಯಂ ಪುನಃ ॥ ೯೬

೯೭. ಆಗ ಅಶೋಕವತಿಯು ಅವನ ನಿಶ್ಚಯವನ್ನು ತಿಳಿದವಳಾಗಿ ಅವನ ಮೇಲಿನ ದ್ವೇಷದಿಂದ ಒಮ್ಮೆ ಆಯಾಸವನ್ನು ನಟಿಸಿ ಅಳುವ ನಾಟಕ ಮಾಡಿದಳು.

೯೮. ಆಗ ಅಲ್ಲಿಗೆ ಬಂದ ರಾಜ ಮಹಾಸೇನನು ಅವಳನ್ನು ಕಂಡು, "ಪ್ರಿಯೆ, ಏನಿದು ? ಏಕೆ ಕೋಪಗೊಂಡಿದ್ದೀಯೆ ? ಯಾರಿಂದ ಹೀಗಾಯಿತು ಹೇಳು. ನನ್ನ ಪ್ರಾಣ, ಧನ ಎಲ್ಲವನ್ನೂ ಕೊಟ್ಟಾದರೂ ಅವನನ್ನು ಬಲಿ ಹಾಕುತ್ತೇನೆ', ಎಂದು ಹೇಳಿದಾಗ ಬಹು ಕಷ್ಟದಿಂದಲೋ ಎಂಬಂತೆ ರಾಣಿಯು ಬಾಯಿಬಿಟ್ಟಳು.

೧೦೦. "ಯಾರು ನನಗೆ ಈ ಕಷ್ಟಕೊಟ್ಟಿದ್ದಾರೋ ಅವರನ್ನು ನೀನು ಖಂಡಿತ ಹಿಡಿಯಲಾರೆ; ಅವನು ಅಂಥವನಲ್ಲ ಎನ್ನುವೆ. ಆದ್ದರಿಂದ ನಾನು ಸುಮ್ಮ ಸುಮ್ಮನೆ ಅವನ ಹೆಸರೇಕೆ ಹೇಳಲಿ' ಎಂದಳು.

೧೦೧. ರಾಜನು ಒತ್ತಾಯಿಸಿ ಕೇಳಿದಾಗ, ಸುಳ್ಳು ಸುಳ್ಳೇ ಹೇಳಿದಳು. "ಆರ್ಯಪುತ್ರ, ನೀನು ಹೇಳಲೇಬೇಕೆಂದು ನಿರ್ಬಂಧಪಡಿಸಿದರೆ ಹೇಳುತ್ತೇನೆ ಕೇಳು.

೧೦೨. ಗೌಡರಾಜನಿಂದ ಹಣಪಡೆಯಲು ಬಯಸಿ, ಗುಣಶರ್ಮನು ಅವನೊಡನೆ ನಿನಗೆ ಯುದ್ಧ ಮಾಡಿಸಿ ನಿನಗೆ ಮೋಸಮಾಡುವ ದುರುದ್ದೇಶ ಹೊಂದಿದ್ದನು.

೧೦೩. ಅವನ ಭಂಡಾರದಿಂದ ಬರಬೇಕಾದ ದ್ರವ್ಯದ ವ್ಯವಹಾರ ಮಾಡಲು ತನ್ನ ದೂತನೊಬ್ಬನನ್ನು ಅಲ್ಲಿಗೆ ಗುಟ್ಟಾಗಿ ಅಟ್ಟಿದ್ದಾನೆ ಈ ಬ್ರಾಹ್ಮಣಾಧಮ.

---

ತತೋಽಶೋಕವತೀ ಬುದ್ಧ್ವಾ ನಿಶ್ಚಯಂ ತಸ್ಯ ವೈರತಃ ।
ಏಕದಾ ವ್ಯಾಜಖೇದಂ ಸಾ ಕೃತ್ವಾ ತಸ್ಥೌ ರುದನ್ಮುಖೀ ॥ ೯೭
ಪ್ರವಿಷ್ಟೋಽಥ ಮಹಾಸೇನಸ್ತಾಮಾಲೋಕ್ಯ ತಥಾಸ್ಥಿತಾಮ್ ।
ಪಪ್ರಚ್ಛ ರಾಜಾ ಕಿಮಿದಂ ಪ್ರಿಯೇ ಕೇನಾಸಿ ಕೋಪಿತಾ ॥ ೯೮
ಬ್ರೂಹಿ ತಸ್ಯ ಕರೋಮ್ಯೇಷ ಧನೈಃ ಪ್ರಾಣೈಶ್ಚ ನಿಗ್ರಹಮ್ ।
ಇತಿ ಬ್ರುವಾಣಂ ತಂ ಭೂಪಂ ರಾಜ್ಞೀ ಕೃಚ್ಛ್ರಾದಿವಾಹ ಸಾ ॥ ೯೯
ಯೇನ ಮೇಽಪಕೃತಂ ತಸ್ಯ ನೈವ ತ್ವಂ ನಿಗ್ರಹೇ ಕ್ಷಮಃ ।
ನ ಸ ತಾದೃಕ್ತದೇತೇನ ಮಿಥ್ಯೈವೋದ್ಘಾಟಿತೇನ ಕಿಮ್ ॥ ೧೦೦
ಇತ್ಯುಕ್ತ್ವಾ ಸಾನುಬಂಧೇ ಸಾ ರಾಜ್ಞೀ ಮಿಥ್ಯೈವಮಬ್ರವೀತ್ ।
ಆರ್ಯಪುತ್ರಾತಿನಿರ್ಬಂಧೋ ಯದಿ ತೇ ವಚ್ಮಿ ತಚ್ಛೃಣು ॥ ೧೦೧
ಅರ್ಥಂ ಗೌಡೇಶ್ವರಾತ್ಪ್ರಾಪ್ತುಂ ತೇನ ಸಂಸ್ಥಾಪ್ಯ ಸಂವಿದಮ್ ।
ಗುಣಶರ್ಮಾ ತವ ದ್ರೋಹಂ ಕರ್ತುಮೈಚ್ಛಚ್ಛಲಾದತಃ ॥ ೧೦೨
ತಂ ಚ ಕೋಷನಿಬಂಧಾದಿ ಗೌಡಂ ಕಾರಯಿತುಂ ನೃಪಮ್ ।
ವಿಸಸರ್ಜ ಸ ದೂತಂ ಸ್ವಂ ಗುಪ್ತಮಾಪ್ತಂ ದ್ವಿಜಾಧಮಃ ॥ ೧೦೩

೧೦೪. ಅದನ್ನು ಆ ರಾಜನಿಗೆ ಆಪ್ತನಾದ ಅಡಿಗೆಯವನು, "ನಾನು ಈ ಕೆಲಸವನ್ನು ಸುಲಭದಲ್ಲಿ ಮಾಡಿಕೊಡುತ್ತೇನೆ, ಹಣವ್ಯಯ ಮಾಡಬೇಡಿ' ಎಂದಿದ್ದಾನೆ.

೧೦೫. ಅಲ್ಲದೆ ಗುಣಶರ್ಮನ ದೂತನನ್ನು ಅಲ್ಲಿಯೇ ಬಂಧಿಸಿ, ಅಡಿಗೆಯವನು ಗುಟ್ಟನ್ನು ಕಾಪಾಡಿಕೊಂಡು ಇಲ್ಲಿ ನಿನಗೆ ವಿಷ ಕೊಡಲು ಬಂದಿದ್ದಾನೆ.

೧೦೬. ಅಷ್ಟರಲ್ಲಿ ಬಂಧನದಿಂದ ಬಿಡಿಸಿಕೊಂಡ ದೂತನು ಗಣಶರ್ಮನ ಬಳಿಗೆ ಬಂದನು.

೧೦೭. ಅವನಿಂದ ಎಲ್ಲ ವಿಷಯ ತಿಳಿದ ಅಡಿಗೆಯವನು ಗುಣಶರ್ಮನಿಗಾಗಿ ನಮ್ಮ ಅಡಿಗೆ ಮನೆ ಸೇರಿಕೊಂಡಿದ್ದಾನೆ.

೧೦೮. ಅಡಿಗೆಯವನ ಈ ಗುಟ್ಟೆಲ್ಲ ತಿಳಿದುಕೊಂಡೇ ಆ ಧೂರ್ತ ಬ್ರಾಹ್ಮಣನು ನಿನಗೆ ಹೇಳಿ ಅವನಿಗೆ ಶಿಕ್ಷೆಯಾಗುವಂತೆ ಮಾಡಿದನು.

೧೦೯-೧೧೦. ಬುದ್ಧಿಶಾಲಿಯಾದ ಗುಣಶರ್ಮನು, ಇಂದು ಆ ಅಡಿಗೆಯವನ ಬಗ್ಗೆ ಸುದ್ದಿ ತಿಳಿಯಲು ಅವನ ತಾಯಿ, ಹೆಂಡತಿ ಮತ್ತು ತಮ್ಮಂದಿರು ಬಂದದ್ದನ್ನು ತಿಳಿದು ಅವನ ಹೆಂಡತಿ ಮತ್ತು ತಾಯಿಯನ್ನು ಕೊಲ್ಲಿಸಿದನು. ಅವನಿಂದ ತಪ್ಪಿಸಿಕೊಂಡ ತಮ್ಮನೊಬ್ಬನು ಓಡಿ ಹೋಗುತ್ತಿದ್ದವನು ಅದೃಷ್ಟವಶಾತ್ ನನ್ನ ಅರಮನೆಯೊಳಗೆ ಬಂದನು.

---

ತಂ ದೃಷ್ಟ್ವಾ ತತ್ರ ಸೂದಸ್ತಮಾಪ್ತೋ ರಾಜಾನಮಭ್ಯಧಾತ್ ।
ಅಹಂ ತೇ ಸಾಧಯಾಮ್ಯೇತತ್ಕಾರ್ಯಂ ಮಾರ್ಥಕ್ಷಯಂ ಕೃಥಾಃ ॥ ೧೦೪
ಇತ್ಯುಕ್ತ್ವಾ ಬಂಧಯಿತ್ವಾ ತಂ ಸ ದೂತಂ ಗುಣಶರ್ಮಣಃ ।
ಸೂದೋ ಮಂತ್ರಸ್ರುತಿಂ ರಕ್ಷನ್ನಿಹಾಗಾದ್ವಿಷದಾಯಕಃ ॥ ೧೦೫
ತನ್ಮಧ್ಯೇ ಚ ಪಲಾಯ್ಯೈವ ತತೋ ನಿರ್ಗತ್ಯ ಬಂಧನಾತ್ ।
ಗುಣಶರ್ಮಾಂತಿಕಂ ದೂತಸ್ತದೀಯಃ ಸೋಽಪ್ಯುಪಾಗಮತ್ ॥ ೧೦೬
ತೇನಾಧಿಗತವೃತ್ತಾಂತೇನೋಕ್ತ್ವಾ ಸರ್ವಂ ಸ ದರ್ಶಿತಃ ।
ಸೂದೋ ಮಹಾನಸೇಽಸ್ಮಾಕಂ ಪ್ರವಿಷ್ಟೋ ಗುಣಶರ್ಮಣೇ ॥ ೧೦೭
ತತೋ ಜ್ಞಾತ್ವಾ ಸ ಧೂರ್ತೇನ ಸೂಪಕೃದ್ಬ್ರಹ್ಮಬಂಧುನಾ ।
ವಿಷದಾನೋದ್ಯತಸ್ತೇನ ತುಭ್ಯಮಾವೇದ್ಯ ಘಾತಿತಃ ॥ ೧೦೮
ಅದ್ಯ ತಸ್ಯೇಹ ಸೂದಸ್ಯ ಮಾತೃಭಾರ್ಯೇ ತಥಾನುಜಾನ್ ।
ವಾರ್ತಾಮನ್ವೇಷ್ಟುಮಾಯಾತಾನ್ಗುಣಶರ್ಮಾ ಸ ಬುದ್ಧಿಮಾನ್ ॥ ೧೦೯
ಬುದ್ಧ್ವಾ ತೇನ ಹತಾ ತಸ್ಯ ಭಾರ್ಯಾ ಮಾತಾ ಚ ಸೋಽಸ್ಯ ತು ।
ಭ್ರಾತಾ ಪಲಾಯಿತೋ ದೈವಾತ್ಪ್ರವಿಶನ್ಮಮ ಮಂದಿರಮ್ ॥ ೧೧೦

೧೧೧. ಅವನು ನನಗೆ ಶರಣಾಗಿ, ತನ್ನ ವಿಷಯವನ್ನೆಲ್ಲ ನನಗೆ ವಿವರವಾಗಿ ಹೇಳುತ್ತಿರುವಾಗ ಗುಣಶರ್ಮನೂ ಕೂಡ ನನ್ನ ಅರಮನೆಯೊಳಗೇ ಬಂದನು.

೧೧೨. ಅವನನ್ನು ನೋಡಿದ್ದೇ ತಡ ಅಡಿಗೆಯವನ ತಮ್ಮನು ನನ್ನ ಕಡೆಯಿಂದ ಮತ್ತೆ ಓಡಿಹೋದ; ಎಲ್ಲಿಗೆ ಹೋದನೋ ಅದು ಮಾತ್ರ ತಿಳಿಯದು.

೧೧೩. ಗುಣಶರ್ಮನೂ ಕೂಡ ತನ್ನ ಕಡೆಯವರು ಮೊದಲೇ ತಿಳಿಸಿದ್ದ ಅವನನ್ನು ನೋಡಿ, ಸ್ವಲ್ಪ ವಿಚಲಿತನಾದಂತೆ ಕಂಡು ಏನೋ ಯೋಚನೆಗೆ ಬಿದ್ದಂತೆ ಕಂಡನು.

೧೧೪. ಆಗ, ಬೇರಾರೂ ಇಲ್ಲದೆ ಆ ಜಾಗದಲ್ಲಿ ನಾನು ಗುಣಶರ್ಮನನ್ನು, "ಏಕೆ, ಏನೋ ಒಂದು ರೀತಿ ಇರುವೆಯಲ್ಲ' ? ಎಂದು ಅವನ ಮನದಿಂಗಿತವನ್ನು ಅರಿಯಲು ಕೇಳಿದೆ.

೧೧೫. ತನ್ನ ಗುಟ್ಟು ರಟ್ಟಾಗುವ ಭಯದಿಂದ, ನನ್ನನ್ನು ಪಡೆಯಲು ಬಯಸಿ, "ದೇವಿ, ನನ್ನ ಮೇಲಿನ ಪ್ರೇಮದಿಂದ ಬೆಂದುಹೋಗುತ್ತಿದ್ದೇನೆ. ನನ್ನನ್ನು ಸ್ವೀಕರಿಸು;

೧೧೬ ಇಲ್ಲದಿದ್ದರೆ ನಾನು ಬದುಕಲಾರೆ, ನನಗೆ ಪ್ರಾಣದಕ್ಷಿಣೆಯನ್ನು ನೀಡು' ಎನ್ನುತ್ತಾ ಯಾರೂ ಇಲ್ಲದ ನನ್ನ ಒಳಮನೆಯಲ್ಲಿ ನನ್ನ ಕಾಲಿಗೆ ಬಿದ್ದನು.

೧೧೭ ಆಗ ನಾನು ಕಾಲನ್ನು ದೂರಸರಿಸಿ ಗಾಬರಿಯಿಂದ ಮೇಲೇಳುವಷ್ಟರಲ್ಲಿ ಅವನು ಅಬಲೆಯಾದ ನನ್ನನ್ನು ಬಲವಾಗಿ ಆಲಿಂಗಿಸಿಕೊಂಡನು.

---

ತೇನ ತದ್ವರ್ಣ್ಯತೇ ಯಾವತ್ಸರ್ವಂ ಮೇ ಶರಣಾರ್ಥಿನಾ ।
ಗುಣಶರ್ಮಾ ಸ ಮದ್ವಾಸಗೃಹಂ ತಾವತ್ಪ್ರವಿಷ್ಟವಾನ್ ॥ ೧೧೧
ತಂ ದೃಷ್ಟ್ವಾ ನಾಮ ಚ ಶ್ರುತ್ವಾ ಭ್ರಾತಾ ಸೂದಸ್ಯ ತಸ್ಯ ಸಃ ।
ಭಯಾನ್ನಿರ್ಗತ್ಯ ಮತ್ಪಾರ್ಶ್ವಾನ್ನ ಜಾನೇ ಕ್ವ ಪಲಾಯಿತಃ ॥ ೧೧೨
ಗುಣಶರ್ಮಾಪಿ ತಂ ದೃಷ್ಟ್ವಾ ಸ್ವಭೃತ್ಯೈಃ ಪೂರ್ವದರ್ಶಿತಮ್ ।
ಅಭೂತ್ಸದ್ಯಃ ಸವೈಲಕ್ಷೋ ವಿಮೃಶನ್ನಿವ ಕಿಂಚನ ॥ ೧೧೩
ಗುಣಶರ್ಮನ್ ಕಿಮದ್ಯೈವಮನ್ಯಾದೃಶ ಇವೇಕ್ಷ್ಯಸೇ ।
ಇತ್ಯಪೃಚ್ಛಮಹಂ ತಂ ಚ ಜಿಜ್ಞಾಸುರ್ವಿಜನೇ ತತಃ ॥ ೧೧೪
ಸೋಽಥ ಸ್ವೀಕರ್ತುಕಾಮೋ ಮಾಮಾಹ ಸ್ಮೋದ್ಭೇದಶಂಕಿತಃ ।
ದೇವಿ ತ್ವದನುರಾಗಾಗ್ನಿದಗ್ಧೋಽಹಂ ತದ್ಭಜಸ್ವ ಮಾಮ್ ॥ ೧೧೫
ಅನ್ಯಥಾಹಂ ನ ಜೀವೇಯಂ ದೇಹಿ ಮೇ ಪ್ರಾಣದಕ್ಷಿಣಾಮ್ ।
ಇತ್ಯುಕ್ತ್ವಾ ವಾಸಕೇ ಶೂನ್ಯೇ ಪಾದಯೋರಪತತ್ಸ ಮೇ ॥ ೧೧೬
ತತೋಽಹಂ ಪಾದಮಾಕ್ಷಿಪ್ಯ ಸಂಭ್ರಮಾದ್ಯಾವದುತ್ಥಿತಾ ।
ತಾವದುತ್ಥಾಯ ತೇನಾಹಮಬಲಾಲಿಂಗಿತಾ ಬಲಾತ್ ॥ ೧೧೭

೧೧೮. ಆ ಕ್ಷಣದಲ್ಲಿ ನನ್ನ ಚೇಟಿ (ಪರಿಚಾರಿಕೆ) ಪಲ್ಲವಿಕೆ ನನ್ನ ಬಳಿಗೆ ಬಂದಳು. ಅವಳನ್ನು ನೋಡಿದ್ದೇ ತಡ ಭಯಭೀತನಾಗಿ ಗುಣಶರ್ಮನು ಅಲ್ಲಿಂದ ಓಡಿಹೋದನು.

೧೧೯. ಇಂದೇನಾದರೂ ಪಲ್ಲವಿಕೆ ಅಲ್ಲಿಗೆ ಬರದೆ ಇದ್ದಿದ್ದರೆ, ನಿಶ್ಚಯವಾಗಿಯೂ ಆ ಪಾಪಿ ನನ್ನ ಶೀಲಭಂಗ ಮಾಡಿರುತ್ತಿದ್ದ, ಇದು ನನ್ನ ಕಥೆ' ಎಂದು ಹೇಳಿ ರಾಣಿಯು ಅತ್ತು ಗೋಳಾಡಿದಳು. ಮೊದಲು ಹುಟ್ಟಿದ್ದು ಸುಳ್ಳು. ಅನಂತರ ದುಷ್ಟ ಹೆಂಗಸರು ಹುಟ್ಟಿದರಷ್ಟೆ

೧೨೧. ರಾಜನು ಅದನ್ನು ಕೇಳಿದೊಡನೆಯೇ ಕೋಪದಿಂದ ಬೆಂಕಿಯಂತೆ ಜ್ವಲಿಸಿದನು. ಹೆಂಗಸರ ಮಾತನ್ನು ನಂಬುವುದರಿಂದ ದೊಡ್ಡವರ ವಿವೇಚನಾ ಶಕ್ತಿಯೇ ಹಾಳಾಗುತ್ತದೆ.

೧೨೨–೧೨೪. ತನ್ನ ಪ್ರಿಯ ಪತ್ನಿಯನ್ನು ಕುರಿತು, "ಸುಂದರಿ, ಸಮಾಧಾನಮಾಡಿಕೊ. ಆ ದ್ರೋಹಿಯನ್ನು ಹೆಡೆಮುರಿಕಟ್ಟಿ ಹಿಡಿದು ವಧೆ ಮಾಡಿಸುತ್ತೇನೆ. ಆದರೆ ಇದನ್ನು ಯುಕ್ತಿಯಿಂದ ಮಾಡಬೇಕು. ಇಲ್ಲದಿದ್ದರೆ ನಮಗೆ ಅಪಕೀರ್ತಿ ತಪ್ಪಿದ್ದಲ್ಲ. ಎಷ್ಟೇ ಆದರೂ ಅವನು ನನ್ನನ್ನು ಐದು ಬಾರಿ ಮೃತ್ಯುವಿನಿಂದ ಪಾರುಮಾಡಿ ಜೀವದಾನ ಮಾಡಿರುವುದು ಎಲ್ಲರಿಗೂ ತಿಳಿದಿದೆ; ನಿನ್ನನ್ನು ಅವನು ಬಲಾತ್ಕಾರ ಮಾಡಲು ಮುಂದಾದ್ದನ್ನು ಎಲ್ಲರ ಮುಂದೆ ಹೇಳುವುದು ಸರಿಯಲ್ಲ' ಎಂದು ರಾಜನು ಹೇಳಿದಾಗ, ರಾಣಿಯು ಹೀಗೆ ಉತ್ತರಿಸಿದಳು.

---

ತತ್ಕ್ಷಣಂ ಚ ಪ್ರವಿಷ್ಟಾ ಮೇ ಚೇಟೀ ಪಲ್ಲವಿಕಾಂತಿಕಮ್ ।
ತಾಂ ದೃಷ್ಟ್ವೈವ ಸ ನಿಷ್ಕ್ರಮ್ಯ ಗುಣಶರ್ಮಾ ಭಯಾದ್ಗತಃ ॥ ೧೧೮
ಯದಿ ಪಲ್ಲವಿಕಾ ನಾತ್ರ ಪ್ರಾವೇಕ್ಷ್ಯತ್ತತ್ಸ ನಿಶ್ಚಿತಮ್ ।
ಅಧ್ವಂಸಯಿಷ್ಯತ್ಪಾಪೋ ಮಾಮಿತ್ಯೇವಂ ವೃತ್ತಮದ್ಯ ಮೇ ॥ ೧೧೯
ಇತ್ಯುಕ್ತ್ವಾ ಸಾ ಮೃಷಾ ರಾಜ್ಞೀ ವಿರರಾಮ ರುರೋದ ಚ ।
ಆದಾವಸತ್ಯವಚನಂ ಪಶ್ಚಾಜ್ಜಾತಾ ಹಿ ಕುಸ್ತ್ರಿಯಃ ॥ ೧೨೦
ರಾಜಾ ಚ ಸ ತದಾಕರ್ಣ್ಯ ಜಜ್ವಾಲ ಝಟಿತಿ ಕ್ರುಧಾ ।
ಸ್ತ್ರೀವಚಃಪ್ರತ್ಯಯೋ ಹಂತಿ ವಿಚಾರಂ ಮಹತಾಮಪಿ ॥ ೧೨೧
ಅಬ್ರವೀಚ್ಚ ಸ ಕಾಂತಾಂ ಸ್ವಾಂ ಸಮಾಶ್ವಸಿಹಿ ಸುಂದರಿ ।
ತಸ್ಯಾವಶ್ಯಂ ಕರಿಷ್ಯಾಮಿ ದ್ರೋಹಿಣೋ ವಧನಿಗ್ರಹಮ್ ॥ ೧೨೨
ಕಿಂ ತು ಯುಕ್ತ್ಯಾ ಸ ಹಂತವ್ಯೋ ಭವೇದಪಯಶೋಽನ್ಯಥಾ ।
ಖ್ಯಾತಂ ಹಿ ಯತ್ಪಂಚಕೃತ್ವೋ ದತ್ತಂ ಮೇ ತೇನ ಜೀವಿತಮ್ ॥ ೧೨೩
ತ್ವದಾಸ್ಕಂದನದೋಷಶ್ಚ ಲೋಕೇ ವಕ್ತುಂ ನ ಯುಜ್ಯತೇ ।
ಇತ್ಯುಕ್ತಾ ತೇನ ರಾಜ್ಞಾ ಸಾ ರಾಜ್ಞೀ ತಂ ಪ್ರತ್ಯಭಾಷತ ॥ ೧೨೪

೧೨೫. "ಇದು ಆವಾಚ್ಯವಾದರೆ, ಅವನು ಗೌಡರಾಜನೊಡನೆ ಸೇರಿಕೊಂಡು ಪ್ರಭುದ್ರೋಹ ಮಾಡಲುದ್ಯುಕ್ತನಾದನಲ್ಲ, ಅದೂ ಅವಾಚ್ಯವೆ ?'

೧೨೬. ಆಕೆಯ ಮಾತನ್ನು ಕೇಳಿ "ನೀನು ಹೇಳಿದ್ದು ಸರಿ', ಎಂದು ಒಪ್ಪಿಕೊಂಡ ರಾಜಾ ಮಹಾಸೇನನು ತನ್ನ ಆಸ್ಥಾನದೆಡೆಗೆ ಹೆಜ್ಜೆ ಹಾಕಿದನು.

೧೨೭. ಅಲ್ಲಿ ಆತನನ್ನು ಕಾಣಲು ರಾಜರು, ರಾಜಪುತ್ರರು, ಸಾಮಂತರು ಮತ್ತು ಮಂತ್ರಿಗಳೆಲ್ಲ ಬಂದರು.

೧೨೮. ಅಷ್ಟರಲ್ಲಿ ಗುಣಶರ್ಮನೂ ಕೂಡ ರಾಜಾಸ್ಥಾನಕ್ಕೆ ಬರಲು ಮನೆಯಿಂದ ಹೊರಟಾಗ ದಾರಿಯಲ್ಲಿ ಅವನಿಗೆ ಅನೇಕ ವಿಧವಾದ ಅಪಶಕುನಗಳಾದವು.

೧೨೯. ಬಲದಿಂದ ಎಡಗಡೆ ಕಾಗೆ ಬಂದಿತು; ಎಡದಿಂದ ಬಲಕ್ಕೆ ನಾಯಿ ಹೋಯಿತು; ಬಲಭಾಗದಲ್ಲಿದ್ದ ಹಾವು ಎಡಗಡೆಗೆ ಹರಿದಾಡಿತು; ಹೆಗಲನ್ನು ಸೇರಿದಂತೆ ಎಡತೋಳು ಅದುರಿತು.

೧೩೦. "ಇವೆಲ್ಲವೂ ಅಶುಭವನ್ನು ಸೂಚಿಸುತ್ತಿವೆ ಎಂಬುದು ದಿಟ,  ಅದೇನಿದ್ದರೂ ಅವೆಲ್ಲ ನನಗೇ ಇರಲಿ, ನನ್ನ ರಾಜನಿಗೆ ಏನೂ ಕೆಟ್ಟದಾಗದಿರಲಿ'

---

ಅವಾಚ್ಯ ಏಷ ದೋಷಶ್ಚೇತ್ತದಾಽವಾಚ್ಯೋಽಸ್ಯ ಸೋಽಪಿ ಕಿಮ್ ।
ಯೋ ಗೌಡೇಶ್ವರಸಂಖ್ಯೇನ ಪ್ರಭುದ್ರೋಹೇ ಸಮುದ್ಯಮಃ ॥ ೧೨೫
ಏವಮುಕ್ತೇ ತಯಾ ಯುಕ್ತಮುಕ್ತಮಿತ್ಯಭಿದಾಯ ಸಃ ।
ಯಯೌ ರಾಜಾ ಮಹಾಸೇನೋ ನಿಜಮಾಸ್ಥಾನಸಂಸದಮ್ ॥ ೧೨೬
ತತ್ರ ಸರ್ವೇ ಸಮಾಜಗ್ಮುರ್ದರ್ಶನಾಯಾಸ್ಯ ಭೂಪತೇ ಃ ।
ರಾಜಾನೋ ರಾಜಪುತ್ರಾಶ್ಚ ಸಾಮಂತಾ ಮಂತ್ರಿಣಸ್ತಥಾ ॥ ೧೨೭
ತಾವಚ್ಚ ಗುಣಶರ್ಮಾಪಿ ಗೃಹಾದ್ರಾಜಕುಲಂ ಪ್ರತಿ ।
ಆಗಾನ್ಮಾರ್ಗೇ ಚ ಸುಬಹೂನ್ಯನಿಮಿತ್ತಾನ್ಯವೈಕ್ಷತ ॥ ೧೨೮
ವಾಮಸ್ತಸ್ಯಾಭವತ್ಕಾಕಃ ಶ್ವಾ ವಾಮಾದ್ದಕ್ಷಿಣಂ ಯಯೌ ।
ದಕ್ಷಿಣೋಽಹಿರಭೂದ್ವಾಮಃ ಸಸ್ಕಂಧಶ್ಚಾಸ್ಫುರದ್ಭುಜಃ ॥ ೧೨೯
ಅಶುಭಂ ಸೂಚಯಂತ್ಯೇತಾನ್ಯನಿಮಿತ್ತಾನಿ ಮೇ ಧ್ರುವಮ್ ।
ತನ್ಮಮೈವಾಸ್ತು ಯತ್ಕಿಂಚಿನ್ಮಾ ಭೂದ್ರಾಜ್ಞಸ್ತು ಮತ್ಪ್ರಭೋಃ ॥ ೧೩೦

೧೩೧–೧೩೨. ಹೀಗೆ ಒಳಗೇ ಚಿಂತಿಸುತ್ತಾ ಅವನು ರಾಜನ ಆಸ್ಥಾನಕ್ಕೆ ಬಂದನು. ಅರಮನೆಯಲ್ಲಿ ಯಾವ ವಿರೋಧವೂ ಬಾರದಿರಲಿ ಎಂದುಕೊಂಡು ಭಕ್ತಿಯಿಂದ ನಮಸ್ಕರಿಸಿ. ಕುಳಿತುಕೊಂಡ ಅವನನ್ನು ರಾಜನು ಮೊದಲಿನಂತೆ ಗೌರವಿಸದೆ, ಉರಿಯುತ್ತಿದ್ದ ಕೆಂಪಾದ ಕಡೆಗಣ್ಣಿನ ನೋಟವನ್ನು ಬೀರಿದನು.

೧೩೩ ಏನಿದು ಎಂದು ಗುಣಶರ್ಮನು ಅನುಮಾನಿಸುತ್ತಿರುವಂತೆಯೇ, ರಾಜನು ಸ್ವತಃ ಆಸನದಿಂದ ಎದ್ದು ಬಂದು ಅವನ ಪಕ್ಕದಲ್ಲೇ ಕುಳಿತನು.

೧೩೪. ಎಲ್ಲರೂ ಆಶ್ಚರ್ಯಚಕಿತರಾಗಿ ನೋಡುತ್ತಿರಲಾಗಿ, 'ಗುಣಶರ್ಮನ ಬಗ್ಗೆ ನಾನು ಹೇಳುವ ನ್ಯಾಯವನ್ನು ಕೇಳಿ' ಎಂದು ರಾಜನು ಹೇಳಲು, ಗುಣಶರ್ಮನು ಅವನಲ್ಲಿ ವಿಜ್ಞಾಪಿಸಿಕೊಂಡನು.

೧೩೫ "ನಾನು ಸೇವಕ, ನೀನು ಪ್ರಭು; ನಮ್ಮಿಬ್ಬರ ನಡುವಿನ ವ್ಯವಹಾರ ಅದು ಹೇಗೆ ತಾನೇ ಸಮವಾದೀತು; ಮೊದಲು ತಾವು ಸಿಂಹಾಸನದಲ್ಲಿ ಕುಳಿತು ನಂತರ ನಿಮ್ಮಿಷ್ಟದಂತೆ ಆದೇಶಿಸುವುದಾಗಲಿ'

೧೩೬ ಧೈರ್ಯಶಾಲಿಯಾದ ಅವನು ಹಾಗೆ ಹೇಳಲಾಗಿ, ಮಂತ್ರಿಗಳು ತಿಳಿಹೇಳಿದ ನಂತರ ರಾಜನು ತನ್ನ ಆಸನದಲ್ಲಿ ಕುಳಿತು ಸಭಾಸದರನ್ನೆಲ್ಲ ಉದ್ದೇಶಿಸಿ ಹೀಗೆಂದನು.

೧೩೭ ವಂಶಪಾರಂಪರ್ಯವಾಗಿ ಬಂದ ಮಂತ್ರಿಗಳನ್ನೆಲ್ಲ ಬಿಟ್ಟು ಈತನನ್ನು ಮಂತ್ರಿಯಾಗಿಸಿ ನನ್ನ ಸಮಸಮವಾಗಿ ಕಾಣುತ್ತಿರುವುದು ನಿಮಗೆಲ್ಲ ತಿಳಿದಿದೆ.

---

ಇತ್ಯಂತಶ್ಚಿಂತಯನ್ಸೋಽಥ ನೃಪಸ್ಯಾಸ್ಥಾನಮಾವಿಶತ್ ।
ಮಾ ಸ್ಯಾದ್ರಾಜಕುಲೇ ಕಿಂಚಿದ್ವಿರುದ್ಧಮಿತಿ ಭಕ್ತಿತಃ ॥ ೧೩೧
ಪ್ರಣಮ್ಯಾತ್ರೋಪವಿಷ್ಟಂ ಚ ನ ತಂ ರಾಜಾ ಸ ಪೂರ್ವವತ್ ।
ಅಭ್ಯನಂದದಪಶ್ಯತ್ತು ತಿರ್ಯಕ್ಕ್ರೋಧೇದ್ಧಯಾ ದೃಶಾ ॥ ೧೩೨
ಕಿಮೇತದಿತಿ ತಸ್ಮಿಂಶ್ಚ ಗುಣಶರ್ಮಣಿ ಶಂಕಿತೇ ।
ಸ ಉತ್ಥಾಯಾಸನಾದ್ರಾಜಾ ತಸ್ಯ ಸ್ಕಂಧ ಉಪಾವಿಶತ್ ॥ ೧೩೩
ವಿಸ್ಮಿತಾಂಶ್ಚಾಬ್ರವೀತ್ಸಭ್ಯಾನ್ನ್ಯಾಯಂ ಮೇ ಗುಣಶರ್ಮಣಃ ।
ಶೃಣುತೇತಿ ತತಸ್ತಂ ಸ ಗುಣಶರ್ಮಾ ವ್ಯಜಿಜ್ಞಪತ್ ॥ ೧೩೪
ಭೃತ್ಯೋಽಹಂ ತ್ವಂ ಪ್ರಭುಸ್ತನ್ನೌ ವ್ಯವಹಾರಃ ಕಥಂ ಸಮಃ ।
ಅಧಿತಿಷ್ಠಾಸನಂ ಪಶ್ಚಾದ್ಯಥೇಚ್ಛಸಿ ತಥಾದಿಶ ॥ ೧೩೫
ಇತಿ ಧೀರೇಣ ತೇನೋಕ್ತೋ ಮಂತ್ರಿಭಿಶ್ಚ ಪ್ರಬೋಧಿತಃ ।
ಅಧ್ಯಾಸ್ತೇ ಸ್ವಾಸನಂ ರಾಜಾ ಪುನಃ ಸಭ್ಯಾನುವಾಚ ಚ ॥ ೧೩೬
ವಿದಿತಂ ತಾವದೇತದ್ವೋ ಮಂತ್ರಿಣೋ ಯತ್ಕ್ರಮಾಗತಾನ್ ।
ವಿಹಾಯ ಗುಣಶರ್ಮಾಯಂ ತಾವದಾತ್ಮಸಮಃ ಕೃತಃ ॥ ೧೩೭

೧೩೮–೧೩೯. ಇವನು ದೂತನನ್ನು ಅಟ್ಟಿ ಗೌಡರಾಜನೊಂದಿಗೆ ಒಂದಾಗಿ ನನಗೆ ದ್ರೋಹವೆಸಗಲು ಹೇಗೆ ಯೋಚಿಸಿದ್ದಾನೆ ಎಂಬುದನ್ನು ಹೇಳುತ್ತೇನೆ ಕೇಳಿ, ಎಂದು ರಾಜನು ಅವರಿಗೆಲ್ಲ ಅಶೋಕವತಿ ಹೇಳಿದ ಸುಳ್ಳಿನ ಕಂತೆಯನ್ನೆಲ್ಲಾ ವರ್ಣಿಸತೊಡಗಿದನು.

೧೪೦. ನಂತರ ಎಲ್ಲರನ್ನೂ ಹೊರಗೆ ಕಳಿಸಿ ಆಪ್ತರಾದ ಕೆಲವರಿಗೆ, ತನ್ನ ಘನತೆಗೆ ಕುಂದು ತರುವ ಆತ್ಮ ಘಾತುಕವಾದ ರಾಣಿಯ ಮೇಲಿನ ಬಲಾತ್ಕಾರದ ಸುಳ್ಳನ್ನೂ ಕೂಡ ರಾಜನು ವಿವರಿಸಿದನು.

೧೪೧. ಆಗ ಗುಣಶರ್ಮನು, "ದೇವ, ಇದೆಂಥ ಸುಳ್ಳಿನ ಸರಮಾಲೆ! ಯಾರು ನಿಮಗಿದನ್ನು ಹೇಳಿದರು ? ಇಂತಹ ಆಕಾಶ ಚಿತ್ರವನ್ನು ಯಾರು ಬರೆದರು ?’ ಎಂದನು.

೧೪೨. ರಾಜನು ಅದನ್ನು ಕೇಳಿ, "ಪಾಪಿ, ಇದು ನಿಜವಲ್ಲದಿದ್ದರೆ, (ಹಿಂದೆ ನಾನು ಊಟ ಮಾಡುವಾಗ) ಪಾತ್ರೆಯಲ್ಲಿದ್ದ ವ್ಯಂಜನಕ್ಕೆ ವಿಷ ಹಾಕಿದ್ದು ನಿನಗೆ ಹೇಗೆ ತಿಳಿಯಿತು ?’ ಎಂದನು.

೧೪೩. "ಬುದ್ಧಿಯಿದ್ದರೆ ಎಲ್ಲ ತಿಳಿಯುತ್ತದೆ’ ಎಂದು ಗುಣ ಶರ್ಮನು ಹೇಳಿದಾಗ "ಅದೆಲ್ಲ ಸಾಧ್ಯವಿಲ್ಲ’ ಎಂದು ಅವನ ಮೇಲೆ ದ್ವೇಷವಿದ್ದ ಎಲ್ಲ ಮಂತ್ರಿಗಳೂ ಒಟ್ಟಿಗೆ ಕೂಗಿದರು.

---

ಶ್ರೂಯತಾಂ ಮಮ ಚೈತೇನ ಕೀದೃಗ್ದೂತಗತಾಗತೈಃ ।
ಗೌಡೇಶ್ವರೇಣ ಕೃತ್ವೈಕ್ಯಂ ದ್ರೋಹಃ ಕರ್ತುಮಚಿಂತ್ಯತ ॥ ೧೩೮
ಇತ್ಯುಕ್ತ್ವಾ ವರ್ಣಯಾಮಾಸ ತತ್ತೇಭ್ಯಃ ಸ ಮಹೀಪತಿಃ ।
ಯದಶೋಕವತೀ ತಸ್ಮೈ ಜಗಾದ ರಚಿತಂ ಮೃಷಾ ॥ ೧೩೯
ಯೋಽಪ್ಯಾತ್ಮಧ್ವಂಸನಾಕ್ಷೇಪಸ್ತಯಾ ತಸ್ಯ ಮೃಷೋದಿತಃ ।
ನಿಷ್ಕಾಸ್ಯ ಲೋಕಾನಾಪ್ತೇಭ್ಯಃ ಸೋಽಪ್ಯುಕ್ತಸ್ತೇನ ಭೂಭುಜಾ ॥ ೧೪೦
ತತಃ ಸ ಗುಣಶರ್ಮಾ ತಮುವಾಚಾಸತ್ಯಮೀದೃಶಮ್ ।
ದೇವ ಕೇನಾಸಿ ವಿಜ್ಞಪ್ತಃ ಖಚಿತ್ರಂ ಕೇನ ನಿರ್ಮಿತಮ್ ॥ ೧೪೧
ತಚ್ಛ್ರುತ್ವೈವ ನೃಪೋಽವಾದೀತ್ಪಾಪ ಸತ್ಯಂ ನ ಚೇದಿದಮ್ ।
ಚರುಭಾಂಡಾಂತರಸ್ಥಂ ತತ್ಕಥಂ ಜ್ಞಾತಂ ವಿಷಂ ತ್ವಯಾ ॥ ೧೪೨
ಪ್ರಜ್ಞಯಾ ಜ್ಞಾಯತೇ ಸರ್ವಮಿತ್ಯುಕ್ತೇ ಗುಣಶರ್ಮಣಾ ।
ಅಶಕ್ಯಮೇತದಿತ್ಯೂಚುಸ್ತದ್ವೇಷೇಣಾನ್ಯಮಂತ್ರಿಣಃ ॥ ೧೪೩

೧೫೪. 'ದೇವ, ವಿಚಾರಣೆಯನ್ನೇ ಮಾಡದೆ ನೀನು ಹೀಗೆ ಹೇಳುವುದು ಸರಿ ಕಾಣುವುದಿಲ್ಲ; ವಿಚಾರಹೀನನಾದ ಪ್ರಭುವನ್ನು ರಾಜನೀತಿ ವಿದರು ಮೆಚ್ಚಲಾರರು', ಎಂದು ಗುಣಶರ್ಮನು ಹೇಳುತ್ತಿರುವಂತೆಯೇ, ರಾಜನು ಓಡಿಬಂದು, 'ಭಂಡ' ಎಂದು ಬೈಯುತ್ತಾ ಅವನಿಗೆ ಚೂರಿ ಹಾಕಿದನು.

೧೫೬,೧೫೭. ರಾಜನ ಆ ಏಟನ್ನು ಕರಣಪ್ರಯೋಗದಿಂದ ಹೇಗೊ ತಪ್ಪಿಸಿಕೊಂಡಾಗ ಅವನ ಅನುಯಾಯಿಗಳಾದ ಉಳಿದವರೆಲ್ಲ ಅವನನ್ನು ಹೊಡೆಯಲು ಮುನ್ನುಗ್ಗಿದರು. ತನ್ನ ಯುದ್ಧಕರಣಗಳಿಂದ ಅವರನ್ನೆಲ್ಲಾ ವಂಚಿಸಿದ್ದೇ ಅಲ್ಲದೆ ಗುಣಶರ್ಮನು ಏಕಕಾಲದಲ್ಲಿ ಅವರೆಲ್ಲರ ಕತ್ತಿಗಳನ್ನೂ ಹಾರಿಸಿಬಿಟ್ಟನು.

೧೫೮. ಬಳಿಕ ಪರಸ್ಪರ ಅವರ ಕೂದಲುಗಳಿಂದಲೇ ಕಟ್ಟಿಹಾಕಿ, ಒಬ್ಬರನ್ನೊಬ್ಬರು ಸುತ್ತುವರಿಯುವಂತೆ ಮಾಡಿ, ಕರಣೋಪಾಯದ ಸೌಲಭ್ಯದಿಂದ ಅವರಿಗೆ ವಿಚಿತ್ರವಾದ ಶಿಕ್ಷೆಯನ್ನು ವಿಧಿಸಿದನು.

೧೫೯. ನಂತರ ವೇಗವಾಗಿ ರಾಜಸಭೆಯಿಂದ ಹೊರಬಿದ್ದು, ತನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದ ನೂರು ಯೋಧರನ್ನು ಕೊಂದುಬಿಸುಟನು.

೧೬೦. ಬಳಿಕ ತನ್ನ ಬಟ್ಟೆಯ ತುದಿಯಲ್ಲಿ ಯಾವಾಗಲೂ ಇರುತ್ತಿದ್ದ ಅದೃಶ್ಯಕಾರಕವಾದ ಕಾಡಿಗೆ (ಅಂಜನ) ಯನ್ನು ಕಣ್ಣಿಗೆ ಹಾಕಿಕೊಂಡು ಆ ಜಾಗದಿಂದ ಒಂದೇ ಕ್ಷಣದಲ್ಲಿ ಅದೃಶ್ಯವಾಗಿಬಿಟ್ಟನು.

---

ದೇವ ತತ್ತ್ವಮನನ್ವಿಷ್ಯ ವಕ್ತುಮೇವಂ ನ ತೇ ಕ್ಷಮಮ್ ।
ಪ್ರಭುಶ್ಚ ನಿರ್ವಿಚಾರಶ್ಚ ನೀತಿಜ್ಞೈರ್ನ ಪ್ರಶಸ್ಯತೇ ॥ ೧೫೪
ಇತ್ಯಸ್ಯ ವದತೋ ಭೂಯಃ ಸ ರಾಜಾ ಗುಣಶರ್ಮಣಃ ।
ಧಾವಿತ್ವಾ ಛುರಿಕಾಘಾತಂ ದದೌ ಧೃಷ್ಟ ಇತಿ ಬ್ರುವನ್ ॥ ೧೫೫
ತಸ್ಮಿನ್ಪ್ರಹಾರೇ ಕರಣಪ್ರಯೋಗಾತ್ತೇನ ವಂಚಿತೇ ।
ಅನ್ಯೇ ತು ಪ್ರಹರಂತಿ ಸ್ಮ ವೀರೇ ತಸ್ಮಿನ್ನೃಪಾನುಗಾಃ ॥ ೧೫೬
ಸ ಚಾಪಿ ಯುದ್ಧಕರಣೈರ್ವಂಚಯಿತ್ವಾ ಕೃಪಾಣಿಕಾಃ ।
ಗುಣಶರ್ಮಾ ಸಮಂ ತೇಷಾಂ ಸರ್ವೇಷಾಮಪ್ಯಪಾಹರತ್ ॥ ೧೫೭
ಬಬಂಧ ಚೈತಾನನ್ಯೋನ್ಯಕೇಶಪಾಶೇನ ವೇಷ್ಟಿತಾನ್ ।
ಕೃತ್ವಾ ಕರಣಯುಕ್ತ್ಯೈವ ಚಿತ್ರಶಿಕ್ಷಿತಲಾಘವಃ ॥ ೧೫೮
ನಿರ್ಯಯೌ ಚ ತತಸ್ತಸ್ಯಾಃ ಪ್ರಸಹ್ಯ ನೃಪಸಂಸದಃ ।
ಜಘಾನ ಶತಮಾತ್ರಂ ಚ ಯೋಧಾನಾಮನುಧಾವತಾಮ್ ॥ ೧೫೯
ತತೋ ದತ್ತ್ವಾಂಚಲಸ್ಥಂ ತದಂತರ್ಧಾನಾಂಜನಂ ದೃಶೋಃ ।
ಅದೃಶ್ಯಃ ಪ್ರಯಯೌ ತಸ್ಮಾದ್ದೇಶಾತ್ತತ್ಕ್ಷಣಮೇವ ಸಃ ॥ ೧೬೦

೧೫೧–೧೫೩. ದಕ್ಷಿಣಾಪಥದೆಡೆಗೆ ಹೊರಟ ಅವನು ದಾರಿಯಲ್ಲಿ ಹೀಗೆಂದುಕೊಂಡನು. "ಅಂತೂ ಆ ಅಶೋಕವತಿಯೇ ಈ ಮೂರ್ಖನಿಗೆ ಇದನ್ನೆಲ್ಲ ಚುಚ್ಚಿಕೊಟ್ಟಿರಬೇಕು; ತಮ್ಮ ಪ್ರಣಯವನ್ನು ತಿರಸ್ಕರಿಸಿದರೆ ಹೆಂಗಸರು ವಿಷಕ್ಕಿಂತಲೂ ಕಟುವಾಗುತ್ತಾರಲ್ಲ ! ಛೇ, ಎಂದೂ ಸತ್ಪುರುಷರು ಸತ್ಯದರ್ಶಿಗಳಲ್ಲದ ರಾಜರನ್ನು ಸೇವಿಸಬಾರದು', ಹೀಗೆಯೇ ಯೋಚಿಸುತ್ತ ಗುಣಶರ್ಮನು ಒಂದು ಹಳ್ಳಿಗೆ ಬಂದನು. ಅಲ್ಲಿ ಒಂದು ಆಲದಮರದ ಕೆಳಗೆ ಒಬ್ಬ ಬ್ರಾಹ್ಮಣಶ್ರೇಷ್ಠನನ್ನು ನೋಡಿದನು.

೧೫೪. ಆ ಬ್ರಾಹ್ಮಣನು ಶಿಷ್ಯರಿಗೆ ಪಾಠ ಹೇಳುತ್ತಿದ್ದನು. ಆತನ ಬಳಿ ಸಾರಿ ಅಭಿವಾದನ ಮಾಡಿದಾಗ ಅವನು ಆತಿಥ್ಯವನ್ನು ಮಾಡಿ ಸತ್ಕರಿಸಿ ಕೇಳಿದನು.

೧೫೫. "ಎಲೈ ಬ್ರಾಹ್ಮಣಶ್ರೇಷ್ಠನೇ, ನೀನು ಯಾವ ಶಾಖೆ (ವೇದ) ಯನ್ನು ಅಧ್ಯಯನ ಮಾಡಿದ್ದೀಯೆ ?" ಎಂದಾಗ, ಗುಣಶರ್ಮನು ಅವನಿಗೆ ಹೀಗೆ ಉತ್ತರಿಸಿದನು.

೧೫೬. "ಬ್ರಹ್ಮನ್, ನಾನು ಹನ್ನೆರಡು ಶಾಖೆಗಳನ್ನು ಅಧ್ಯಯನ ಮಾಡಿದ್ದೇನೆ. ಎರಡು ಸಾಮವೇದ ಶಾಖೆಗಳು, ಋಗ್ವೇದ ಶಾಖೆಗಳೆರಡು, ಏಳು ಯಜುಶ್ಶಾಖೆಗಳು ಮತ್ತು ಒಂದು ಅಥರ್ವಕ್ಕೆ ಸೇರಿದ್ದು'.

---

ದಕ್ಷಿಣಾಪಥಮುದ್ದಿಶ್ಯ ಗಚ್ಛಂಶ್ಚಾಚಿಂತಯತ್ಪಥಿ ।
ನೂನಂ ತಯಾಶೋಕವತ್ಯಾ ಮೂಢೋऽಸೌ ಪ್ರೇರಿತೋ ನೃಪಃ ॥ ೧೫೧
ಅಹೋ ವಿಷಾದಪ್ಯಧಿಕಾಃ ಸ್ತ್ರಿಯೋ ರಕ್ತವಿಮಾನಿತಾಃ ।
ಅಹೋ ಅಸೇವ್ಯಾಃ ಸಾಧೂನಾಂ ರಾಜಾನೋऽತತ್ತ್ವದರ್ಶಿನಃ ॥ ೧೫೨
ಇತ್ಯಾದಿ ಚಿಂತಯನ್ಪ್ರಾಪ ಗುಣಶರ್ಮಾ ಕಥಂಚನ ।
ಗ್ರಾಮಂ ತತ್ರ ವಟಸ್ಯಾಧೋ ದದರ್ಶೈಕಂ ದ್ವಿಜೋತ್ತಮಮ್ ॥ ೧೫೩
ಶಿಷ್ಯಾನಧ್ಯಾಪಯಂತಂ ತಮುಪಸೃತ್ಯಾಭ್ಯವಾದಯತ್ ।
ಸೋऽಪಿ ತಂ ವಿಹಿತಾತಿಥ್ಯಃ ಪಪ್ರಚ್ಛ ಬ್ರಾಹ್ಮಣಃ ಕ್ಷಣಾತ್ ॥ ೧೫೪
ಹೇ ಬ್ರಹ್ಮನ್ಕತಮಾಂ ಶಾಖಾಮಧೀಷೇ ಕಥ್ಯತಾಮಿತಿ ।
ತತಃ ಸ ಗುಣಶರ್ಮಾ ತಂ ಬ್ರಾಹ್ಮಣಂ ಪ್ರತ್ಯವೋಚತ ॥ ೧೫೫
ಪಠಾಮಿ ದ್ವಾದಶ ಬ್ರಹ್ಮ ಶಾಖಾ ದ್ವೇ ಸಾಮವೇದತಃ ।
ಋಗ್ವೇದಾದ್ವೇ ಯಜುರ್ವೇದಾತ್ಸಪ್ತ ಚೈಕಾಮಥರ್ವತಃ ॥ ೧೫೬

೧೫೭ ಅದನ್ನು ಕೇಳಿ ಆ ಬ್ರಾಹ್ಮಣ ಅಧ್ಯಾಪಕನು, "ಹಾಗಾದರೆ ತಾವು ದೇವತೆಯೆ ಸರಿ' ಎಂದು, ಗುಣಶರ್ಮನ ದಿವ್ಯವಾದ ಆಕಾರದಿಂದಲೇ ಅವನ ಮೇಲ್ಮೆಯನ್ನು ತಿಳಿದು, ವಿನಮ್ರನಾಗಿ ಮತ್ತೆ ಕೇಳಿದನು.

೧೫೮. "ತಮ್ಮದು ಯಾವ ಊರು ? ತಮ್ಮ ಜನ್ಮದಿಂದ ಯಾವ ವಂಶವನ್ನು ಅಲಂಕರಿಸಿದ್ದೀರಿ ? ತಮ್ಮ ಹೆಸರೇನು ? ಇಷ್ಟೆಲ್ಲ ಅಧ್ಯಯನವನ್ನು ಹೇಗೆ ಮಾಡಿದಿರಿ, ಎಲ್ಲಿ ಮಾಡಿದಿರಿ, ಹೇಳಿ', ಎಂದು.

೧೫೯. ಅದನ್ನು ಕೇಳಿ ಗುಣಶರ್ಮನು, "ಉಜ್ಜಯಿನೀ ನಗರದಲ್ಲಿ ಆದಿತ್ಯಶರ್ಮನೆಂಬ ಬ್ರಾಹ್ಮಣ ಹುಡುಗನಿದ್ದನು. ಅವನಿಗೆ ಎಳವೆಯಲ್ಲೆ ತಂದೆ ತೀರಿಕೊಂಡನು. ತಾಯಿಯು ಪತಿಯ ಚಿತೆಯನ್ನೇರಿದಳು.

೧೬೧. ಬಳಿಕ ಅವನು ಸೋದರಮಾವನ ಮನೆಯಲ್ಲಿ ಬೆಳೆದನು. ಬಾಲಕ ಆದಿತ್ಯಶರ್ಮನು ವೇದಗಳನ್ನೂ, ಅನೇಕ ವಿದ್ಯೆಗಳನ್ನೂ, ಕಲೆಗಳನ್ನೂ ಅಧ್ಯಯನ ಮಾಡಿದನು.

೧೬೨. ವಿದ್ಯೆಯನ್ನು ಅಭ್ಯಾಸಮಾಡಿ ಜಪ ತಪ ವ್ರತಗಳನ್ನು ಆಚರಿಸುತ್ತಾ ಇದ್ದ ಆ ಯುವಕನಿಗೆ ಒಬ್ಬ ಸನ್ಯಾಸಿಯೊಡನೆ ಸ್ನೇಹ ಬೆಳೆಯಿತು.

೧೬೩ ಆ ಪರಿವ್ರಾಜಕನು ಮಿತ್ರನಾದ ಆದಿತ್ಯ ಶರ್ಮನೊಡನೆ ಸ್ಮಶಾನಕ್ಕೆ ಹೋಗಿ ಯಕ್ಷಿಣೀ ಸಿದ್ಧಿಗಾಗಿ ಹೋಮವನ್ನಾಚರಿಸಿದನು.

---

ತಚ್ಛ್ರುತ್ವಾ ತರ್ಹಿ ದೇವಸ್ತ್ವಮಿತ್ಯುಕ್ತ್ವಾ ಬ್ರಾಹ್ಮಣೋಽಥ ಸಃ ।
ಆಕೃತ್ಯಾ ಕಥಿತೋತ್ಕರ್ಷಂ ಪ್ರಹ್ವಃ ಪಪ್ರಚ್ಛ ತಂ ಪುನಃ ॥ ೧೫೭
ಕೋ ದೇಶಃ ಕೋಽನ್ವಯೋ ಬ್ರೂಹಿ ಜನ್ಮನಾಲಂಕೃತಸ್ತ್ವಯಾ ।
ಕಿಂ ತೇ ನಾಮ ಕಥಂ ಚೇಯತ್ತ್ವಯಾಧೀತಂ ಕ್ವ ವಾ ವದ ॥ ೧೫೮
ತಚ್ಛ್ರುತ್ವಾ ಗುಣಶರ್ಮಾ ತಮುವಾಚೋಜ್ಜಯಿನೀಪುರಿ ।
ಆದಿತ್ಯಶರ್ಮನಾಮಾಸೀತ್ತೋಕೋಽಪಿ ಬ್ರಾಹ್ಮಣಪುತ್ರಕಃ ॥ ೧೫೯
ಪಿತಾ ತಸ್ಯ ಚ ಬಾಲಸ್ಯ ಸತಃ ಪಂಚತ್ವಮಾಯಯೌ ।
ಮಾತಾ ತೇನ ಸಮಂ ಪತ್ಯಾ ವಿವೇಶ ಚ ಹುತಾಶನಮ್ ॥ ೧೬೦
ತತಃ ಸ ವವೃಧೇ ತಸ್ಯಾಂ ಪುರಿ ಮಾತುಲವೇಶ್ಮನಿ ।
ಆದಿತ್ಯಶರ್ಮಾಧೀಯಾನೋ ವೇದಾನ್ವಿದ್ಯಾಃ ಕಲಾಸ್ತಥಾ ॥ ೧೬೧
ಪ್ರಾಪ್ತವಿದ್ಯಸ್ಯ ತಸ್ಯಾತ್ರ ಜಪವ್ರತನಿಷೇವಿಣಃ ।
ಪ್ರವ್ರಾಜಕೇನ ಕೇನಾಪಿ ಸಖ್ಯಂ ಸಮುದಪದ್ಯತ ॥ ೧೬೨
ಸ ಪರಿವ್ರಾಟ್ ಸಮಂ ತೇನ ಮಿತ್ರೇಣಾದಿತ್ಯಶರ್ಮಣಾ ।
ಗತ್ವಾ ಪಿತೃವನೇ ಹೋಮಂ ಯಕ್ಷಿಣೀಸಿದ್ಧಯೇ ವ್ಯಧಾತ್ ॥ ೧೬೩

೧೬೪. ಆಗ ಅಲ್ಲಿ, ಚಿನ್ನದ ವಿಮಾನದಲ್ಲಿ ಕುಳಿತ. ಸುಂದರಕನ್ಯೆಯರಿಂದ ಕೂಡಿದ ದಿವ್ಯಾಲಂಕಾರ ಭೂಷಿತಳಾದ ದೇವ ಕನ್ಯೆಯೊಬ್ಬಳು ಆವಿರ್ಭವಿಸಿದಳು.

೧೬೫. ಆಕೆ ಅವನನ್ನು ಕಂಡು, ಮಧುರ ಧ್ವನಿಯಿಂದ ಹೀಗೆ ಮಾತನಾಡಿಸಿದಳು. "ಸನ್ಯಾಸಿಯೇ, ನಾನು ವಿದ್ಯುನ್ಮಾಲೆಯೆಂಬ ಯಕ್ಷಿಣಿ. ಇವರೆಲ್ಲರೂ ಯಕ್ಷಿಣಿಯರೇ.

೧೬೬–೧೬೮. ನನ್ನ ಪರಿವಾರದಿಂದ ನಿನಗೆ ಇಷ್ಟಳಾದ ಒಬ್ಬಳನ್ನು ಪಡೆದುಕೊ. ಈ ನಿನ್ನ ಮಂತ್ರಸಾಧನೆಗೆ ಸಿಗುವುದು ಇಷ್ಟೆ. ನಿನ್ನ ಮಂತ್ರಸಾಧನೆಯು ಇನ್ನೂ ಪೂರ್ಣವಾಗಿಲ್ಲ ಈ ಕಾರಣದಿಂದ ನಿನಗೆ ನಾನು ಪೂರ್ಣಸಿದ್ಧಿಯನ್ನು ನೀಡಲಾರೆ ಸುಮ್ಮನೆ ಕಷ್ಟ ಪಡಬೇಡ'. ಎಂದು ಹೇಳಿದ ಯಕ್ಷಿಣಿಯ ಮಾತನ್ನು ಒಪ್ಪಿ ಸನ್ಯಾಸಿಯು ಪರಿವಾರದಲ್ಲಿದ್ದ ಒಬ್ಬಳನ್ನು ಪಡೆದನು.

೧೬೯. ನಂತರ ವಿದ್ಯುನ್ಮಾಲೆಯು ಅಂತರ್ಧಾನಳಾದಳು. ಆಗ ಪರಿವ್ರಾಜಕನಿಗೆ ದೊರೆತಿದ್ದ ಯಕ್ಷಿಣಿಯನ್ನು ಆದಿತ್ಯಶರ್ಮನು ಕೇಳಿದನು.

೧೭೦. "ವಿದ್ಯುನ್ಮಾಲೆಗಿಂತ ಶ್ರೇಷ್ಠಳಾದ ಯಕ್ಷಿಣಿ ಇರುವಳೆ ?' ಎಂದು. ಅದಕ್ಕೆ ಯಕ್ಷಿಣಿಯು, "ಸುಂದರಾಂಗನೆ, ಇರುವಳು !' ಎಂದು ಉತ್ತರ ನೀಡಿದಳು.

---

ತತ್ರ ತಸ್ಯಾವಿರಾಸೀಚ್ಚ ಕಾರ್ತಸ್ವರವಿಮಾನಗಾ ।
ವರಕನ್ಯಾಪರಿವೃತಾ ದಿವ್ಯಕನ್ಯಾ ಸ್ವಲಂಕೃತಾ ॥ ೧೬೪
ಸಾ ತಂ ಮಧುರಯಾ ವಾಚಾ ಬಭಾಷೇ ಮಸ್ಕರಿನ್ನಹಮ್ ।
ವಿದ್ಯುನ್ಮಾಲಾಭಿಧಾ ಯಕ್ಷೀ ಯಕ್ಷ್ಯೆಶ್ಚಾಪರಾ ಇಮಾಃ ॥ ೧೬೫
ತದಿತೋ ಮತ್ಪರೀವಾರಾದ್ಗೃಹಾಣೈಕಾಂ ಯಥಾರುಚಿ ।
ಏತಾವದೇವ ಸಿದ್ಧಂ ತೇ ಮಂತ್ರಸಾಧನಯಾನಯಾ ॥ ೧೬೬
ತ್ವಯಾ ಹಿ ನೈವ ವಿಜ್ಞಾತಂ ಪೂರ್ಣಂ ಮನ್ಮಂತ್ರಸಾಧನಮ್ ।
ಅತೋಽಹಂ ತೇ ನ ಸಿದ್ಧೈವ ಮಾನ್ಯಂ ಕ್ಲೇಶಂ ವೃಥಾ ಕೃಥಾಃ ॥ ೧೬೭
ಏವಮುಕ್ತಸ್ತಯಾ ಯಕ್ಷ್ಯಾ ಪರಿವ್ರಾಡನುಮನ್ಯ ಸಃ ।
ಯಕ್ಷಿಣೀಮಗ್ರಹೀದೇಕಾಂ ತಸ್ಮಾತ್ತತ್ಪರಿವಾರತಃ ॥ ೧೬೮
ತತಶ್ಚ ವಿದ್ಯುನ್ಮಾಲಾ ಸಾ ತಿರೋಽಭೂತ್ತಾಂ ಚ ಯಕ್ಷಿಣೀಮ್ ।
ಆದಿತ್ಯಶರ್ಮಾ ಪಪ್ರಚ್ಛ ಸಿದ್ಧಾಂ ಪ್ರವ್ರಾಜಕಸ್ಯ ಯಾ ॥ ೧೬೯
ಅಪ್ಯಸ್ತಿ ವಿದ್ಯುನ್ಮಾಲಾತೋ ಯಕ್ಷಿಣೀ ಕಾಚಿದುತ್ತಮಾ ।
ತಚ್ಛ್ರುತ್ವಾ ಯಕ್ಷಿಣೀ ಸಾ ತಂ ಪ್ರತ್ಯುವಾಚಾಸ್ತಿ ಸುಂದರ ॥ ೧೭೦

೧೭೧–೧೭೨. ಯಕ್ಷಿಣಿಯರಲ್ಲಿ ವಿದ್ಯುನ್ಮಾಲೆ, ಚಂದ್ರಲೇಖೆ ಮತ್ತು ಸುಲೋಚನೆಯರು ಶ್ರೇಷ್ಠರು. ಅವರಲ್ಲೂ ಸುಲೋಚನೆ ಅತಿ ಶ್ರೇಷ್ಠಳು, ಎಂದು ಹೇಳಿ ಸಮಯಬಂದಾಗ ಬರುವೆನೆಂದು ಹೇಳಿ ಬೀಳ್ಕೊಂಡು ಆಕೆ ಹೊರಟಳು. ಆ ಪರಿವ್ರಾಜಕನೂ ಕೂಡ ಆದಿತ್ಯಶರ್ಮನೊಡನೆ ಮನೆಗೆ ಹೋದನು.

೧೭೩. ಅಲ್ಲಿ ಪ್ರೀತಳಾದ ಯಕ್ಷಿಣಿಯು ಅವನಿಗೆ ಕಾಲಕಾಲಕ್ಕೆ ಬೇಕಾದ ಅಪೇಕ್ಷಿಸಿದ ಭೋಗಗಳನ್ನು ದಿನದಿನವೂ ನೀಡುತ್ತಿದ್ದಳು.

೧೭೪. ಒಂದು ದಿನ ಆದಿತ್ಯಶರ್ಮನು, ಪರಿವ್ರಾಜಕನ ಮೂಲಕ ಸುಲೋಚನಾ ಮಂತ್ರ ವಿಧಿಯನ್ನು ಯಾರು ತಿಳಿದಿದ್ದಾರೆ ಎಂದು ಕೇಳಿದನು.

೧೭೫. ಯಕ್ಷಿಣಿಯು ಅವನ ಮುಖಾಂತರವೇ ಹೇಳಿದಳು. 'ದಕ್ಷಿಣ ದಿಕ್ಕಿನ ಭೂಭಾಗದಲ್ಲಿ ತುಂಬವನವೆಂಬ ಸ್ಥಾನವಿದೆ.

೧೭೬. ಅಲ್ಲಿ ವೇಣಾ ನದೀ ತೀರದಲ್ಲಿ ವಿಷ್ಣುಗುಪ್ತನೆಂಬ ಪರಿವ್ರಾಜಕನಿದ್ದಾನೆ. ಅವನು ಬೌದ್ಧಭಿಕ್ಷು. ಅವನು ಆ ಮಂತ್ರವಿಧಿಯನ್ನು ಚೆನ್ನಾಗಿ ಬಲ್ಲವನಾಗಿದ್ದಾನೆ.'

೧೭೭. ಯಕ್ಷಿಣಿಯ ಮಾತಿನಿಂದ ಅದನ್ನು ತಿಳಿದ ಆದಿತ್ಯಶರ್ಮನು ಉತ್ಸಾಹದಿಂದ ದಕ್ಷಿಣ ದಿಕ್ಕಿಗೆ ಹೊರಟುನಿಂತನು. ಅವನ ಮೇಲಿನ ಪ್ರೀತಿಯಿಂದ ಪರಿವ್ರಾಜಕನೂ ಅವನನ್ನು ಹಿಂಬಾಲಿಸಿದನು.

---

ವಿದ್ಯುನ್ಮಾಲಾ ಚಂದ್ರಲೇಖಾ ತೃತೀಯಾ, ಚ ಸುಲೋಚನಾ ।
ಉತ್ತಮಾ ಯಕ್ಷಿಣೀಷ್ವೇತಾ ಏತಾಸ್ವಪಿ ಸುಲೋಚನಾ ॥ ೧೭೧
ಇತ್ಯುಕ್ತ್ವಾ ಸಾ ಯಥಾಕಾಲಮಾಗಂತುಂ ಯಕ್ಷಿಣೀ ಯಯೌ ।
ಆದಿತ್ಯಶರ್ಮಣಾ ಸಾಕಮಗಾತ್ಪ್ರಾಟ್ ಚ ತದ್ಗೃಹಮ್ ॥ ೧೭೨
ತತ್ರ ಪ್ರತಿದಿನಂ ತಸ್ಮೈ ಪ್ರೀತಾ ಪ್ರವ್ರಾಜಕಾಯ ಸಾ ।
ಪ್ರಾಯಚ್ಛದ್ಯಕ್ಷಿಣೀ ಭೋಗಾನಿಷ್ಟಾನ್ಕಾಲೋಪಗಾಮಿನೀ ॥ ೧೭೩
ಏಕದಾದಿತ್ಯಶರ್ಮಾ ಚ ಪ್ರವ್ರಾಜಕಮುಖೇನ ತಾಮ್ ।
ಸುಲೋಚನಾಮಂತ್ರವಿಧಿಂ ಕೋ ಜಾನಾತೀತಿ ಪೃಷ್ಟವಾನ್ ॥ ೧೭೪
ಸಾಪಿ ತನ್ಮುಖ ಏವಾಸ್ಮೈ ಯಕ್ಷಿಣ್ಯೇವಂ ಕಿಲಾಬ್ರವೀತ್ ।
ಅಸ್ತಿ ತುಂಬವನಂ ನಾಮ ಸ್ಥಾನಂ ದಕ್ಷಿಣದಿಗ್ಭುವಿ ॥ ೧೭೫
ತತ್ರಾಸ್ತಿ ವಿಷ್ಣುಗುಪ್ತಾಖ್ಯೋ ವೇಣಾತೀರಕೃತಾಸ್ಪದಃ ।
ಪ್ರವ್ರಾಜಕೋ ಭದಂತಾಗ್ರ್ಯಃ ಸ ತದ್ವೇತ್ತಿ ಸವಿಸ್ತರಮ್ ॥ ೧೭೬
ಬದ್ಧ್ವೈತದ್ಯಕ್ಷಿಣೀವಾಕ್ಯಾತ್ತಂ ದೇಶಂ ಚೋತ್ಸುಕೋ ಯಯೌ ।
ಆದಿತ್ಯಶರ್ಮಾನುಗತಃ ಪ್ರೀತ್ಯಾ ಪ್ರವ್ರಾಜಕೇನ ಸಃ ॥ ೧೭೭

೧೭೮. ಅಲ್ಲಿ, ಯಕ್ಷಿಣಿ ಹೇಳಿದ ಭದಂತನನ್ನು ಹುಡುಕಿ, ಆತನ ಬಳಿಸಾರಿ ಮೂರು ವರುಷಗಳ ಕಾಲ ಭಕ್ತಿಯಿಂದ ಆತನ ಪರಿಚರ್ಯೆಯನ್ನು ಮಾಡಿದನು.

೧೭೯. ಪರಿವ್ರಾಜಕನೂ ತನಗೆ ಸಿದ್ಧಿಸಿದ್ದ ಯಕ್ಷಿಣಿಯ ಮೂಲಕ ಮನುಷ್ಯ ದುರ್ಲಭವಾದ ಯುಕ್ತಿಗಳಿಂದ ಪಡೆದ ಉಪಚಾರಗಳಿಂದ ಆ ಭಿಕ್ಷುವನ್ನು ಸೇವಿಸಿದನು.

೧೮೦. ಇದರಿಂದ ಸಂತುಷ್ಟನಾದ ಭದಂತನು ಆದಿತ್ಯಶರ್ಮನಿಗೆ, ಅವನು ಬೇಡಿದ ಸುಲೋಚನಾ ಮಂತ್ರವನ್ನು ವಿಧಿಪೂರ್ವಕವಾಗಿ ಉಪದೇಶಿಸಿದನು.

೧೮೧. ಬಳಿಕ, ಆದಿತ್ಯಶರ್ಮನು ಮಂತ್ರವನ್ನು ಪಡೆದು, ಪೂರ್ಣಗೊಳಿಸಿ ಏಕಾಂತದಲ್ಲಿ ವಿಧಿವತ್ತಾಗಿ ಹೋಮಕಾರ್ಯವನ್ನು ನೆರವೇರಿಸಿದನು.

೧೮೨. ಆಗ ಅವನಿಗೆ ಸುಲೋಚನಾಯಕ್ಷಿಣಿಯು ವಿಮಾನಾರೂಢಳಾಗಿ ಜಗತ್ತನ್ನೇ ಆಶ್ಚರ್ಯದಲ್ಲಿ ಮುಳುಗಿಸುವಂಥಹ ದಿವ್ಯರೂಪದಲ್ಲಿ ಕಾಣಿಸಿಕೊಂಡಳು.

೧೮೩-೧೮೪. ಆಕೆ ಅವನಿಗೆ ಹೇಳಿದ ಹಾಗೆ 'ಬಾಬಾ, ನಿನಗೆ ನಾನು ಸಿದ್ಧಿಸಿದ್ದೇನೆ ಇನ್ನೇನು ಬೇಕು ? ಆದರೆ ಆರುತಿಂಗಳ ಕಾಲ ನನ್ನ ಕನ್ಯಾಭಾವವನ್ನು ನಿವಾರಿಸಬಾರದು. ಹಾಗಿದ್ದರೆ ಮಾತ್ರ ನನ್ನಿಂದ ನೀನು ಮಹಾವೀರನೂ, ಸಮೃದ್ಧಿಗೆ ಪಾತ್ರನೂ, ಸುಲಕ್ಷಣನೂ, ಸರ್ವಜ್ಞಸಮನೂ ಆದ ಪುತ್ರನನ್ನು ಪಡೆಯಬಹುದು.

---

ತತ್ರಾನ್ವಿಷ್ಯ ಯಥಾವತ್ತಂ ಭದಂತಮಭಿಗಮ್ಯ ಚ ।
ಪರಿಚರ್ಯಾಪರೋ ಭಕ್ತ್ಯಾ ತ್ರೀಣಿ ವರ್ಷಾಣ್ಯಸೇವತ ॥ ೧೭೮
ಉಪಾಚರಚ್ಚ ಯಕ್ಷಿಣ್ಯಾ ಪರಿವ್ರಾಟ್‌ಸಿದ್ಧಯಾ ತಯಾ ।
ಯಥೋಪಯೋಗೋಪಹೃತೈರುಪಚಾರೈರಮಾನುಷೈಃ ॥ ೧೭೯
ತತಸ್ತುಷ್ಟೋ ಭದಂತೋಽಸೌ ತಸ್ಮಾಯಾದಿತ್ಯಶರ್ಮಣೇ ।
ದದೌ ಸುಲೋಚನಾಮಂತ್ರಮರ್ಥಿತಂ ಸುವಿಧಾನಕಮ್ ॥ ೧೮೦
ತತಶ್ಚಾದಿತ್ಯಶರ್ಮಾ ತಂ ಮಂತ್ರಂ ಪ್ರಾಪ್ಯ ಸಮಾಪ್ಯ ಚ ।
ಹೋಮಂ ಚಕಾರ ಸಂಪೂರ್ಣಂ ಗತ್ವೈಕಾಂತೇ ಯಥಾವಿಧಿ ॥ ೧೮೧
ತತಸ್ತಸ್ಯ ವಿಮಾನಸ್ಥಾ ಯಕ್ಷಿಣೀ ಸಾ ಸುಲೋಚನಾ ।
ಪ್ರಾದುರ್ಬಭೂವ ರೂಪೇಣ ಜಗದಾಶ್ಚರ್ಯದಾಯಿನಾ ॥ ೧೮೨
ಜಗಾದ ಚೈತಮೇಹ್ಯೇಹಿ ಸಿದ್ಧಾಹಂ ತವ ಕಿಂ ಪುನಃ ।
ಷಣ್ಮಾಸಂ ಕನ್ಯಕಾಭಾವೋ ನಾಪನೇಯೋ ಮಮ ತ್ವಯಾ ॥ ೧೮೩
ಯದಿ ಮತ್ತೋ ಮಹಾವೀರಮೃದ್ಧಿಪಾತ್ರಂ ಸುಲಕ್ಷಣಮ್ ।
ಸರ್ವಜ್ಞಕಲ್ಪಮಜಿತಂ ಪುತ್ರಂ ಸಂಪ್ರಾಪ್ತುಮಿಚ್ಛಸಿ ॥ ೧೮೪

೧೮೫. ಹಾಗೆಯೇ ಆಗಲೆಂದು ಹೇಳಿದ ಆದಿತ್ಯಶರ್ಮನನ್ನು ಕರೆದುಕೊಂಡು ವಿಮಾನದಲ್ಲಿ ಅಲಕಾಪುರಿಗೆ ಹೋದಳು.

೧೮೬. ಅಲ್ಲಿ, ಅವನು ಬಳಿಯಲ್ಲೇ ಇದ್ದ ಆಕೆಯನ್ನು ನಿತ್ಯವೂ ನೋಡುತ್ತಲಿದ್ದನು. ಆರು ತಿಂಗಳು ಆದಿತ್ಯಶರ್ಮನು ಅಸಿಧಾರಾವ್ರತವನ್ನು ಪಾಲಿಸಿದನು.

೧೮೭–೧೮೯. ಇದರಿಂದ ತುಷ್ಟನಾದ ಧನಾಧ್ಯಕ್ಷನಾದ ಕುಬೇರನು ತಾನೇ ನಿಂತು ದಿವ್ಯವಾದ ವಿಧಿಗಳಿಂದ ಸುಲೋಚನೆಯನ್ನು ಆದಿತ್ಯ ಶರ್ಮನಿಗೆ ನೀಡಿದನು. ಆ ದ್ವಿಜನಿಗೆ ಸುಲೋಚನೆಯಲ್ಲಿ ಹುಟ್ಟಿದ ಪುತ್ರನೇ ನಾನು. ತಂದೆಯು ನನ್ನ ಗುಣಗಳನ್ನು ಕಂಡು ಗುಣಶರ್ಮನೆಂದು ನಾಮಕರಣ ಮಾಡಿದನು. ನಂತರ ಅಲ್ಲಿಯೇ ಮಣಿಧರನೆಂಬ ಯಕ್ಷಾಧಿಪತಿಯಿಂದ ಕ್ರಮ ಪೂರ್ವಕವಾಗಿ ವೇದಗಳನ್ನೂ, ಇತರ ವಿದ್ಯೆಗಳನ್ನೂ ಕಲೆಗಳನ್ನು ಪಡೆದೆನು.

೧೯೦. ಆಗ ಒಮ್ಮೆ ಇಂದ್ರನು ಏನೋ ಕಾರಣದಿಂದ ಕುಬೇರನ ಬಳಿಗೆ ಬಂದನು. ಅವನನ್ನು ನೋಡಿ ಅಲ್ಲಿದ್ದ ಕೆಲವರು ಎದ್ದು ನಿಂತರು.

೧೯೧. ನನ್ನ ತಂದೆ ಆದಿತ್ಯಶರ್ಮನು ಆ ಸಮಯದಲ್ಲಿ ವಿಧಿಯೋಗದಿಂದಲೋ ಏನೋ ಎಲ್ಲೋ ಮನಸ್ಸುಳ್ಳವನಾಗಿ ಸಂಭ್ರಮಪಟ್ಟು ಎದ್ದು ನಿಲ್ಲಲಿಲ್ಲ.

---

ಇತ್ಯುಕ್ತ್ವಾ ಸಾ ತಥೇತ್ಯೇನಮುಕ್ತವಂತಂ ಚ ಯಕ್ಷಿಣೀ ।
ಆದಾಯಾದಿತ್ಯಶರ್ಮಾಣಂ ವಿಮಾನೇನಾಲಕಾಂ ಯಯೌ ॥ ೧೮೫
ಸ ಚ ತತ್ರ ಸಮೀಪಸ್ಥಾಂ ತಾಂ ಪಶ್ಯನ್ನಾಸ್ತ ಸರ್ವದಾ ।
ಆದಿತ್ಯಶರ್ಮಾ ಷಣ್ಮಾಸಾನಸಿಧಾರಾವ್ರತಂ ಚರನ್ ॥ ೧೮೬
ತತಸ್ತುಷ್ಟೋ ಧನಾಧ್ಯಕ್ಷೋ ದಿವ್ಯೇನ ವಿಧಿನಾ ಸ್ವಯಮ್ ।
ಆದಿತ್ಯಶರ್ಮಣೇ ತಸ್ಮೈ ವ್ಯತರತ್ತಾಂ ಸುಲೋಚನಾಮ್ ॥ ೧೮೭
ತಸ್ಯಾಂ ತಸ್ಯ ದ್ವಿಜಸ್ಯಾತ್ರ ಜಾತೋಽಯಮಹಮಾತ್ಮಜಃ ।
ಪಿತ್ರಾ ಚ ಮೇ ಕೃತಂ ನಾಮ ಗುಣಶರ್ಮೇತಿ ಸದ್ಗುಣಾತ್ ॥ ೧೮೮
ತತಸ್ತತ್ರೈವ ಯಕ್ಷಾಧಿಪತೇರ್ಮಣಿಧರಾಭಿಧಾತ್ ।
ಕ್ರಮಾದ್ವೇದಾಶ್ಚ ವಿದ್ಯಾಶ್ಚ ಕಲಾಶ್ಚಾಧಿಗತಾ ಮಯಾ ॥ ೧೮೯
ಅಥೈಕದಾ ಕಿಮಪ್ಯಾಗಾಚ್ಛಕ್ರೋಽತ್ರ ಧನದಾಂತಿಕಮ್ ।
ಉದತಿಷ್ಠಂಶ್ಚ ತಂ ದೃಷ್ಟ್ವಾ ಯೇ ತತ್ರಾಸತ ಕೇಚನ ॥ ೧೯೦
ಮತ್ಪಿತಾದಿತ್ಯಶರ್ಮಾ ತು ತತ್ಕಾಲಂ ವಿಧಿಯೋಗತಃ ।
ಅನ್ಯತ್ರ ಗತಚಿತ್ತತ್ವಾನ್ನೋದತಿಷ್ಠತ್ಸಸಂಭ್ರಮಃ ॥ ೧೯೧

೧೯೨. ಆಗ ಅವನನ್ನು ಇಂದ್ರನು ಕೋಪದಿಂದ ಹೀಗೆ ಶಪಿಸಿದನು. "ಜಡನೆ, ನಿನಗೆ ಧಿಕ್ಕಾರವಿರಲಿ. ನಿನ್ನ ಆ ಮನುಷ್ಯ ಲೋಕಕ್ಕೇ ಹೋಗು. ಇಲ್ಲಿರಲು ನೀನು ಯೋಗ್ಯನಲ್ಲ'

೧೯೩–೧೯೪. ಸುಲೋಚನೆಯು ಶಕ್ರನ ಕಾಲಿಗೆ ಬಿದ್ದು ಬೇಡಿಕೊಂಡಾಗ ಶಕ್ರನು "ಇವನು ಮರ್ತ್ಯಲೋಕಕ್ಕೆ ಹೋಗುವುದು ಬೇಡ. ಇವನ ಮಗನು ಹೋಗಲಿ; ಏಕೆಂದರೆ ಮಗನನ್ನು ತನ್ನ ಸ್ವರೂಪವೆಂದೇ ಹೇಳುತ್ತಾರಲ್ಲ; ನನ್ನ ಮಾತು ವ್ಯರ್ಥವಾಗುವುದು ಬೇಡ' ಎಂದು ಹೇಳಿ ಶಾಂತನಾದನು.

೧೯೫. ಆಗ ನನ್ನ ತಂದೆಯು ಉಜ್ಜಯಿನಿಯಲ್ಲಿದ್ದ ತನ್ನ ಸೋದರಮಾವನ ಮನೆಯಲ್ಲಿ ನನ್ನನ್ನು ತಂದುಬಿಟ್ಟನು. ಇದು ನನ್ನ ಭವಿತವ್ಯವಲ್ಲವೆ !

೧೯೬–೧೯೭. ಅಲ್ಲಿನ ರಾಜನೊಡನೆ ನನಗೆ ಹೇಗೋ ಸ್ನೇಹವುಂಟಾಯಿತು. ಅಲ್ಲಿಂದ ಮುಂದೇನಾಯಿತು ಎಂಬುದೆಲ್ಲವನ್ನೂ ಹೇಳುತ್ತೇನೆ ಕೇಳು', ಎಂದು ಅವನು ಮೊದಲಿನಿಂದ ಎಲ್ಲವನ್ನು, ಅಂದರೆ–ಅಶೋಕವತಿ ಮಾಡಿದ್ದು, ರಾಜನು ತಪ್ಪು ತಿಳಿದದ್ದು ಮತ್ತು ಅವನೊಡನೆ ಯುದ್ಧದವರೆಗಿನ ಎಲ್ಲ ಘಟನೆಗಳನ್ನೂ ವಿವರಿಸಿದನು.

೧೯೮. ನಂತರ, "ವಿಪ್ರನೆ, ನಾನು ಹೀಗೆ ದೇಶಾಂತರ ಓಡಿಬಂದಿದ್ದೇನೆ. ಮಾರ್ಗಮಧ್ಯದಲ್ಲಿ ನಿನ್ನನ್ನು ನೋಡಿದೆ' ಎಂದನು.

---

ತತಸ್ತಮಶಪತ್ಕ್ರುದ್ಧಃ ಸ ಶಕ್ರೋ ಧಿಗ್ಜಡ ವ್ರಜ ।
ಸ್ವಮೇವ ಮರ್ತ್ಯಲೋಕಂ ತಂ ನೇಹ ಯೋಗ್ಯೋ ಭವಾನಿತಿ ॥ ೧೯೨
ಪ್ರಣಿಪತ್ಯಾನುನೀತೋಽಥ ಸ ಸುಲೋಚನಯಾ ತಯಾ ।
ಶಕ್ರೋಽಬ್ರವೀತ್ತರ್ಹಿ ಮಾ ಗಾನ್ಮರ್ತ್ಯಲೋಕಮಯಂ ಸ್ವಯಮ್ ॥ ೧೯೩
ಏತತ್ಪುತ್ರಸ್ತು ಯಾತ್ವೇಷ ಪುತ್ರೋ ಹ್ಯಾತ್ಮೈವ ಕಥ್ಯತೇ ।
ಮಾ ಭೂನ್ಮದ್ವಚನಂ ಮೋಘಮಿತ್ಯುಕ್ತ್ವೇಂದ್ರಃ ಶಮಂ ಯಯೌ ॥ ೧೯೪
ತತಃ ಪಿತ್ರಾಹಮಾನೀಯ ನಿಜಮಾತುಲವೇಶ್ಮನಿ ।
ಉಜ್ಜಯಿನ್ಯಾಂ ವಿನಿಕ್ಷಿಪ್ತೋ ಭವಿತವ್ಯಂ ಹಿ ಯಸ್ಯ ತತ್ ॥ ೧೯೫
ತತ್ರಾಜಾಯತ ಸಖ್ಯಂ ಮೇ ರಾಜ್ಞಾತ್ರತ್ಯೇನ ದೈವತಃ ।
ತತೋಽತ್ರ ಮಮ ಯದ್ವೃತ್ತಂ ತತ್ಸರ್ವಂ ಶೃಣು ವಚ್ಮಿ ತೇ ॥ ೧೯೬
ಇತ್ಯುಕ್ತ್ವಾ ಮೂಲವೃತ್ತಾಂತಂ ಯದಶೋಕವತೀಕೃತಮ್ ।
ಯಚ್ಚ ರಾಜ್ಞಾ ಕೃತಂ ತಸ್ಯ ಯುದ್ಧಾಂತಂ ತದವರ್ಣಯತ್ ॥ ೧೯೭
ಪುನಶ್ಚೋವಾಚ ತಂ ಬ್ರಹ್ಮನ್ನಿತ್ಥಮಸ್ಮಿ ಪಲಾಯಿತಃ ।
ದೇಶಾಂತರಂ ವ್ರಜನ್ಮಾರ್ಗೇ ಭವಂತಮಿಹ ದೃಷ್ಟವಾನ್ ॥ ೧೯೮

೧೯೯–೨೦೦. ಇದನ್ನು ಕೇಳಿ ಬ್ರಾಹ್ಮಣನು ಗುಣಶರ್ಮನನ್ನು ಕುರಿತು ಹೇಳಿದನು. "ಪ್ರಭು, ಧನ್ಯನಾದೆ. ನಿನ್ನ ಆಗಮನದಿಂದ ಸಂತೋಷವಾಗಿದೆ. ನನ್ನ ಮನೆಗೆ ಬಾ. ನನ್ನ ಹೆಸರು ಅಗ್ನಿದತ್ತ ಈ ಗ್ರಾಮವು ನನ್ನ ಅಗ್ರಹಾರ. ಇಲ್ಲಿ ನೀನು ನೆಮ್ಮದಿಯಿಂದಿರು.

೨೦೧–೨೦೨. ಎಂದು ಹೇಳಿ ಅಗ್ನಿದತ್ತನು ಗುಣಶರ್ಮನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಆತನ ಮನೆಯೋ, ಅಪಾರವಾದ ಗೋಮಹಿಷಗಳಿಂದಲೂ, ದ್ರವ್ಯಸಂಪತ್ತಿಯಿಂದಲೂ ಕೂಡಿದುದಾಗಿತ್ತು. ಅವನು ಗುಣಶರ್ಮನನ್ನು ಸ್ನಾನ, ಅಂಗರಾಗಗಳಿಂದಲೂ, ವಸ್ತ್ರಾಭರಣಗಳಿಂದಲೂ, ವಿವಿಧ ಭೋಜನಗಳಿಂದಲೂ ಸನ್ಮಾನಿಸಿದನು.

೨೦೩. ಅಲ್ಲದೆ, ಲಕ್ಷಣ ನೋಡಿಸುವ ನೆಪದಿಂದ, ಸುರರೂ ಮೋಹಿಸುವಂತಹ ತನ್ನ ಕನ್ಯೆಯನ್ನೂ ತೋರಿಸಿದನು. ಆಕೆಯ ಹೆಸರು ಕೂಡ "ಸುಂದರಿ'.

೨೦೪. ಆಕೆಯ ಅಸಾಧಾರಣ ರೂಪ ಲಾವಣ್ಯವನ್ನು ಕಂಡ ಗುಣಶರ್ಮನು ಈಕೆಗೆ ಸಪತ್ನಿಯರೂ ಇರುತ್ತಾರೆ ಎಂದು ಅಗ್ನಿದತ್ತನಿಗೆ ಹೇಳಿದನು.

೨೦೫. "ಈಕೆಗೆ ಮೂಗಿನಲ್ಲಿ ತಿಲಕವಿದೆ. ಇದರಿಂದ ಎದೆಯಲ್ಲಿ ಎರಡನೆಯ ತಿಲಕವಿದೆ ಎಂದು ನಾನು ಹೇಳಬಲ್ಲೆ. ಹೀಗೆ ಎರಡು ತಿಲಕ ಇರುವುದರ ಫಲ ಇದು' ಎಂದನು.

---

ಶ್ರುತ್ವೈತದ್ಬ್ರಾಹ್ಮಣಸ್ತಂ ಸ ಗುಣಶರ್ಮಾಣಮಭ್ಯಧಾತ್ ।
ತರ್ಹಿ ಧನ್ಯೋಽಸ್ಮಿ ಸಂವೃತ್ತಸ್ತ್ವದಭ್ಯಾಗಮನಾತ್ಪ್ರಭೋ ॥ ೧೯೯
ತದೇಹಿ ಮೇ ಗೃಹಂ ತಾವದಗ್ನಿದತ್ತಂ ಚ ವಿದ್ಧಿ ಮಾಮ್ ।
ನಾಮ್ನಾ ಮದಗ್ರಹಾರಶ್ಚ ಗ್ರಾಮೋಽಯಂ ನಿರ್ವೃತೋ ಭವ ॥ ೨೦೦
ಇತ್ಯುಕ್ತ್ವಾ ಸೋಽಗ್ನಿದತ್ತಸ್ತಂ ಗೃಹಂ ಪ್ರಾವೇಶಯನ್ನಿಜಮ್ ।
ಋದ್ಧಿಮದ್ಗುಣಶರ್ಮಾಣಂ ಬಹುಗೋಮಹಿಷೀಹಯಮ್ ॥ ೨೦೧
ತತ್ರ ಸ್ನಾನಾಂಗರಾಗಾಭ್ಯಾಂ ವಸ್ತ್ರೈರಾಭರಣೈಶ್ಚ ತಮ್ ।
ಅತಿಥಿಂ ಮಾನಯಾಮಾಸ ಭೋಜನೈರ್ವಿವಿಧೈಶ್ಚ ಸಃ ॥ ೨೦೨
ಅದರ್ಶಯಚ್ಚ ತಸ್ಮೈ ಸ್ವಾಂ ಕಾಮ್ಯರೂಪಾಂ ಸುರೈರಪಿ ।
ಲಕ್ಷಣಾವೇಕ್ಷಣಮಿಷಾತ್ಸುಂದರೀಂ ನಾಮ ಕನ್ಯಕಾಮ್ ॥ ೨೦೩
ಗುಣಶರ್ಮಾಪಿ ಸೋಽನನ್ಯಸಮರೂಪಾಂ ವಿಲೋಕ್ಯ ತಾಮ್ ।
ಸಪತ್ನ್ಯೋಽಸ್ಯಾ ಭವಿಷ್ಯಂತೀತ್ಯಗ್ನಿದತ್ತಮುವಾಚ ತಂ ॥ ೨೦೪
ನಾಸಾಯಾಂ ತಿಲಕೋಽಸ್ತ್ಯಸ್ಯಾಸ್ತತ್ಸಂಬಂಧಾಚ್ಚ ವಚ್ಮ್ಯಹಮ್ ।
ಉರಸ್ಯಸ್ತಿ ದ್ವಿತೀಯೋಽಪಿ ತಯೋಶ್ಚೈತತ್ಫಲಂ ವಿದುಃ ॥ ೨೦೫

೨೦೬ ಈ ಮಾತನ್ನು ಹೇಳುತ್ತಿದ್ದಂತೆಯೇ ಅವಳ ಸೋದರನು ತಂದೆಯ ಅನುಮತಿಯನ್ನು ಪಡೆದು ಅವಳ ಎದೆಭಾಗವನ್ನು ತೋರಿದಾಗ ಅಲ್ಲಿ ತಿಲಕವು ಕಾಣಿಸಿತು.

೨೦೭–೨೦೮. ಇದರಿಂದ ವಿಸ್ಮಿತನಾದ ಅಗ್ನಿದತ್ತನು ಗುಣಶರ್ಮನನ್ನು ಕುರಿತು, "ನೀನು ಸರ್ವಜ್ಞನೇ ಸರಿ. ಈಕೆಗಿರುವ ಎರಡು ತಿಲಕಗಳು ಅಶುಭಸೂಚಕವೇನಲ್ಲವಲ್ಲ! ಪ್ರಾಯಶಃ ಭರ್ತನು ಶ್ರೀಮಂತನಾಗಿದ್ದರೆ ಪತ್ನಿಗೆ ಸಪತ್ನಿಯರು ಇರುತ್ತಾರೆ. ದರಿದ್ರನಾದವನು ಒಬ್ಬಳನ್ನೇ ಕಷ್ಟದಿಂದ ಸಾಕುತ್ತಾನೆ. ಇನ್ನು ಅನೇಕರನ್ನೆಲ್ಲಿ ಕಟ್ಟಿಕೊಂಡಾನು ?' ಎಂದನು.

೨೦೯. ಅದನ್ನು ಕೇಳಿ ಗುಣಶರ್ಮನು ಹೇಳಿದನು. "ಸ್ವಾಮಿ ನೀವು ಹೇಳಿದ್ದು ನಿಜ. ಸಲ್ಲಕ್ಷಣವತಿಯಾದ ಈಕೆಯಿಂದ ಅಶುಭವೆಲ್ಲಿಯದು ?'

೨೧೦. ಅದೇ ಪ್ರಸಂಗದಲ್ಲಿ ಅಗ್ನಿದತ್ತನು ಸ್ತ್ರೀಪುರುಷರ ಒಂದೊಂದು ಅಂಗಗಳಲ್ಲೂ ಇರುವ ತಿಲಕವು ಯಾವ್ಯಾವ ಫಲಗಳನ್ನು ನೀಡುತ್ತದೆ ಎಂದು ಕೇಳಿ ಉತ್ತರವನ್ನು ಪಡೆದುಕೊಂಡನು.

೨೧೧. ಆ ಸುಂದರಿಯಾದ ಕನ್ಯೆಯು ಗುಣಶರ್ಮನನ್ನು ನೋಡಿದೊಡನೆಯೇ ಚಕೋರಿಯು ಚಂದ್ರನನ್ನೋ ಎಂಬಂತೆ ದೃಷ್ಟಿಯಿಂದಲೇ ಕುಡಿದು ಬಿಡುವಂತೆ ಬಯಕೆಗೊಂಡಳು.

---

ಏವಂ ತೇನೋದಿತೇ ತಸ್ಯಾ ಭ್ರಾತಾ ಪಿತುರನುಜ್ಞಯಾ ।
ಉದ್ಘಾಟಯತ್ಯುರೋ ಯಾವತ್ತಾವತ್ತಿಲಕಮೈಕ್ಷತ ॥ ೨೦೬
ತತೋಽಗ್ನಿದತ್ತಃ ಸಾಶ್ಚರ್ಯೋ ಗುಣಶರ್ಮಾಣಮಭ್ಯಧಾತ್ ।
ಸರ್ವಜ್ಞಸ್ತ್ವಮಿಮೌ ತ್ವಸ್ಯಾಸ್ತಿಲಕೌ ನಾಶುಭಪ್ರದೌ ॥ ೨೦೭
ಸಪತ್ನ್ಯೋ ಹಿ ಭವಂತೀಹ ಪ್ರಾಯಃ ಶ್ರೀಮತಿ ಭರ್ತರಿ ।
ದರಿದ್ರೋ ಬಿಭೃಯಾದೇಕಾಮಪಿ ಕಷ್ಟಂ ಕುತೋ ಬಹೂಃ ॥ ೨೦೮
ತಚ್ಛ್ರುತ್ವಾ ಗುಣಶರ್ಮಾ ತಂ ಪ್ರತ್ಯುವಾಚ ಯಥಾತ್ಥ ಭೋಃ ।
ಸುಲಕ್ಷಣಾಯಾ ಈದೃಶ್ಯಾ ಹ್ಯಾಕೃತೇರಶುಭಂ ಕುತಃ ॥ ೨೦೯
ಇತ್ಯೂಚಿವಾನ್ಪ್ರಸಂಗೇನ ಪೃಷ್ಟಸ್ತೇನ ಶಶಂಸ ಸಃ ।
ಪ್ರತ್ಯಂಗಂ ತಿಲಕಾದೀನಾಂ ಫಲಂ ಸ್ತ್ರೀಪುಂಸಯೋಃ ಪೃಥಕ್ ॥ ೨೧೦
ತದಾ ಚ ಗುಣಶರ್ಮಾಣಂ ತಂ ಸಾ ದೃಷ್ಟ್ವೈವ ಸುಂದರೀ ।
ಇಯೇಷ ಪಾತುಂ ದೃಷ್ಟ್ಯೈವ ಚಕೋರೀವೇಂದುಮುತ್ಸುಕಾ ॥ ೨೧೧

೨೧೨–೨೧೪ ಅನಂತರ, ಏಕಾಂತದಲ್ಲಿ ಅಗ್ನಿದತ್ತನು ಗುಣಶರ್ಮನೊಡನೆ 'ಮಹಾಭಾಗನೇ, ಈ ನನ್ನ ಕನ್ಯೆಯನ್ನು ನಿನಗೆ ಮದುವೆ ಮಾಡಿಕೊಡುತ್ತೇನೆ. ನೀನೆಲ್ಲೂ ಬೇರೆ ಕಡೆ ಹೋಗುವುದು ಬೇಡ, ನನ್ನ ಮನೆಯಲ್ಲೇ ಸುಖವಾಗಿರು' ಎಂದನು. ಅದನ್ನು ಕೇಳಿ ಗುಣಶರ್ಮನು, 'ನಿಜ ಹಾಗಾದರೆ ನನಗೆ ಒದಗಿಬಾರದ ಸೌಖ್ಯವೇ ಇಲ್ಲ. ಎಲ್ಲವೂ ಬರುತ್ತದೆ. ಆದರೆ ರಾಜನ ಕಡೆಯಿಂದಾದ ಸುಳ್ಳಿನಿಂದಾದ ಅಪಮಾನದ ಬೆಂಕಿ ನನ್ನನ್ನು ಸುಡುತ್ತಿದೆ. (ಈ ಮದುವೆ ಮತ್ತು ಮನೆಯ ಸೌಖ್ಯಗಳಿಂದ) ಅದು ನನ್ನನ್ನು ಸಂತೋಷಗೊಳಿಸುವುದಿಲ್ಲ.

೨೧೫ ಪ್ರೇಯಸಿ, ಚಂದ್ರೋದಯ, ವೀಣೆಯ ಪಂಚಮ ಧ್ವನಿ ಇತ್ಯಾದಿಗಳು ಸುಖಿಗಳಾದವರನ್ನು ಸಂತೋಷಗೊಳಿಸುತ್ತವೆ. ಹಾಗೆಯೇ ದುಃಖಿಗಳಾದವರನ್ನು ಇನ್ನೂ ಕಂಗೆಡಿಸುತ್ತವೆ.

೨೧೬ ಪತ್ನಿಯಾದವಳು ತನ್ನ ಪತಿಯಲ್ಲೇ ಮನಸ್ಸಿಟ್ಟವಳೂ ಅನುರಾಗವತಿಯೂ ಅವ್ಯಭಿಚಾರಿಣಿಯೂ ಆಗಿರಬೇಕು. ತಂದೆಯೇ ಮದುವೆ ಮಾಡಿಕೊಟ್ಟಿದ್ದರೂ ವಶಕ್ಕೆ ಬಾರದ ಅಶೋಕವತಿಯಂತೆ ಆಗಬಾರದು.

೨೧೭ ಅದೂ ಅಲ್ಲದೆ ಇಲ್ಲಿಂದ ಉಜ್ಜಯನೀ ನಗರವೂ ಹತ್ತಿರದಲ್ಲೇ ಇದೆ. ಹೇಗೋ ನಾನಿಲ್ಲಿರುವುದನ್ನು ಅರಿತು ರಾಜನು ನನಗೆ ತೊಂದರೆ ಕೊಡಬಹುದು.

---

ತತೋಽಗ್ನಿದತ್ತೋ ವಿಜನೇ ಗುಣಶರ್ಮಾಣಮಾಹ ತಮ್ ।
ಮಹಾಭಾಗ ದದಾಮ್ಯೇತಾಂ ಕನ್ಯಾಂ ತೇ ಸುಂದರೀಮಹಮ್ ॥ ೨೧೨
ಮಾ ಗಾ ವಿದೇಶಂ ತಿಷ್ಠೇಹ ಗೃಹೇ ಮಮ ಯಥಾಸುಖಮ್ ।
ಏತತ್ತದ್ವಚನಂ ಶ್ರುತ್ವಾ ಗುಣಶರ್ಮಾಪ್ಯುವಾಚ ತಮ್ ॥ ೨೧೩
ಸತ್ಯಮೇವಂ ಕೃತೇ ಕಿಂ ಕಿಂ ನ ಸೌಖ್ಯಂ ಮಮ ಕಿಂ ತು ಮಾಮ್ ।
ಮಿಥ್ಯಾರಾಜಾಪಮಾನಾಗ್ನಿತಪ್ತಂ ಪ್ರೀಣಾತಿ ನೈವ ತತ್ ॥ ೨೧೪
ಕಾಂತಾ ಚಂದ್ರೋದಯೋ ವೀಣಾಪಂಚಮಧ್ವನಿರಿತ್ಯಮೀ ।
ಯೇ ನಂದಯಂತಿ ಸುಖಿತಾನ್‌ದುಃಖಿತಾನ್‌ವ್ಯಥಯಂತಿ ತೇ ॥ ೨೧೫
ಜಾಯಾ ಚ ಸ್ವರಸಾ ರಕ್ತಾ ಭವೇದವ್ಯಭಿಚಾರಿಣೀ ।
ಅವಶಾ ಪಿತೃದತ್ತಾ ತು ಸ್ಯಾದಶೋಕವತೀ ಯಥಾ ॥ ೨೧೬
ಇತಃ ಪ್ರದೇಶಾನ್ನಿಕಟಾ ಸಾ ಕಿಂ ಚೋಜ್ಜಯಿನೀ ಪುರೀ ।
ತದ್ಬುದ್ಧ್ವಾ ಸ ನೃಪೋ ಜಾತು ಮಮ ಕುರ್ಯಾದುಪದ್ರವಮ್ ॥ ೨೧೭

೨೧೮. (ಆದ್ದರಿಂದ ಇದೆಲ್ಲ ಬೇಡ). ನಾನು ತೀರ್ಥಕ್ಷೇತ್ರಗಳನ್ನು ಸುತ್ತಿ ಜನ್ಮದಿಂದುಂಟಾದ ಪಾಪವನ್ನು ತೊಳೆದುಕೊಂಡು ಈ ಶರೀರವನ್ನು ಬಿಡುತ್ತೇನೆ. ಅದರಿಂದ ನನಗೆ ಸಂತೋಷವಾಗುತ್ತದೆ'.

೨೧೯–೨೨೦. ಹೀಗೆಂದು ಹೇಳಿದ ಗುಣಶರ್ಮನನ್ನು ನೋಡಿ ನಕ್ಕು ಅಗ್ನಿದತ್ತನು, ನಿನಗೂ ಇಂತಹ ಮತಿಭ್ರಮಣೆಯೆಂದರೆ ಇನ್ನು ಇತರರ ಮಾತೇನು? ಅಜ್ಞನಾದವನು ಮಾಡಿದ ಅಪಮಾನದಿಂದ ಶುದ್ಧ ಚಾರಿತ್ರ್ಯವುಳ್ಳ ನಿನಗೇನು ನಷ್ಟ? ಕೆಸರೆತ್ತಿ ಆಕಾಶಕ್ಕೆ ಎರಚಿದರೆ ಎರಚುವವನ ತಲೆಯ ಮೇಲೆಯೇ ಬೀಳುವುದಲ್ಲವೆ ?

೨೨೧. ಅವಿವೇಕದಿಂದ ಮಾಡಿದ ಕಾರ್ಯದ ಫಲವನ್ನು ರಾಜನು ಶೀಘ್ರದಲ್ಲೇ ಅರಿಯುತ್ತಾನೆ. ಮೋಹಾಂಧನಾದ ತಿಳಿಗೇಡಿಯಲ್ಲಿ ಸಿರಿಯು ಬಹುಕಾಲ ಉಳಿಯುವುದಿಲ್ಲ.

---

ತತ್ಪರಿಭ್ರಮ್ಯ ತೀರ್ಥಾನಿ ಪ್ರಕ್ಷಾಲ್ಯಾಜನ್ಮಕಿಲ್ಬಿಷಮ್ ।
ಶರೀರಮೇತತ್ತ್ಯಕ್ಷ್ಯಾಮಿ ಭವಿಷ್ಯಾಮ್ಯಥ ನಿರ್ವೃತಃ ॥ ೨೧೮
ಇತ್ಯುಕ್ತವಂತಂ ಪ್ರತ್ಯಾಹ ಸೋಽಗ್ನಿದತ್ತೋ ವಿಹಸ್ಯ ತಮ್ ।
ತವಾಪಿ ಮೋಹೋ ಯತ್ರೇದೃಕ್ತತ್ರಾನ್ಯಸ್ಯ ಕಿಮುಚ್ಯತಾಮ್ ॥ ೨೧೯
ಅಜ್ಞಾವಮಾನಾದ್ಧಾನಿಃ ಕಾ ವದ ಶುದ್ಧಾಶಯಸ್ಯ ತೇ ।
ಪಂಕೋ ಹಿ ನಭಸಿ ಕ್ಷಿಪ್ತಃ ಕ್ಷೇಪ್ತುಃ ಪತತಿ ಮೂರ್ಧನಿ ॥ ೨೨೦
ರಾಜೈವ ಸೋಽಚಿರಾತ್ತಾಪ್ಸ್ಯತ್ಯವಿಶೇಷಜ್ಞತಾಫಲಮ್ ।
ಮೋಹಾಂಧಮವಿವೇಕಂ ಹಿ ಶ್ರೀಶ್ಚಿರಾಯ ನ ಸೇವತೇ ॥ ೨೨೧

೨೨೨–೨೨೪. ಏನು, ಅಶೋಕವತಿಯನ್ನು ನೋಡಿ ಎಲ್ಲ ಹೆಂಗಸರಲ್ಲೂ ನಿನಗೆ ವೈರ ಉಂಟಾಗಿದೆಯೆ ? ಸತಿಯ ಲಕ್ಷಣವನ್ನು ನೋಡಿ ಆಕೆಯಲ್ಲಿನ ಶ್ರದ್ಧೆಯನ್ನು ತಿಳಿಯಲಾರೆಯಾ ? ಉಜ್ಜಯಿನಿ ಎಷ್ಟು ಹತ್ತಿರದಲ್ಲೇ ಇದ್ದರೂ ಕೂಡ ನಿನಗೆ ಹೆಣ್ಣು ಕೊಡುತ್ತೇನೆ. ನೀನಿಲ್ಲಿರುವುದನ್ನು ಯಾರೂ ತಿಳಿಯಲಾರರು. ನಿನಗೆ ತೀರ್ಥಯಾತ್ರೆಯೇ ಇಷ್ಟವಾದರೆ ಅದನ್ನೇ ಮಾಡಬಹುದು. ಆದರೆ ಕರ್ಮಾನುಷ್ಠಾನ ಮಾಡಬೇಕಾದ ವೈದಿಕನು ತೀರ್ಥಯಾತ್ರೆ ಮಾಡುತ್ತ ಕಾಲಯಾಪನೆ ಮಾಡಿದರೆ ಆತನಿಗೆ ಸಂಪತ್ತು ಸಮೃದ್ಧಿಗಳು ದೊರೆಯಲಾರವು.

೨೨೫. ಮನೆಯಲ್ಲೇ ವಿಹಿತವಾದ ದೇವ, ಪಿತೃ, ಅಗ್ನಿ ಕ್ರಿಯೆಗಳನ್ನೂ ವ್ರತ, ಜಪಾದಿಗಳನ್ನೂ ಮಾಡಿದರೆ ಸಿಗುವ ಪುಣ್ಯವು ನಿತ್ಯ ಅಲೆಯುವವನಿಗೆ ಎಲ್ಲಿಂದ ಬರಬೇಕು ?

೨೨೬–೨೨೭. ತೋಳನ್ನೇ ದಿಂಬಾಗಿಸಿಕೊಂಡು ಭಿಕ್ಷೆಯನ್ನುಣ್ಣುತ್ತ ನಿರ್ಗತಿಕನಾಗಿ ನೆಲದ ಮೇಲೆ ಮಲಗಿ ತಪಸ್ವಿಯಂತೆ ಬಾಳಿದರೂ ದಾರಿಹೋಕನಿಗೆ ಕಷ್ಟಗಳು ತಪ್ಪಿದ್ದಲ್ಲ. ದೇಹತ್ಯಾಗದಿಂದ ಸುಖವೆಂದುಕೊಂಡಿದ್ದರೆ ಅದು ನಿನ್ನ ಭ್ರಮೆ. ಆತ್ಮಘಾತಿಗಳಿಗೆ ಮುಂದೆ (ಪರಲೋಕದಲ್ಲಿ) ಇಲ್ಲಿಗಿಂತ ಹೆಚ್ಚಿನ ಕಷ್ಟ ಉಂಟಾಗುತ್ತದೆ.

---

ಕಿಂ ಚಾಶೋಕವತೀಂ ದೃಷ್ಟ್ವಾ ವೈರಸ್ಯಂ ಸ್ತ್ರೀಷು ಚೇತ್ತವ ।
ಸತೀಂ ದೃಷ್ಟ್ವಾ ನ ಕಿಂ ತಾಸು ಶ್ರದ್ಧಾ ವೇತ್ಸಿ ಚ ಲಕ್ಷಣಾಮ್ ॥ ೨೨೨
ನಿಕಟೋಜ್ಜಯಿನೀ ವಾ ಚೇತ್ತವ ದಾಸ್ಯಾಮ್ಯಹಂ ತಥಾ ।
ಯಥಾ ತ್ವಾಮಿಹ ತಿಷ್ಠಂತಂ ನೈವ ಜ್ಞಾಸ್ಯತಿ ಕಶ್ಚನ ॥ ೨೨೩
ತೀರ್ಥಯಾತ್ರಾ ತವೇಷ್ಟಾ ವಾ ತಚ್ಛ್ರಸ್ತಾ ತಸ್ಯ ಸಾ ಬುಧೈಃ ।
ಸಂಪತ್ತೀರ್ವಿಧಿವನ್ನ ಸ್ಯಾದ್ವೈದಿಕೇ ಯಸ್ಯ ಕರ್ಮಣಿ ॥ ೨೨೪
ಅನ್ಯಥಾ ದೇವಪಿತ್ರಾಗ್ನಿ ಕ್ರಿಯಾವ್ರತಜಪಾದಿಭಿಃ ।
ಗೃಹೇ ಯಾ ಪುಣ್ಯನಿಷ್ಪತ್ತಿಃ ಸಾಧ್ವನಿ ಭ್ರಮತಃ ಕುತಃ ॥ ೨೨೫
ಭುಜೋಪಧಾನೋ ಭೂಶಾಯೀ ಭಿಕ್ಷಾಶೀ ಕೇವಲೋಽಧನಃ ।
ಮುನೇಃ ಸಮತ್ವಂ ಪ್ರಾಪ್ಯಾಪಿ ನ ಕ್ಲೇಶೈರ್ಮುಚ್ಯತೇಽಧ್ವಗಃ ॥ ೨೨೬
ದೇಹತ್ಯಾಗಾತ್ಸುಖಂ ಯದ್ವಾ ವಾಂಛಸ್ಯೇಷ ತವ ಭ್ರಮಃ ।
ಇತಃ ಕಷ್ಟತರಂ ದುಃಖಮಮುತ್ರ ಹ್ಯಾತ್ಮಘಾತಿನಾಮ್ ॥ ೨೨೭

೨೨೮–೨೨೯. ಯುವಕನೂ, ವಿದ್ವಾಂಸನೂ ಆದ ನಿನಗೆ ಈ ಮೋಹ ಮುತ್ತಿಕೊಂಡಿರುವುದು ಸರ್ವಥಾ ಸರಿಯಲ್ಲ. ನೀನೇ ಯೋಚಿಸು. ನಾನು ಹೇಳಿದಂತೆ ನೀನು ಮಾಡು. ನಿನಗಾಗಿ ನೆಲಮಾಳಿಗೆಯಲ್ಲಿ ಸುಂದರವಾದ ಮನೆಯನ್ನು ಕಟ್ಟಿಸುತ್ತೇನೆ. ಸುಂದರಿಯನ್ನು ಮದುವೆಯಾಗಿ ಅಜ್ಞಾತನಾಗಿ ಸುಖವಾಗಿ ಅಲ್ಲಿದ್ದುಬಿಡು.

೨೩೦. ಹೀಗೆಂದು ಅಗ್ನಿದತ್ತನು ಪ್ರಯತ್ನಪೂರ್ವಕವಾಗಿ ಬೋಧಿಸಿದ ಮೇಲೆ, "ಆಗಲೆಂದು' ಒಪ್ಪಿದ ಗುಣಶರ್ಮನು ಅವನಿಗೆ ಇಂತೆಂದನು.

೨೩೧–೨೩೨. "ನಿನ್ನ ಮಾತಿನಂತೆ ನಡೆಯುವೆ. ಸುಂದರಿಯು ಭಾರ್ಯೆಯಾಗಿ ದೊರಕುವುದಾದರೆ ಯಾವನು ತಾನೆ ಬೇಡವೆನ್ನುತ್ತಾನೆ ? ಆದರೆ, ಒಂದು ಮಾತು. ನಾನು ಕೃತಕೃತ್ಯನಾಗದೆ ನಿನ್ನ ಪುತ್ರಿಯನ್ನು ಪರಿಗ್ರಹಿಸಲಾರೆ. ನಾನು ನಿಯಮದಿಂದಿದ್ದು ದೇವತೆಯನ್ನು ಆರಾಧಿಸಿ, ಒಲಿಸಿಕೊಂಡು ತನ್ಮೂಲಕ ಕೃತಘ್ನನಾದ ಆ ರಾಜನಿಗೆ ತಕ್ಕ ಶಾಸ್ತಿಯನ್ನು ಮಾಡಬೇಕು'

೨೩೩. ಗುಣಶರ್ಮನ ಈ ಮಾತನ್ನು ಕೇಳಿ ಸಂತುಷ್ಟನಾದ ಅಗ್ನಿದತ್ತನು ಅದಕ್ಕೆ ಒಪ್ಪಿದನು. ಗುಣಶರ್ಮನು ನಿರಾಳನಾಗಿ ಅಂದಿನ ರಾತ್ರಿಯನ್ನು ನೆಮ್ಮದಿಯಿಂದ ಕಳೆದನು.

---

ತದೇಷೋಽನುಚಿತೋ ಮೋಹ ಯೂನಶ್ಚ ವಿದುಷಶ್ಚ ತೇ ।
ಸ್ವಯಂ ವಿಚಾರಯಾವಶ್ಯಂ ಕರ್ತವ್ಯಂ ಮದ್ವಚಸ್ತವ ॥ ೨೨೮
ಕಾರಯಾಮೀಹ ಗುಪ್ತಂ ತೇ ಭೂಗೃಹಂ ಪೃಥು ಸುಂದರಮ್ ।
ವಿವಾಹ್ಯ ಸುಂದರೀಂ ತತ್ರ ತಿಷ್ಠಾಜ್ಞಾತೋ ಯಥೇಚ್ಛಸಿ ॥ ೨೨೯
ಇತಿ ತೇನಾಗ್ನಿದತ್ತೇನ ಬೋಧಿತಃ ಸ ಪ್ರಯತ್ನತಃ ।
ಗುಣಶರ್ಮಾ ತಥೇತ್ಯೇತತ್ಪ್ರತಿಪದ್ಯ ಜಗಾದ ತಮ್ ॥ ೨೩೦
ಕೃತಂ ಮಯಾ ತೇ ವಚನಂ ಕೋ ಭಾರ್ಯಾಂ ಸುಂದರೀಂ ತ್ಯಜೇತ್ ।
ಕಿಂ ತ್ವೇತಾಮಕೃತೀ ನಾಹಂ ಪರಿಣೇಷ್ಯಾಮಿ ತೇ ಸುತಾಮ್ ॥ ೨೩೧
ಆರಾಧಯಾಮ್ಯಹಂ ತಾವದ್ದೇವಂ ಕಂಚಿತ್ಸುಸಂಯತಃ ।
ಯೇನ ತಸ್ಯ ಕೃತಘ್ನಸ್ಯ ರಾಜ್ಞಃ ಕುರ್ಯಾಂ ಪ್ರತಿಕ್ರಿಯಾಮ್ ॥ ೨೩೨
ಇತಿ ತದ್ವಚನಂ ಹೃಷ್ಟಃ ಸೋಽಗ್ನಿದತ್ತೋಽನ್ವಮನ್ಯತ ।
ಸೋಽಪಿ ತಾಂ ಗುಣಶರ್ಮಾತ್ರ ವಿಶಶ್ರಾಮ ಸುಖಂ ನಿಶಾಮ್ ॥ ೨೩೩

೨೩೪. ಮರುದಿನವೇ ಅಗ್ನಿದತ್ತನು ಗುಣಶರ್ಮನ ಅನುಕೂಲಕ್ಕಾಗಿ ನೆಲಮಾಳಿಗೆಯ ಮನೆಯೊಂದನ್ನು ಕಟ್ಟಿಸಲು ತೊಡಗಿದನು. ಅದು ಪಾತಾಲ ವಸತಿಯಂತೆ ಗುಪ್ತವಾಗಿದ್ದಿತು.

೨೩೫–೨೩೬. ಅಲ್ಲಿ ನೆಲೆಗೊಂಡ ಗುಣಶರ್ಮನು ಅಗ್ನಿ ದತ್ತನನ್ನು ಕುರಿತು ಗುಟ್ಟಿನಲ್ಲಿ ಹೇಳಿದನು, "ಇಲ್ಲಿದ್ದುಕೊಂಡು ಭಕ್ತಿಯಿಂದ ಯಾವ ದೇವತೆಯನ್ನು ಯಾವ ಮಂತ್ರದಿಂದ ಆರಾಧಿಸಲಿ, ವರ ನೀಡುವ ದೇವನಾರು ?'

೨೩೭ ಆಗ ಆ ಧೀರನನ್ನು ಕುರಿತು ಅಗ್ನಿದತ್ತನು ಇಂತೆಂದನು, "ನನಗೆ ಗುರೂಪದೇಶ ದಿಂದ ದೊರಕಿರುವ ಕುಮಾರಸ್ವಾಮಿಯ ಮಂತ್ರ ತಿಳಿದಿದೆ. ತಾರಕಾಂತಕನಾದ ಸೇನಾನಿಯನ್ನು ಆ ಮಂತ್ರದಿಂದ ನೀನು ಆರಾಧಿಸು.

೨೩೮. ಇವನ ಜನ್ಮವನ್ನಪೇಕ್ಷಿಸಿ ಶತ್ರುಪೀಡಿತರಾದ ದೇವತೆಗಳು ಕಾಮನನ್ನು ಕಳುಹಿಸಿದರು. ಕಾಮನು ಭಸ್ಮೀಭೂತನಾದರೂ ಶರ್ವನ ಸಂಕಲ್ಪಮಾತ್ರದಿಂದಲೇ ಪುನಃ ಜೀವಿಸಿದನು.

---

ಅನ್ಯೇದ್ಯುಶ್ಚಾಗ್ನಿದತ್ತೋಽಸ್ಯ ಸೌಖ್ಯಾರ್ಥಂ ತತ್ರ ಗುಪ್ತಿಮತ್ ।
ಪಾತಾಲವಸತಿಪ್ರಖ್ಯಂ ಕಾರಯಾಮಾಸ ಭೂಗೃಹಮ್ ॥ ೨೩೪
ತತ್ರಸ್ಥಶ್ಚಾಗ್ನಿದತ್ತಂ ಸ ಗುಣಶರ್ಮಾ ಬ್ರವೀದ್ರಹಃ ।
ಇಹಾಂತರ್ಬ್ರೂಹಿ ಕಂ ದೇವಂ ಕೇನ ಮಂತ್ರೇಣ ಭಕ್ತಿತಃ ॥ ೨೩೫
ಆರಾಧಯಾಮ್ಯಹಂ ತಾವದ್ವರದಂ ವ್ರತಚರ್ಯಯಾ ।
ಇತ್ಯುಕ್ತವಂತಂ ತಂ ಧೀರಮಗ್ನಿದತ್ತೋಽಭ್ಯಭಾಷತ ॥ ೨೩೬
ಅಸ್ತಿ ಸ್ವಾಮಿಕುಮಾರಸ್ಯ ಮಂತ್ರೋ ಮೇ ಗುರುಣೋದಿತಃ ।
ತೇನಾರಾಧಯ ತಂ ದೇವಂ ಸೇನಾನ್ಯಂ ತಾರಕಾಂತಕಮ್ ॥ ೨೩೭
ಯಸ್ಯ ಜನ್ಮಾರ್ಥಿಭಿರ್ದೇವೈಃ ಪ್ರೇಷಿತಃ ಶತ್ರುಪೀಡಿತೈಃ ।
ದಗ್ಧೋಽಪಿ ಕಾಮಃ ಸಂಕಲ್ಪಜನ್ಮಾ ಶರ್ವೇಣ ನಿರ್ಮಿತಃ ॥ ೨೩೮

೨೩೯–೨೪೧. ಮಹೇಶ್ವರನಿಂದ ಅಗ್ನಿಕುಂಡಕ್ಕೂ, ಅಲ್ಲಿಂದ ಜೊಂಡು ಹುಲ್ಲಿಗೂ ಸಂಕ್ರಮಿಸಿ ಮತ್ತೆ ಅಲ್ಲಿಂದ ಕೃತ್ತಿಕೆಯರಿಂದಲೂ ಹುಟ್ಟಿದನೆಂದು ಯಾರ ಹುಟ್ಟನ್ನು ಆಶ್ಚರ್ಯಕರವಾದ ರೀತಿಯಲ್ಲಿ ಹೇಳುತ್ತಾರೋ, ಯಾರು ಹುಟ್ಟಿದ ಮಾತ್ರದಿಂದಲೇ ಇಡೀ ಜಗತ್ತನ್ನು ತಡೆಯಲಾರದ ತೇಜಸ್ಸಿನಿಂದ ಆನಂದಗೊಳಿಸಿ, ದುರ್ಜಯ ನೆನಿಸಿದ್ದ ತಾರಕಾಸುರನನ್ನು ಕೊಂದನೋ ಆ ಕುಮಾರನ ಮಂತ್ರವನ್ನು ನನ್ನಿಂದ ಸ್ವೀಕರಿಸು', ಎಂದು ಹೇಳಿ ಅಗ್ನಿದತ್ತನು ಗುಣಶರ್ಮನಿಗೆ ಆ ಮಂತ್ರೋಪದೇಶವನ್ನು ಮಾಡಿದನು.

೨೪೨. ಗುಣಶರ್ಮನು (ಆ ಮಂತ್ರವನ್ನು ಗ್ರಹಿಸಿ) ಭೂಗೃಹದಲ್ಲಿಯೇ ಇದ್ದುಕೊಂಡು ಸ್ಕಂದನನ್ನು ಆರಾಧಿಸಿದನು. ನಿಯಮವ್ರತಗಳನ್ನು ಪಾಲಿಸುತ್ತಿದ್ದ ಆತನನ್ನು ಸುಂದರಿಯು ಉಪಚರಿಸಿದಳು.

೨೪೩. ನಂತರ ಪ್ರತ್ಯಕ್ಷನಾದ ಷಣ್ಮುಖದೇವನು, "ಪುತ್ರನೇ, ನಾನು ಸಂತುಷ್ಟನಾಗಿದ್ದೇನೆ. ವರವನ್ನು ಬೇಡಿಕೋ' ಎಂದು ಆದೇಶಿಸಿದನು.

*

---

ಮಹೇಶ್ವರಾದಗ್ನಿಕುಂಡಾದಗ್ನೇಃ ಶರವಣಾದಪಿ ।
ಕೃತ್ತಿಕಾಭ್ಯಶ್ಚ ಶಂಸಂತಿ ವಿಚಿತ್ರಂ ಯಸ್ಯ ಸಂಭವಮ್ ॥ ೨೩೯
ಜಾತೇನೈವ ಜಗತ್ಕೃತ್ಸ್ನಂ ದುಷ್ಪ್ರಧರ್ಷೇಣ ತೇಜಸಾ ।
ಆನಂದ್ಯ ಯೇನ ನಿಹತೋ ದುರ್ಜಯಸ್ತಾರಕಾಸುರಃ ॥ ೨೪೦
ತನ್ಮಂತ್ರಮಿಮಮಾದತ್ಸ್ವ ಮತ್ತ ಇತ್ಯಭಿಧಾಯ ಸಃ ।
ಅಗ್ನಿದತ್ತೋ ದದೌ ತಸ್ಮೈ ಮಂತ್ರಂ ತಂ ಗುಣಶರ್ಮಣೇ ॥ ೨೪೧
ತೇನಾರಾಧಿತವಾನ್ಸ್ಕಂದಂ ಗುಣಶರ್ಮಾ ಸ ಭೂಗೃಹೇ ।
ತಯೋಪಚರ್ಯಮಾಣಃ ಸನ್ ಸುಂದರ್ಯಾ ನಿಯತವ್ರತಃ ॥ ೨೪೨
ತತಃ ಪ್ರತ್ಯಕ್ಷತಾಮೇತ್ಯ ಸಾಕ್ಷಾದ್ದೇವಃ ಸ ಷಣ್ಮುಖಃ ।
ತುಷ್ಟೋಽಸ್ಮಿ ತೇ ವರಂ ಪುತ್ರ ವೃಣೀಷ್ವೇತಿ ತಮಾದಿಶತ್ ॥ ೨೪೩

---

* ೨೪೪ನೆಯ ಶ್ಲೋಕ ಇಲ್ಲ.

೨೪೫-೨೪೬. "ಸಮೃದ್ಧವಾದ ಕೋಶವುಳ್ಳವನಾಗಿ ಮಹಾಸೇನನನ್ನು ಜಯಿಸಿ ಯಾರ ಅಡೆತಡೆಯನ್ನು ಲೆಕ್ಕಿಸದೆ ಪೃಥ್ವಿಯಲ್ಲಿ ರಾಜ್ಯಭಾರ ಮಾಡುವೆ' ಎಂಬ ದೊಡ್ಡ ವರವನ್ನು ಕೊಟ್ಟು ಸ್ಕಂದನು ಅದೃಶ್ಯನಾದನು. ಗುಣಶರ್ಮನೂ ಕೂಡ ಅಕ್ಷಯವಾದ ಕೋಶವನ್ನು ಪಡೆದನು.

೨೪೭ ಸಮೃದ್ಧಿಯನ್ನು ಪಡೆದ ಪುಣ್ಯಶಾಲಿಯಾದ ಗುಣಶರ್ಮನು ದಿನಕಳೆದಂತೆ ತನ್ನ ಅನುರಾಗವು ಹೆಚ್ಚುತ್ತಿದ್ದ ಹಾಗೂ ತನ್ನ ಮನೋರಥಗಳ ಸಿದ್ಧಿಯಂತೆ ಕಾಯುತ್ತಿದ್ದ ರೂಪವತಿಯಾದ ಅಗ್ನಿದತ್ತನ ಪುತ್ರಿಯನ್ನು ವಿಧಿವತ್ತಾಗಿ ಮದುವೆಯಾದನು.

೨೪೮. ಅಪಾರವಾದ ಕೋಶದಿಂದ ಉಂಟಾದ ಪ್ರಭಾವದಿಂದ ಬಹುಸಂಖ್ಯೆಯ ಗಜ, ತುರಗ, ಪದಾತಿಗಳನ್ನು ಪಡೆದುಕೊಂಡ ಗುಣಶರ್ಮನು ದಾನದಿಂದಲೂ, ಅನುಗ್ರಹ ನೀಡುವುದರಿಂದಲೂ ಅನೇಕ ರಾಜರನ್ನು ಸೇರಿಸಿಕೊಂಡು ಭೂಮಿಯನ್ನೇ ಆವರಿಸಿಕೊಂಡಂತಹ ದೊಡ್ಡ ಸೇನಾ ಬಲದಿಂದ ಕೂಡಿ, ಉಜ್ಜಯಿನಿಯನ್ನು ಮುತ್ತಿದನು.

---

ಅಕ್ಷೀಣಕೋಷೋ ಭೂತ್ವಾ ತ್ವಂ ಮಹಾಸೇನಂ ವಿಜಿತ್ಯ ಚ ।
ಗತ್ವಾಪ್ರತಿಹತಃ ಪುತ್ರ ಪೃಥ್ವೀರಾಜ್ಯಂ ಕರಿಷ್ಯಸಿ ॥ ೨೪೫
ಇತಿ ದತ್ತ್ವಾಧಿಕಂ ತಸ್ಮೈ ವರಂ ಸ್ಕಂದಸ್ತಿರೋದಧೇ ।
ಸಂಪ್ರಾಪ್ತಾಕ್ಷಯಕೋಶಶ್ಚ ಗುಣಶರ್ಮಾಪಿ ಸೋಽಭವತ್ ॥ ೨೪೬
ಋದ್ಧ್ಯಾ ತತಃ ಸ್ವಮಹಿಮೋಚಿತಯಾಗ್ನಿದತ್ತ
ವಿಪ್ರಾತ್ಮಜಾಮನುದಿನಾಧಿಕಬದ್ಧಭಾವಾಮ್ ।
ಭಾವ್ಯರ್ಥಸಿದ್ಧಿಮಿವ ರೂಪವತೀಮುಪೇತಾಂ
ತಾಂ ಸುಂದರೀಂ ಸ ಸುಕೃತೀ ವಿಧಿನೋಪಯೇಮೇ ॥ ೨೪೭
ಅಕ್ಷೀಣಕೋಷನಿಚಯಪ್ರಭವಪ್ರಭಾವಾತ್
ಸಂಭೂತಭೂರಿಗಜವಾಜಿಪದಾತಿಸೈನ್ಯಃ ।
ದಾನಪ್ರಸಾದಮಿಲಿತಾಖಿಲಪಾರ್ಥಿವಾನಾಂ
ರುನ್ಧನ್ಬಲೈರವನಿಮುಜ್ಜಯಿನೀಂ ಜಗಾಮ ॥ ೨೪೮

೨೯. ಅಲ್ಲಿ ಅಶೋಕವತಿಯ ಕೆಟ್ಟ ನಡತೆಯನ್ನು ಪ್ರಜೆಗಳಲ್ಲಿ ಪ್ರಚಾರಗೊಳಿಸಿ ಯುದ್ಧದಲ್ಲಿ ಮಹಾಸೇನರಾಜನನ್ನು ಗೆದ್ದು ರಾಜ್ಯದಿಂದ ಓಡಿಸಿ ರಾಜ್ಯವನ್ನು ಪಡೆದನು.

೩೦. ಇನ್ನೂ ಅನೇಕ ರಾಜ ಕನ್ಯೆಯರನ್ನು ವಿವಾಹವಾಗಿ, ಸಮುದ್ರತಟದವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿ, ಪತ್ನಿಯಾದ ಸುಂದರಿಯೊಡನೆ ಇಷ್ಟವಾದ ಭೋಗಗಳನ್ನು ಗುಣಶರ್ಮ ಸಾಮ್ರಾಟನು ಬಹಳ ಕಾಲ ಅನುಭವಿಸಿದನು.

೩೧. ಹೀಗೆ ವ್ಯಕ್ತಿ ವಿಶೇಷಗಳ ಅಂತಸ್ಸತ್ತ್ವವನ್ನು ತಿಳಿಯದ ಮೂಢನಾದ ಮಹಾಸೇನರಾಜನು ಮಹಾವಿಪತ್ತಿಗೀಡಾದನು. ಹಾಗೆಯೇ ಧೈರ್ಯವೊಂದನ್ನೇ ಸಹಾಯವೆಂದು ತಿಳಿದ ಗುಣಶರ್ಮನು ಸರ್ವತೋಮುಖವಾದ ಏಳ್ಗೆಯನ್ನು ಪಡೆದನು.

---

ಪ್ರಖ್ಯಾಪ್ಯ ತಸ್ಯಾಂ ತದಶೋಕವತ್ಯಾಃ
ಪ್ರಜಾಸ್ವಶೀಲಂ ಸಮರೇ ಚ ಭೂಪಮ್ ।
ಜಿತ್ವಾ ಮಹಾಸೇನಮಪಾಸ್ಯ ರಾಜ್ಯಾತ್
ಪೃಥ್ವೀಪತಿತ್ವಂ ಸ ಸಮಾಸಸಾದ ॥ ೨೯

ಅನ್ಯಾಶ್ಚ ಕನ್ಯಾಃ ಪರಿಣೀಯ ರಾಜ್ಞಾಮ್
ಅಬ್ಧೇಸ್ತಟೇಷ್ವಪ್ಯಪರಾಜ್ಮುಖಾಜ್ಞಃ ।
ಇಷ್ಟಾನ್ಸ ಭೋಗಾನ್ಗುಣಶರ್ಮಸಮ್ರಾಟ್
ಚಿರಾಯ ಭುಂಕ್ತೇ ಸ್ಮ ಸಸುಂದರೀಕಃ ॥ ೩೦

ಇತಿ ಪುರುಷವಿಶೇಷಾಜ್ಞಾನತೋ ಮೂಢಬುದ್ಧಿಃ
ಸಪದಿ ವಿಪದಮಾಪ ಪ್ರಾಜ್ಮಹಾಸೇನಭೂಪಃ ।
ಇತಿ ಚ ಸ ಗುಣಶರ್ಮಾ ಧೈರ್ಯಮೇಕಂ ಸಹಾಯಂ
ಕೃತಮತಿರವಲಂಬ್ಯ ಪ್ರಾಪ್ತವಾನೃದ್ಧಿಮಗ್ರ್ಯಾಮ್ ॥ ೩೧

೨೫೭. ಇಂಥಹ ಸ್ವಾರಸ್ಯಕರವಾದ ಕಥೆಯನ್ನು ತನ್ನ ಸಚಿವನಾದ ವೀತಭೀತಿಯಿಂದ ಕೇಳಿದ ವೀರನಾದ ಸೂರ್ಯಪ್ರಭನಿಗೆ ಮಹಾ ಸಾಗರದಂತಿರುವ ಸಮರವನ್ನು ದಾಟಲು ಹೆಚ್ಚಿನ ಉತ್ಸಾಹ ಉಂಟಾಯಿತು. ಅಂತೆಯೇ ಅವನಿಗೆ ನಿಧಾನವಾಗಿ ನಿದ್ರೆ ಹತ್ತಿತು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಸೂರ್ಯಪ್ರಭಲಂಬಕದಲ್ಲಿ ಆರನೆಯ ತರಂಗವು ಮಗಿಯಿತು.

---

ಏವಂ ಕಥಾಂ ಸ್ವಸಚಿವಸ್ಯ ಮುಖಾದುದಾರಾಂ
ಸೂರ್ಯಪ್ರಭೋ ನಿಶಿ ನಿಶಮ್ಯ ಸ ವೀತಭೀತೇಃ ।
ವೀರೋ ಮಹಾಸಮರಸಾಗರಮುತ್ತಿತೀರ್ಷುಃ
ಉತ್ಸಾಹಮಭ್ಯಧಿಕಮಾಪ ಶನೈಶ್ಚ ಶಿಶ್ಯೇ ॥ ೨೫೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಸೂರ್ಯಪ್ರಭಲಂಬಕೇ ಷಷ್ಠಸ್ತರಂಗಃ

## ಏಳನೆಯ ತರಂಗ

೧ ಸೂರ್ಯಪ್ರಭನು ಬೆಳಿಗ್ಗೆ ಎದ್ದು ಸಚಿವರು ಹಾಗು ದಾನವಬಲದೊಡನೆ ಕೂಡಿ ಯುದ್ಧಭೂಮಿಗೆ ತೆರಳಿದನು.

೨. ಶ್ರುತಶರ್ಮನೂ ವಿದ್ಯಾಧರಬಲದೊಡನೆ ಯುದ್ಧಕ್ಕೆ ಬಂದನು. ದೇವಾಸುರಾದಿಗಳೂ ಮತ್ತೆ ಈ ಅದ್ಭುತಯುದ್ಧವನ್ನು ನೋಡಲು ಬಂದು ನಿಂತರು.

೩. ಇಬ್ಬರೂ ತಮ್ಮ ಸೈನ್ಯಗಳನ್ನು ಅರ್ಧಚಂದ್ರ ವ್ಯೂಹವನ್ನಾಗಿ ರಚಿಸಿದರು. ಅನಂತರ ಎರಡೂ ಸೇನೆಗಳಿಗೆ ಯುದ್ಧ ಮೊದಲಿಟ್ಟಿತು.

೪. ರಣಕೇಕೆ ಹಾಕುತ್ತ ಪರಸ್ಪರರನ್ನು ಇರಿಯುತ್ತ ರೆಕ್ಕೆಕಟ್ಟಿಕೊಂಡು ವೇಗವಾಗಿ ಹೋಗುತ್ತ ಬಾಣಗಳೂ ಕೂಡ ಯುದ್ಧ ಮಾಡುತ್ತಿದ್ದವು.

೫. ಒರೆಯೆಂಬ ಬಾಯಿಂದ ಹೊರಬಿದ್ದು ರಕ್ತಹೀರಿದ ಚಪಲವಾದ ನೀಳವಾದ ಕತ್ತಿಗಳು (ಅಸಿಲತೆಗಳು) ಕೃತಾಂತನ (ಯಮನ) ನಾಲಿಗೆಗಳಂತೆ ತೋರಿದವು.

---

## ಸಪ್ತಮಸ್ತರಂಗಃ

ತತಃ ಸೂರ್ಯಪ್ರಭಃ ಪ್ರಾತರುತ್ಥಾಯ ಸಚಿವೈಃ ಸಹ ।
ದಾನವಾದಿಬಲೈಃ ಸರ್ವೈರ್ಯುತೋ ಯುದ್ಧಭುವಂ ಯಯೌ ॥ ೧
ಆಯಯೌ ಶ್ರುತಶರ್ಮಾ ಚ ವಿದ್ಯಾಧರಬಲೈರ್ವೃತಃ ।
ಆಜಗ್ಮುಶ್ಚ ಪುನರ್ದ್ರಷ್ಟುಂ ಸರ್ವೇ ದೇವಾಸುರಾದಯಃ ॥ ೨
ಸೈನ್ಯೇ ದ್ವೇ ಅಪಿ ತೇ ವ್ಯೂಹಾವರ್ಧಚಂದ್ರೌ ಚ ಚಕ್ರತುಃ ।
ಪ್ರಾವರ್ತತ ತತೋ ಯುದ್ಧಂ ಬಲಯೋರುಭಯೋಸ್ತಯೋಃ ॥ ೩
ಸಶಬ್ದಮಭಿಧಾವಂತೋ ನಿಕೃಂತಂತಃ ಪರಸ್ಪರಮ್ ।
ಪತ್ರಾರೂಢಾಃ ಪ್ರಜವಿನೋ ಯುಧ್ಯಂತೇ ಸ್ಮ ಶರಾ ಅಪಿ ॥ ೪
ಕೋಷಾನನಾನ್ನಿರ್ಯಾತಾಃ ಸುದೀರ್ಘಾಃ ಪೀತಶೋಣಿತಾಃ ।
ಲೋಲಾಃ ಖಡ್ಗಲತಾ ರೇಜುಃ ಕೃತಾಂತರಸನಾ ಇವ ॥ ೫

೬ ಶೂರರ ಅರಳಿದ ಮುಖಕಮಲಗಳ ಮೇಲೆ ಚಕ್ರಾಯುಧಗಳ ಸಮೂಹವು ಬೀಳುತ್ತಿರಲಾಗಿ ಯುದ್ಧವೆಂಬ ಆ ಮಹಾ ಸರಸ್ಸು ರಾಜರೆಂಬ ಹಂಸಗಳ ನಾಶಕ್ಕೆ ಕಾರಣವಾಯಿತು.

೭ ಕತ್ತರಿಸಲ್ಪಟ್ಟ ಶೂರರ ತಲೆಗಳು ಮೇಲಕ್ಕೆ ಹಾರಿ ಕೆಳಕ್ಕೆ ಬೀಳುತ್ತಿದ್ದರೆ ಆ ಯುದ್ಧಭೂಮಿಯಲ್ಲಿ ಕೃತಾಂತನು ಚೆಂಡಾಟವಾಡುತ್ತಿರುವಂತೆ ತೋರಿತು.

೮ ರಕ್ತದ ಸಿಂಪಡಿಕೆಯಿಂದ ಧೂಳು ಅಡಗಿಹೋಗಿದ್ದ ಆ ರಣಾಂಗಣದಲ್ಲಿ, ಪರಸ್ಪರ ಕ್ರೋಧದಿಂದ ಕೂಡಿದ ಮಹಾರಥಿಗಳ ದ್ವಂದ್ವ ಯುದ್ಧವು ಆರಂಭವಾಯಿತು.

೯. ಆಗ ಶ್ರುತಶರ್ಮನೊಡನೆ ಸೂರ್ಯಪ್ರಭನಿಗೆ ಯುದ್ಧವಾಯಿತು. ದಾಮೋದರನೊಡನೆ ಪ್ರಭಾಸನಿಗೆ ಕಾಳಗ ಏರ್ಪಟ್ಟಿತು.

೧೦. ಆಗ ಸಿದ್ಧಾರ್ಥನು ಮಹೋತ್ಪಾತನೊಡನೆ ಯುದ್ಧ ಮಾಡಿದನು. ಪ್ರಹಸ್ತನು ಬ್ರಹ್ಮಗುಪ್ತನೊಡನೆ ಮತ್ತು ವೀತಭಯನು ಸಂಗಮನೊಡನೆ ಯುದ್ಧ ಮಾಡಿದನು.

೧೧. ಪ್ರಜ್ಞಾಢ್ಯನೊಡನೆ ಚಂದ್ರಗುಪ್ತನು, ಅಕ್ರಮನೊಡನೆ ಪ್ರಿಯಂಕರನು, ಸರ್ವದಮನನು ಅತಿಬಲನೊಡನೆ ಯುದ್ಧಮಾಡಿದರು.

೧೨. ಕುಂಜರಕುಮಾರನು ಧುರಂಧರನೊಡನೆ, ಹೀಗೆ ಇನ್ನೂ ಅನೇಕ ಮಹಾರಥಿಗಳು ಬೇರೆಯವರೊಡನೆ ಬೇರೆಬೇರೆಯಾಗಿ ಕಾದಾಡಿದರು.

---

ಶೂರೋತ್ಫುಲ್ಲಮುಖಾಂಭೋಜಸಂಪತಚ್ಚಕ್ರಸಂಹತಿ ।
ರಾಜಹಂಸಕ್ಷಯಾಯಾಸೀತ್ತದಾಹವಮಹಾಸರಃ ॥ ೬
ಉತ್ಪತದ್ಭಿಃ ಪತದ್ಭಿಶ್ಚ ನಿರ್ಲೂನೈಃ ಶೂರಮೂರ್ಧಭಿಃ ।
ಕೃತಾಂತಕಂದುಕಕ್ರೀಡಾಸಂನಿಭಾ ಸಮಿದಾಬಭೌ ॥ ೭
ಕ್ಷತಜಾಸೇಕನಿರ್ಧೂತಧೂಲಿಧ್ವಾಂತೇ ರಣಾಜಿರೇ ।
ಮಹಾರಥಾನಾಮಭವನ್ದ್ವಂದ್ವಯುದ್ಧಾನ್ಯಮರ್ಷಿಣಾಮ್ ॥ ೮
ಆಸೀತ್ಸೂರ್ಯಪ್ರಭಸ್ಯಾತ್ರ ಸಂಗ್ರಾಮಃ ಶ್ರುತಶರ್ಮಣಾ ।
ದಾಮೋದರೇಣ ಚ ಸಮಂ ಪ್ರಭಾಸಸ್ಯಾಹವೋಽಭವತ್ ॥ ೯
ಮಹೋತ್ಪಾತೇನ ಸಾಕಂ ಚ ಸಿದ್ಧಾರ್ಥೋ ಯುಯುಧೇ ತಥಾ ।
ಪ್ರಹಸ್ತೋ ಬ್ರಹ್ಮಗುಪ್ತೇನ ಸಂಗಮೇನ ಚ ವೀತಭೀಃ ॥ ೧೦
ಪ್ರಜ್ಞಾಢ್ಯಶ್ಚಂದ್ರಗುಪ್ತೇನಾಪ್ಯಕ್ರಮೇಣ ಪ್ರಿಯಂಕರಃ ।
ಯುಯುಧೇ ಸರ್ವದಮನಃ ಸಹೈವಾತಿಬಲೇನ ಚ ॥ ೧೧
ಧುರಂಧರೇಣ ಯುಯುಧೇ ಸ ಕುಂಜರಕುಮಾರಕಃ ।
ಅನ್ಯೇ ಮಹಾರಥಾಶ್ಚಾನ್ಯೈರಯುದ್ಧ್ಯಂತ ಪೃಥಕ್‌ಪೃಥಕ್ ॥ ೧೨

೧೩. ಆಗ, ಮೊದಲಿಗೆ ಮಹೋತ್ಪಾತನು ಸಿದ್ಧಾರ್ಥನ ಬಾಣಗಳನ್ನು ತನ್ನ ಬಾಣಗಳಿಂದ ಹೊಡೆದುರುಳಿಸಿ, ಬಿಲ್ಲನ್ನು ಮುರಿದು ಅಶ್ವಗಳನ್ನೂ ಸಾರಥಿಯನ್ನೂ ಕೊಂದುಹಾಕಿದನು.

೧೪–೧೫. ವಿರಥನಾದರೂ ಸಿದ್ಧಾರ್ಥನು ಕ್ರೋಧದಿಂದ ಅವನನ್ನು ಅಟ್ಟಿಸಿಕೊಂಡು ಹೋಗಿ ಕಬ್ಬಿಣದ ದಂಡದಿಂದ ಮಹೋತ್ಪಾತನ ರಥವನ್ನು ಅಶ್ವಸಹಿತ ಪುಡಿಗುಟ್ಟಿಸಿದನು. ಆಗ ಪಾದಚಾರಿಯಾದ ಸಿದ್ಧಾರ್ಥನು ಪಾದಚಾರಿಯೇ ಆದ ಮಹೋತ್ಪಾತನನ್ನು ಬಾಹು ಯುದ್ಧದಲ್ಲಿ ಬಂಧಿಸಿ ನೆಲಕ್ಕುರುಳಿಸಿದನು.

೧೬. ವಿದ್ಯಾಧರನು ಕೆಳಗೆ ಬಿದ್ದ ಅವನನ್ನು ಚಚ್ಚಿ ಚೂರ್ಣಗೊಳಿಸಲು ಉದ್ಯುಕ್ತನಾದಾಗ ಮಹೋತ್ಪಾತನ ತಂದೆಯಾದ ಭಗನು ಬಂದು ರಕ್ಷಿಸಲು ಅವನು ಎದ್ದು ರಣಾಂಗಣದಿಂದ ಓಡಿದನು.

೧೭–೧೮. ಪ್ರಹಸ್ತ ಬ್ರಹ್ಮಗುಪ್ತರೂ ಕೂಡ ಪರಸ್ಪರ ವಿರಥರಾದರು. ನಂತರ ಅವರು ಖಡ್ಗಯುದ್ಧ ಮಾಡಿದರು. ಅವರ ಯುದ್ಧದ ಕ್ರಮದಲ್ಲಿ ಅನೇಕ ಬಗೆಯ ಕರಣಗಳು ಕಾಣುತ್ತಿದ್ದವು. ಪ್ರಹಸ್ತನೂ ಕರಣಗಳನ್ನು ಪ್ರದರ್ಶಿಸುತ್ತ ಬ್ರಹ್ಮಗುಪ್ತನ ರಕ್ಷಾಕವಚವನ್ನು ಸೀಳಿ ಉಪಾಯದಿಂದ ಅವನನ್ನು ನೆಲಕ್ಕೆ ಉರುಳಿಸಿದನು.

---

ತತ್ರ ಪೂರ್ವಂ ಮಹೋತ್ಪಾತಃ ಪ್ರತಿಹತ್ಯ ಶರೈಃ ಶರಾನ್ ।
ಸಿದ್ಧಾರ್ಥಸ್ಯ ಧನುಶ್ಛಿತ್ತ್ವಾ ಜಘಾನಾಶ್ವಾನ್ ಸಸಾರಥೀನ್ ॥ ೧೩
ವಿರಥಃ ಸೋಽಪಿ ಸಿದ್ಧಾರ್ಥೋ ಧಾವಿತ್ವಾ ತಸ್ಯ ತಂ ಕ್ರುಧಾ ।
ಅಯೋದಂಡೇನ ಮಹತಾ ಸಾಶ್ವಂ ರಥಮಚೂರ್ಣಯತ್ ॥ ೧೪
ತತಸ್ತಂ ಪಾದಚಾರೀ ಸ ಸಿದ್ಧಾರ್ಥಃ ಪಾದಚಾರಿಣಮ್ ।
ಬಾಹುಯುದ್ಧೇನ ಧರಣೌ ಮಹೋತ್ಪಾತಮಪಾತಯತ್ ॥ ೧೫
ಯಾವಚ್ಚೇಚ್ಛತಿ ನಿಷ್ಪೇಷ್ಟುಂ ಸ ತಂ ತಾವತ್ಸ ಖೇಚರಃ ।
ಭಗೇನ ರಕ್ಷಿತಃ ಪಿತ್ರಾ ಪ್ರೋತ್ಥಾಯ ಪ್ರಯಯೌ ರಣಾತ್ ॥ ೧೬
ಪ್ರಹಸ್ತಬ್ರಹ್ಮಗುಪ್ತೌ ಚಾಪ್ಯನ್ಯೋನ್ಯಂ ವಿರಥೀಕೃತೌ ।
ಕರಣೈಃ ಖಡ್ಗಯುದ್ಧೇನ ಯುದ್ಧ್ಯೇತೇ ಸ್ಮ ಪೃಥಗ್ವಿಧೈಃ ॥ ೧೭
ಪ್ರಹಸ್ತಶ್ಚಾಸಿನಿರ್ಲೂನಚರ್ಮಾಣಂ ಕರಣಕ್ರಮಾತ್ ।
ಯುಕ್ತ್ಯಾ ತಂ ಪಾತಯಾಮಾಸ ಬ್ರಹ್ಮಗುಪ್ತಂ ಭುವಸ್ತಲೇ ॥ ೧೮

೧೯–೨೦. ಬಿದ್ದ ಅವನ ರುಂಡವನ್ನು ಚೆಂಡಾಡುವಷ್ಟರಲ್ಲಿ ಅವನ ತಂದೆಯಾದ ಸ್ವಯಂ ಬ್ರಹ್ಮನೇ ಪ್ರಹಸ್ತನನ್ನು ತಡೆದನು. ಆಗ ದಾನವರೆಲ್ಲ ದೇವತೆಗಳನ್ನು ಕುರಿತು, 'ನೀವೆಲ್ಲ ನಿಮ್ಮ ಮಕ್ಕಳನ್ನು ಕಾಪಿಟ್ಟುಕೊಳ್ಳಲು ಬಂದಿರಿ, ಯುದ್ಧ ನೋಡಲಿಕ್ಕಲ್ಲ' ಎಂದು ನಕ್ಕರು.

೨೧. ಅಷ್ಟರಲ್ಲಿ ವೀತಭಯನು ಸಂಕ್ರಮನ ಧನುಸ್ಸನ್ನು ಮುರಿದು ಸಾರಥಿಯನ್ನು ಕೊಂದು ತನ್ನ ಪ್ರದ್ಯುಮ್ನಾಸ್ತ್ರದಿಂದ ಸಂಕ್ರಮನ ಎದೆಗೆ ನೇರ ಗುರಿಯಿಟ್ಟು ಹೊಡೆದು ಕೊಂದನು..

೨೨. ಪ್ರಜ್ಞಾಢ್ಯನೂ ಚಂದ್ರಗುಪ್ತನೂ ರಥಗಳನ್ನು ನಾಶಮಾಡಿಕೊಂಡು ಪದಾತಿಗಳಾದರು. ನಂತರ ಖಡ್ಗ ಯುದ್ಧದಲ್ಲಿ ಪ್ರಜ್ಞಾಢ್ಯನು ಅವನ ತಲೆಯನ್ನು ತರಿದುಬಿಟ್ಟನು.

೨೩. ಬಳಿಕ ಪುತ್ರವಧೆಯಿಂದ ಕ್ರುದ್ಧನಾದ ಚಂದ್ರನು ತಾನೇ ಪ್ರಜ್ಞಾಢ್ಯನೊಡನೆ ಯುದ್ಧಕ್ಕೆ ನಿಂತನು. ಅವರೀರ್ವರ ಯುದ್ಧವು ಸರಿಸಮನಾಗಿತ್ತು.

೨೪. ಪ್ರಿಯಂಕರನು ಸ್ವಯಂ ವಿರಥನಾಗಿ ಹಾನಿಗೊಂಡಿದ್ದ ರಥವುಳ್ಳ ಅಕ್ರಮನನ್ನು ಕತ್ತಿಯ ಒಂದೆ ಬೀಸಿಗೆ ಎರಡು ಹೋಳಾಗಿಸಿಬಿಟ್ಟನು.

೨೫. ಬಿಲ್ಲು ಮುರಿದು ಎದೆಯಲ್ಲಿ ಅಂಕುಶವು ನಾಟಿ ಗಾಯಗೊಂಡಿದ್ದ ಅತಿಬಲನನ್ನು ಸರ್ವದಮನನು ಲೀಲೆಯಿಂದ ಕಾಳಗದಲ್ಲಿ ಮುಗಿಸಿಬಿಟ್ಟನು.

---

ಪತಿತಸ್ಯ ಶಿರಸ್ತಸ್ಯ ಸ ಯಾವಚ್ಛೇತ್ತುಮಿಚ್ಛತಿ ।
ತಾವನ್ನಿವಾರಿತೋ ದೂರಾತ್ಪಿತ್ರಾಸ್ಯ ಬ್ರಹ್ಮಣಾ ಸ್ವಯಮ್ ॥ ೧೯
ಸುತಾನ್ರಕ್ಷಿತುಮಾಯಾತಾ ಯೂಯಂ ನ ಪ್ರೇಕ್ಷಿತುಂ ರಣಮ್ ।
ಇತ್ಯುಕ್ತ್ವಾ ದಾನವಾಃ ಸರ್ವೇ ದೇವಾನ್ವಿಜಹಸುಸ್ತದಾ ॥ ೨೦
ತಾವದ್ವೀತಭಯಶ್ಛಿನ್ನಧನ್ವಾನಂ ಹತಸಾರಥಿಮ್ ।
ಜಘಾನ ಹೃದಯೇ ವಿದ್ಧ್ವಾ ಪ್ರದ್ಯುಮ್ನಾಸ್ತ್ರೇಣ ಸಂಕ್ರಮಮ್ ॥ ೨೧
ಪ್ರಜ್ಞಾಢ್ಯಶ್ಚಂದ್ರಗುಪ್ತಂ ಚ ಪದಾತಿಂ ರಥಯೋಃ ಕ್ಷಯಾತ್ ।
ಪದಾತಿಃ ಖಡ್ಗಯುದ್ಧೇನ ನ್ಯವಧೀತ್ಕೃತ್ತಮಸ್ತಕಮ್ ॥ ೨೨
ತತಃ ಪುತ್ರವಧಕ್ರುದ್ಧಃ ಸ್ವಯಮಾಗತ್ಯ ಚಂದ್ರಮಾಃ ।
ಪ್ರಜ್ಞಾಢ್ಯಂ ಯೋಧಯಾಮಾಸ ಯುದ್ಧಂ ಚಾಸೀತ್ತಯೋಃ ಸಮಮ್ ॥ ೨೩
ಪ್ರಿಯಂಕರಶ್ಚ ವಿರಥೋ ವಿರಥಂ ರಥನಾಶತಃ ।
ಏಕಖಡ್ಗಪ್ರಹಾರೇಣ ಕರೋತಿ ಸ್ಮಾಕ್ರಮಂ ದ್ವಿಧಾ ॥ ೨೪
ಛಿನ್ನೇ ಧನುಷಿ ನಿಕ್ಷಿಪ್ತೇನಾಂಕುಶೇನ ಹೃದಿ ಕ್ಷತಮ್ ।
ಹತವಾನ್ ಸರ್ವದಮನೋ ಹೇಲಯಾತಿಬಲಂ ರಣೇ ॥ ೨೫

೨೬. ನಂತರ ಕುಂಜರಕುಮಾರಕನು ಧುರಂಧರನ ಅಸ್ತ್ರಕ್ಕೆ ಪ್ರತ್ಯಸ್ತ್ರ ಹೂಡಿ ಮತ್ತೆ ಮತ್ತೆ ಅವನನ್ನು ರಥಹೀನನನ್ನಾಗಿ ಮಾಡಿದನು.

೨೭. ಅನೇಕ ಬಾರಿ ವಿಕ್ರಮಶಕ್ತಿಯು ಅವನಿಗೆ ರಥವನ್ನು ಕಳಿಸಿಕೊಟ್ಟನು. ತನ್ನೆಡೆಗೆ ತೂರಿ ಬರುತ್ತಿದ್ದ ಅಸ್ತ್ರಗಳನ್ನು ತನ್ನ ಅಸ್ತ್ರಗಳಿಂದ ನಿವಾರಿಸಿಕೊಂಡು ಅಂತೂ ಅವನು ತನ್ನ ರಥವನ್ನು ಕಾಪಾಡಿಕೊಂಡನು.

೨೮. ಆಗ, ಕುಂಜರಕುಮಾರನು ಓಡಿಬಂದು ದೊಡ್ಡ ಶಿಲೆಯೊಂದನ್ನು ವಿಕ್ರಮಶಕ್ತಿಯ ರಥದ ಮೇಲೆ ಒಮ್ಮೆಲೇ ಎಸೆದುಬಿಟ್ಟನು.

೨೯. ರಥವು ಪುಡಿಪುಡಿಯಾಗಿ ವಿಕ್ರಮಶಕ್ತಿಯೂ ಹೋದಮೇಲೆ, ಅದೇ ಕಲ್ಲಿನಿಂದ ಧುರಂಧರನನ್ನು ಹುಡಿಮಾಡಿದನು.

೩೦. ಸೂರ್ಯಪ್ರಭನು ಶ್ರುತಶರ್ಮನೊಡನೆ ಯುದ್ಧ ಮಾಡುತ್ತಿದ್ದರೂ ವಿರೋಚನನ ವಧೆಯಿಂದ ಉಂಟಾಗಿದ್ದ ಕ್ರೋಧದಿಂದ ಒಂದೇ ಬಾಣವನ್ನು ಬಿಟ್ಟು ದಮನನ್ನು ದಮನಮಾಡಿದನು.

೩೧. ಅದರಿಂದ ಕುಪಿತರಾದ ಅಶ್ವಿನೀದೇವತೆಗಳು ಬಾಣಗಳನ್ನು ಬಿಡುತ್ತಾ ಯುದ್ಧಕ್ಕೆ ಬಂದರು. ಸುನೀಥನು ಅವರನ್ನು ಎದುರಿಸಿದನು. ಅವರ ನಡುವೆ ಘೋರಯುದ್ಧವೇ ನಡೆಯಿತು.

---

ತತೋ ಧುರಂಧರಂ ತಂ ಚ ಸ ಕುಂಜರಕುಮಾರಕಃ ।
ಅಸ್ತ್ರಪ್ರತ್ಯಸ್ತ್ರಯುದ್ಧೇನ ಚಕಾರ ವಿರಥಂ ಮುಹುಃ ॥ ೨೬
ಮುಹುರ್ವಿಕ್ರಮಶಕ್ತಿಶ್ಚ ತಸ್ಮೈ ರಥಮಢೌಕಯತ್ ।
ರರಕ್ಷ ಸಂಕಟೇ ತಂ ಚಾಪ್ಯಸ್ತ್ರೈರಸ್ತ್ರಾಣಿ ವಾರಯನ್ ॥ ೨೭
ಸ ಕುಂಜರಕುಮಾರೋಽಥ ಧಾವಿತ್ವಾ ಮಹತೀಂ ಶಿಲಾಮ್ ।
ಕ್ರುದ್ಧೋ ವಿಕ್ರಮಶಕ್ತೇರ್ದ್ರಾಕ್ಚಿಕ್ಷೇಪ ಸ್ಯಂದನೋಪರಿ ॥ ೨೮
ಗತೇ ವಿಕ್ರಮಶಕ್ತೌ ಚ ಚೂರ್ಣಿತಸ್ಯಂದನೇ ತತಃ ।
ತಯೈವ ಶಿಲಯಾ ತಂ ಸ ಧುರಂಧರಮಚೂರ್ಣಯತ್ ॥ ೨೯
ಸೂರ್ಯಪ್ರಭಃ ಪ್ರಯುದ್ಧೋಽಪಿ ಸಹಾತ್ರ ಶ್ರುತಶರ್ಮಣಾ ।
ವಿರೋಚನವಧಕ್ರೋಧಾಜ್ಜಘಾನೈಕೇಷುಣಾ ದಮಮ್ ॥ ೩೦
ತತ್ಕ್ರೋಧಾದಶ್ವಿನೌ ದೇವೌ ಯುದ್ಧಾಯಾಪತಿತೌ ಶರೈಃ ।
ಸುನೀಥಃ ಪ್ರತಿಜಗ್ರಾಹ ತೇಷಾಂ ಯುದ್ಧಮಭೂನ್ಮಹತ್ ॥ ೩೧

೩೨. ಸ್ಥಿರ ಬುದ್ಧಿಯು ಪರಾಕ್ರಮನನ್ನು ಶಕ್ತ್ಯಾಯುಧದಿಂದ ಹೊಡೆದು ಅದರಿಂದ ಕ್ರುದ್ಧರಾಗಿ ರಣಾಂಗಣಕ್ಕಿಳಿದ ಅಷ್ಟವಸುಗಳೊಡನೆ ಏಕಾಕಿಯಾಗಿ ಹೋರಾಡಿದನು.

೩೩. ಭಾಸನನ್ನು ವಿರಥನನ್ನಾಗಿ ಮಾಡಿದ ಮರ್ದನನನ್ನು ಕಂಡ ಪ್ರಭಾಸನು ದಾಮೋದರನೊಡನೆ ಯುದ್ಧಮಾಡುತ್ತಿದ್ದರೂ, ಒಂದೇ ಬಾಣ ಪ್ರಯೋಗದಿಂದ ಅವನನ್ನು ಯಮಾಲಯಕ್ಕಟ್ಟಿದನು.

೩೪. ಪ್ರಕಂಪನನು ಅಸ್ತ್ರಯುದ್ಧದಲ್ಲಿ ತೇಜಃ ಪ್ರಭನನ್ನು ಕೊಂದುಬಿಟ್ಟನು. ಅದರಿಂದ ಕೋಪಗೊಂಡ ಅಗ್ನಿಯು ಮೇಲೇರಿ ಬರಲಾಗಿ ಅವನೊಡನೆಯೇ ಈ ಅಸುರನು ಯುದ್ಧ ಮಾಡಿದನು.

೩೫. ಯಮದಂಷ್ಟ್ರನನ್ನು ಕೊಂದ ಧೂಮಕೇತುವಿಗೂ ಪುತ್ರನ ಸಾವಿನಿಂದ ಸಿಟ್ಟಾದ ಯಮನಿಗೂ ದಾರುಣವಾದ ಯುದ್ಧವೇರ್ಪಟ್ಟಿತು.

೩೬. ಸಿಂಹದಂಷ್ಟ್ರನು ಸುರೋಷಣನನ್ನು ಕಲ್ಲಿನಿಂದಲೇ ಚಚ್ಚಿ ಮುದ್ದೆ ಮಾಡಿದನು. ಅದನ್ನು ಕಂಡು ರೋಷಗೊಂಡ ನಿಋತಿಯೊಡನೆ ಅವನಿಗೆ ಕಾಳಗ ಮೊದಲಿಟ್ಟಿತು.

೩೭. ಕಾಲಚಕ್ರನು ವಾಯುಬಲನನ್ನು ಚಕ್ರಾಯುಧದಿಂದ ಎರಡಾಗಿ ಸೀಳಿದನು. ಅದರಿಂದ ಸಿಟ್ಟಿಗೆದ್ದ ವಾಯುದೇವನೊಡನೆ ಅವನು ಹೋರಾಡಬೇಕಾಯಿತು.

---

ಸ್ಥಿರಬುದ್ಧಿಶ್ಚ ಸಂಗ್ರಾಮೇ ಶಕ್ತ್ಯಾ ಹತ್ವಾ ಪರಾಕ್ರಮಮ್ ।
ವಸುಭಿಸ್ತದ್ವಧಕ್ರುದ್ಧೈಃ ಸಹಾಷ್ಟಾಭಿರಯುದ್ಧ್ಯತ ॥ ೩೨
ವಿರಥೀಕೃತಭಾಸಂ ಚ ಪ್ರಭಾಸೋ ವೀಕ್ಷ್ಯ ಮರ್ದನಮ್ ।
ದಾಮೋದರರಣಾಸಕ್ತೋऽಪ್ಯೇಕೇನೈವೇಷುಣಾವಧೀತ್ ॥ ೩೩
ಪ್ರಕಂಪನೋऽಸ್ತ್ರಯುದ್ಧೇನ ಹತ್ವಾ ತೇಜಃಪ್ರಭಂ ಯುಧಿ ।
ಯುಯುಧೇ ತದ್ವಧಕ್ರುದ್ಧೇನಾಗ್ನಿನಾ ಸಹ ದಾನವಃ ॥ ೩೪
ಧೂಮಕೇತೋಶ್ಚ ಸಮರೇ ಯಮದಂಷ್ಟ್ರಂ ನಿಜಘ್ನುಷಃ ।
ಕುಪಿತೇನ ಯಮೇನಾಭೂತ್ಸಹ ಯುದ್ಧಂ ಸುದಾರುಣಮ್ ॥ ೩೫
ಚೂರ್ಣಯಿತ್ವಾ ಸ ಶಿಲಯಾ ಸಿಂಹದಂಷ್ಟ್ರಃ ಸುರೋಷಣಮ್ ।
ಸಮಂ ನಿರ್ಋತಿನಾಯುದ್ಧ ತದ್ವಧಾಮರ್ಷಶಾಲಿನಾ ॥ ೩೬
ಕಾಲಚಕ್ರೋऽಪಿ ಚಕ್ರೇಣ ಚಕ್ರೇ ವಾಯುಬಲಂ ದ್ವಿಧಾ ।
ಅಯುದ್ಧ್ಯತ ಚ ತತ್ಕೋಪಾಜ್ಜ್ವಲತಾ ವಾಯುನಾ ಸಹ ॥ ೩೭

೩೮. ಮಹಾಮಾಯನು ಹಾವು, ಬೆಟ್ಟ, ಮರಗಳ ರೂಪವನ್ನು ಧರಿಸಿ ಮೋಹಗೊಳಿಸುತ್ತಿದ್ದ ಕುಬೇರದತ್ತನನ್ನು, ತಾನೂ ಗರುಡ, ವಜ್ರ ಮತ್ತು ಅಗ್ನಿರೂಪಗಳನ್ನು ಧರಿಸಿ ಮುಗಿಸಿದನು.

೩೯. ಅದರಿಂದ ಕುಪಿತನಾದ ಕುಬೇರನು ಅವನೊಡನೆ ಯುದ್ಧಕ್ಕಿಳಿದನು. ಇದೇ ರೀತಿ ಇತರರು ತಮ್ಮ ತಮ್ಮ ಸಂತತಿನಾಶದಿಂದ ಕ್ರೋಧಾವಿಷ್ಟರಾಗಿ ಯುದ್ಧ ಮಾಡುತ್ತಿದ್ದರು.

೪೦. ವಿದ್ಯಾಧರರು ಹೆದರಿ ಆಕಾಶಕ್ಕೆ ಹಾರುತ್ತಿರುವಾಗ ಅವರನ್ನು ಬೆನ್ನಟ್ಟಿಹೋದ ಮನುಜರು, ದಾನವರು ಅವರನ್ನು ಅಲ್ಲಲ್ಲೇ ಹೊಸೆದು ಹಾಕಿದರು.

೪೧. ಅಷ್ಟರಲ್ಲಿ ದಾಮೋದರನೊಡನೆ ಪ್ರಭಾಸನಿಗೆ ಭಯಂಕರವಾದ ಕಾಳಗ ಮೊದಲಿಟ್ಟುಕೊಂಡಿತು. ಅಸ್ತ್ರಪ್ರತ್ಯಸ್ತ್ರಗಳ ಪ್ರಯೋಗ ಧಾರಾಳವಾಗಿ ನಡೆಯಿತು.

೪೨. ಅಷ್ಟರಲ್ಲಿ ದಾಮೋದರನ ಬಿಲ್ಲು ಮುರಿದು ಸಾರಥಿ ಸತ್ತುಬಿದ್ದನು. ಮತ್ತೊಂದು ಬಿಲ್ಲನ್ನು ಹಿಡಿದು ತಾನೇ ಕುದುರೆಯ ಜೀನನ್ನು ಹಿಡಿದು ರಥವನ್ನು ನಡೆಸುತ್ತ ಯುದ್ಧ ಮಾಡತೊಡಗಿದನು.

೪೩. ಅವನನ್ನು ಪ್ರೋತ್ಸಾಹದ ಮಾತುಗಳಿಂದ ಹುರಿದುಂಬಿಸುತ್ತಿದ್ದ ಅಂಬುಜಾಸನನನ್ನು ನೋಡಿ ಇಂದ್ರನು, "ಪ್ರಭೋ, ಸೋಲುತ್ತಿರುವವನನ್ನು ಕಂಡು ಅದು ಹೇಗೆ ಸಂತೋಷಪಡುತ್ತಿದ್ದೀಯೆ' ಎಂದಾಗ, ಬ್ರಹ್ಮನು ಅವನಿಗೆ ಹೀಗೆಂದನು.

---

ರೂಪೈರ್ನಾಗಾದ್ರಿವೃಕ್ಷಾಣಾಂ ಮಹಾಮಾಯೋ ವಿಮೋಹದಮ್ ।
ಕುಬೇರದತ್ತಂ ಹತವಾಂಸ್ತಾರ್ಕ್ಷ್ಯವಜ್ರಾಗ್ನಿರೂಪಧೃತ್ ॥ ೩೮
ತತಃ ಕ್ರುದ್ಧಃ ಕುಬೇರೋಽತ್ರ ತೇನ ಸಾಕಮಯುಧ್ಯತ ।
ಏವಮನ್ಯೇಽಪ್ಯಯುಧ್ಯಂತ ಸುರಾಃ ಸ್ವಾಂಶವಧಕ್ರುಧಾ ॥ ೩೯
ನಿಜಘ್ನಿರೇಽತ್ರ ಚಾನ್ಯೇಽಪಿ ತೇ ತೇ ವಿದ್ಯಾಧರಾಧಿಪಾಃ ।
ಉತ್ಪತದ್ಭಿಃ ಪ್ರತಿಪದಂ ತೈಸ್ತೈರ್ಮನುಜದಾನವೈಃ ॥ ೪೦
ತಾವಚ್ಚಾತ್ರ ಪ್ರಭಾಸಸ್ಯ ಸಹ ದಾಮೋದರೇಣ ತತ್ ।
ಪರಸ್ಪರಾಸ್ತ್ರಪ್ರತ್ಯಸ್ತ್ರಭೀಮಂ ಯುದ್ಧಮವರ್ತತ ॥ ೪೧
ಅಥ ದಾಮೋದರಶ್ಛಿನ್ನಧನ್ವಾ ನಿಹತಸಾರಥಿಃ ।
ಆತ್ತಾನ್ಯಚಾಪಃ ಸಂಗೃಹ್ಯ ಸ್ವಯಂ ರಶ್ಮೀನಯುಧ್ಯತ ॥ ೪೨
ಸಾಧುವಾದಪ್ರದಂ ಚಾಸ್ಯ ಪಪ್ರಚ್ಛೇಂದ್ರೋಽಂಬುಜಾಸನಮ್ ।
ಹೀಯಮಾನಂ ಪ್ರತಿ ಕಥಂ ತುಷ್ಟೋಽಸಿ ಭಗವನ್ನಿತಿ ॥ ೪೩

೪೪–೪೫. "ಇವನನ್ನು ಕಂಡು ಹೇಗೆ ತಾನು ಸಂತೋಷಪಡದಿರಲಿ ! ಇಷ್ಟು ದೀರ್ಘ ಕಾಲ ಇವನು ಪ್ರಭಾಸನೊಡನೆ ಯುದ್ಧ ಮಾಡುತ್ತಿರುವನಲ್ಲ. ಹರಿಯ ಅಂಶವತಾರನಾದ ಇವನನ್ನುಳಿದು ಮತ್ಯಾರು ತಾನೆ ಹೀಗೆ ಮಾಡಿಯಾರು ? ಎಲ್ಲ ಸುರರನ್ನು ಸೇರಿಸಿದರೂ ಒಬ್ಬ ಪ್ರಭಾಸನಿಗೆ ಸಾಟಿಯಾಗಲಾರರು !

೪೬–೪೭. ಸುರಮರ್ದನಮಾಡಿದ ನಮುಚಿಯೆಂಬ ಅಸುರನಿದ್ದನಲ್ಲ, ಅವನಿಂದ ಪ್ರಬಲನೆಂಬುವನು ಜನಿಸಿದನು. ಅವನು ಸರ್ವರತ್ನಮಯನು. ಅವನೇ ಪ್ರಭಾಸನಾಗಿ ಹುಟ್ಟಿದ್ದಾನೆ. ಭಾಸನ ಅಜೇಯ ಪುತ್ರನಿವನು. ಭಾಸನೂ ಮೊದಲು ಕಾಲನೇಮಿಯೆಂಬ ಮಹಾಸುರನಾಗಿದ್ದನು.

೪೮. ಮೊದಲು ಹಿರಣ್ಯ ಕಶಿಪುವೂ ಬಳಿಕ ಕಪಿಂಜಲನೂ ಆಗಿ ನಂತರ ಸುಮುಂಡೀಕನೆಂಬ ಅಸುರನಾಗಿದ್ದವನೇ ಈಗ ಸೂರ್ಯಪ್ರಭನಾಗಿದ್ದಾನೆ.

೪೯. ಮೊದಲು ಹಿರಣ್ಯಾಕ್ಷನಾಗಿದ್ದವನೇ ಈಗ ಸುನೀಥನೆಂಬ ಅಸುರನಾಗಿರುವುದು. ಪ್ರಹಸ್ತ ಮುಂತಾದವರೆಲ್ಲ ದೈತ್ಯದಾನವ ವೀರರೇ !

೫೦. ಹಿಂದೆ ನಿಮ್ಮಿಂದ ಹತರಾದವರೆಲ್ಲ ಈಗ ಅಸುರರಾಗಿ ಹುಟ್ಟಿದ್ದಾರೆ. ಮಯಾದಿ ಅಸುರರು ಇವರ ಪಕ್ಷದಲ್ಲೇ ಸೇರಿದ್ದಾರೆ.

---

ತತೋ ಬ್ರಹ್ಮಾ ಜಗಾದೈನಂ ಕಥಂ ನೈತಸ್ಯ ತುಷ್ಯತೇ ।
ಇಯಚ್ಚಿರಂ ಪ್ರಭಾಸೇನ ಸಹ ಯೋಽನೇನ ಯುಧ್ಯತೇ ॥ ೪೪
ದಾಮೋದರಂ ಹರೇರಂಶಂ ವಿನಾ ಕುರ್ಯಾದಿದಂ ಹಿ ಕಃ ।
ಏಕಸ್ಯ ಹಿ ಪ್ರಭಾಸಸ್ಯ ಸರ್ವೇಽಪ್ಯಲ್ಪಾಃ ಸುರಾ ರಣೇ ॥ ೪೫
ನಮುಚಿರ್ನಾಮ ಯೋ ಹ್ಯಾಸೀದಸುರಃ ಸುರಮರ್ದನಃ ।
ಪ್ರಬಲಾಖ್ಯಸ್ತತೋ ಜಜ್ಞೇ ಸರ್ವರತ್ನಮಯಶ್ಚ ಯಃ ॥ ೪೬
ಸೈಷ ಪ್ರಭಾಸೋ ಜಾತೋಽದ್ಯ ಪುತ್ರೋ ಭಾಸಸ್ಯ ದುರ್ಜಯಃ ।
ಭಾಸೋಽಪಿ ಪೂರ್ವಮಭವತ್ಕಾಲನೇಮಿರ್ಮಹಾಸುರಃ ॥ ೪೭
ಭೂಯೋ ಹಿರಣ್ಯಕಶಿಪುಸ್ತತೋ ಭೂತ್ವಾ ಕಪಿಂಜಲಃ ।
ಸುಮುಂಡೀಕೋಽಸುರೋ ಯೋಽಭೂತ್ಸೋಽಯಂ
ಸೂರ್ಯಪ್ರಭೋಽದ್ಯ ಚ ॥ ೪೮
ಹಿರಣ್ಯಾಕ್ಷಶ್ಚ ಯೋಽಭೂತ್ತಾಕ್ಸ ಸುನೀಥಾಸುರೋಽಪ್ಯಯಮ್ ।
ಪ್ರಹಸ್ತಾದ್ಯಾಶ್ಚ ಯೇಽಪ್ಯೇತೇ ತೇ ಸರ್ವೇ ದೈತ್ಯದಾನವಾಃ ॥ ೪೯
ಯೇ ಯುಷ್ಮಾಭಿರ್ಹತಾಸ್ತೇಽಮೀ ಪುನರ್ಜಾತಾ ಯತೋಽಸುರಾಃ ।
ಮಯಾದಯೋಽತ ಏವಾಮೀ ಪಕ್ಷಮೇಷಾಮುಪಾಶ್ರಿತಾಃ ॥ ೫೦

೫೧. ಸ್ವಿಷ್ಟರುದ್ರಯಜ್ಞನ ಪ್ರಭಾವದಿಂದ ಬಂಧ ವಿಮುಕ್ತನಾದ ಬಲಿಯು ಇದನ್ನು ನೋಡಲು ಸೂರ್ಯಪ್ರಭ ಮುಂತಾದವರೊಡನೆ ಬಂದಿದ್ದಾನೆ ನೋಡು.

೫೨. ತಾನು ನೀಡಿದ ವಚನವನ್ನು ಪಾಲಿಸುತ್ತ ಈತನು ಪಾತಾಲ ಲೋಕದಲ್ಲಿ ಇದ್ದಾನೆ. ನೀನು ರಾಜ್ಯವಾಳುವವರೆಗೆ ಇದ್ದು, ನಂತರ ಈತನು ಇಂದ್ರನಾಗಲಿದ್ದಾನೆ.

೫೩. ಇವರೆಲ್ಲರೂ ಈಗ ತ್ರಿಪುರಾರಿಯ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಆದ್ದರಿಂದ ಇದು ನಿಮಗೆ ಗೆಲ್ಲುವ ಕಾಲವಲ್ಲ. ವೃಥಾ ವೈರವೇಕೆ ? ಸಂಧಿ ಮಾಡಿಕೊಳ್ಳಿ'.

೫೪. ಹೀಗೆಂದು ಇಂದ್ರನಿಗೆ ಕಮಲಾಸನನು ಹೇಳುತ್ತಿರುವಾಗಲೇ ಪ್ರಭಾಸನು ಮಹತ್ತರವಾದ ಪಾಶುಪತಾಸ್ತ್ರವನ್ನು ಬಿಟ್ಟನು.

೫೫. ಸರ್ವಸಂಹಾರಿಯಾದ ಆ ಭಯಂಕರವಾದ ಅಸ್ತ್ರದ ವಿಜೃಂಭಣೆಯನ್ನು ಕಂಡು ಹರಿಯು ತನ್ನ ಮಗನ ಮೇಲಿನ ಪ್ರೀತಿಯಿಂದ ಸುದರ್ಶನಾಸ್ತ್ರವನ್ನು ಪ್ರಯೋಗಿಸಿದನು.

೫೬. ಬಳಿಕ ಸಮಾನಶಕ್ತಿಶಾಲಿಗಳಾದ ಆ ಎರಡು ದಿವ್ಯಾಸ್ತ್ರಗಳಿಗೂ ಯುದ್ಧವಾಗಿ ಕಾಲ ಪಕ್ವವಾಗುವ ಮೊದಲೇ ವಿಶ್ವಸಂಹಾರವನ್ನು ಮಾಡಿಬಿಡುವುವೇನೋ ಎಂಬ ಭ್ರಮೆ ಉಂಟಾಯಿತು.

೫೭. 'ನನ್ನ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಳ್ಳುವ ಮೊದಲು ನಿನ್ನದನ್ನು ಹಿಂದಕ್ಕೆ ಪಡೆದುಕೋ' ಎಂದು ಹರಿಯು ಹೇಳಿದಾಗ ಪ್ರಭಾಸನು ಹೀಗೆಂದನು.

---

ಸೂರ್ಯಪ್ರಭಾದಿಭಿಃ ಸ್ವಿಷ್ಟರುದ್ರಯಜ್ಞಪ್ರಭಾವತಃ ।
ವಿಸ್ರಸ್ತಬಂಧನಃ ಪಶ್ಯ ಬಲಿರ್ದ್ರಷ್ಟುಮಿಹಾಗತಃ ॥ ೫೧
ಸ್ವಂ ಸತ್ಯವಚನಂ ರಕ್ಷನ್‌ಪಾತಾಲೇಷ್ವೇಷ ತಿಷ್ಠತಿ ।
ತ್ವದ್ರಾಜ್ಯಕಾಲಪರ್ಯಂತಂ ತತಶ್ಚೇಂದ್ರೋ ಭವಿಷ್ಯತಿ ॥ ೫೨
ಏತೇ ಪರಿಗೃಹೀತಾಶ್ಚ ಸಾಂಪ್ರತಂ ತ್ರಿಪುರಾರಿಣಾ ।
ತನ್ನಾಯಂ ಜಯಕಾಲೋ ವಃ ಸಂಧಿಂ ಕುರುತ ಕಿಂ ಗ್ರಹೈಃ ॥ ೫೩
ಇತಿ ಯಾವತ್ಸುರಪತಿಂ ಬ್ರವೀತಿ ಕಮಲಾಸನಃ ।
ತಾವತ್ಪ್ರಭಾಸಃ ಪ್ರಾಮುಂಚದಸ್ತ್ರಂ ಪಾಶುಪತಂ ಮಹತ್ ॥ ೫೪
ತದ್ದೃಷ್ಟ್ವಾ ಸರ್ವಸಂಹಾರಿರೌದ್ರಮಸ್ತ್ರಂ ವಿಜೃಂಭಿತಮ್ ।
ಪ್ರಮುಕ್ತಂ ಹರಿಣಾ ಚಕ್ರಂ ಸುತಸ್ನೇಹಾತ್ಸುದರ್ಶನಮ್ ॥ ೫೫
ತತಃ ಸರೂಪಯೋರಾಸೀದ್ಯುದ್ಧಂ ದಿವ್ಯಾಸ್ತ್ರಯೋಸ್ತಯೋಃ ।
ಅಕಾಂಡವಿಶ್ವಸಂಹಾರಸಂಭ್ರಾಂತಭುವನತ್ರಯಮ್ ॥ ೫೬
ಅಸ್ತ್ರಂ ಸ್ವಂ ಸಂಹೃತೈತತ್ತ್ವಂ ಯಾವತ್ತ್ವಂ ಸಂಹರಾಮ್ಯಹಮ್ ।
ಇತ್ಯುಕ್ತೋ ಹರಿಣಾ ಸೋಽಥ ಪ್ರಭಾಸಃ ಪ್ರತ್ಯುವಾಚ ತಮ್ ॥ ೫೭

೫೮. "ನಾನು ಬಿಟ್ಟ ಅಸ್ತ್ರವು ವ್ಯರ್ಥವಾಗಬಾರದು. ಆದ್ದರಿಂದ ದಾಮೋದರನೇ ಸೋತು ರಣದಿಂದ ಹಿಂತಿರುಗಲಿ; ನಂತರ ನಾನು ಅಸ್ತ್ರವನ್ನು ಹಿಂದೆಗೆದುಕೊಳ್ಳುತ್ತೇನೆ'.

೫೯. ಆಗ ಭಗವಂತನಾದ ಹರಿಯು, "ಸರಿ, ನೀನೂ ನನ್ನ ಚಕ್ರವನ್ನು ಗೌರವಿಸು, ಇಬ್ಬರ ಅಸ್ತ್ರಗಳೂ ವ್ಯರ್ಥವಾಗುವುದು ಬೇಡ' ಎಂದನು.

೬೦. ಶೌರಿಯ ಈ ಮಾತನ್ನು ಕೇಳಿದ ಸಮಯಾಸಮಯಪ್ರಜ್ಞೆಯಿಂದ ಕೂಡಿದ ಪ್ರಭಾಸನು "ಹಾಗೆಯೇ ಆಗಲಿ, ನಿನ್ನ ಚಕ್ರವು ನನ್ನ ರಥವನ್ನು ಮುಗಿಸಲಿ' ಎಂದನು,

೬೧. ಅದಕ್ಕೆ ಒಪ್ಪಿದ ಹರಿಯು ದಾಮೋದರನನ್ನು ರಣಾಂಗಣದಿಂದ ಹಿಂತಿರುಗುವಂತೆ ಮಾಡಿದನು. ಪ್ರಭಾಸನೂ ತನ್ನ ಅಸ್ತ್ರವನ್ನು ಉಪಸಂಹಾರ ಮಾಡಿದನು. ಬಳಿಕ ಚಕ್ರಾಯುಧವು ಅವನ ರಥದ ಮೇಲೆ ಎರಗಿತು.

೬೨. ನಂತರ ಮತ್ತೊಂದು ರಥವನ್ನು ಏರಿ ಅವನು ಸೂರ್ಯಪ್ರಭನ ಬಳಿಗೆ ಹೋದನು. ದಾಮೋದರನೂ ಶ್ರುತಶರ್ಮನ ಬಳಿಗೆ ಹೊರಟನು.

೬೩ ಅವರಲ್ಲಿ ವಾಸವಾಂಶ ಸಂಭೂತನೆಂದು ಗರ್ವಿತನಾಗಿದ್ದ ಶ್ರುತಶರ್ಮನಿಗೂ ಸೂರ್ಯಪ್ರಭನಿಗೂ ದ್ವಂದ್ವಯುದ್ಧ ಏರ್ಪಟ್ಟು ಅದೂ ಪರಾಕಾಷ್ಠೆಯನ್ನು ತಲುಪಿತ್ತು

೬೪. ಶ್ರುತಶರ್ಮನು ಯಾವ ಯಾವ ಅಸ್ತ್ರವನ್ನು ಪ್ರಯತ್ನದಿಂದ ಪ್ರಯೋಗಿಸುತ್ತಿದ್ದನೋ ಅವುಗಳನ್ನೆಲ್ಲ ಸೂರ್ಯಪ್ರಭನು ಕ್ಷಣಮಾತ್ರದಲ್ಲಿ ವಿಫಲಗೊಳಿಸುತ್ತಿದ್ದನು.

---

ಮುಕ್ತಮಸ್ತ್ರಂ ವೃಥಾ ನ ಸ್ಯಾತ್ತ್ವಯಾತು ಪರಾಙ್ಮುಖಃ ।
ದಾಮೋದರೋ ರಣಂ ಹಿತ್ವಾ ತತೋಽಸ್ತ್ರಂ ಸಂಹರಾಮ್ಯಹಮ್ ॥ ೫೮
ಇತ್ಯುಕ್ತೇ ತೇನ ಭಗವಾನವಾದೀತ್ತರ್ಹಿ ಮಾನಯ ।
ಚಕ್ರಂ ತ್ವಮಪಿ ಮೇ ಮಾ ಭೂದ್ವೈಫಲ್ಯಮುಭಯೋರಪಿ ॥ ೫೯
ಏತಚ್ಛೌರೇರ್ವಚಃ ಶ್ರುತ್ವಾ ಪ್ರಭಾಸಃ ಪ್ರಾಹ ಕಾಲವಿತ್ ।
ಏವಮಸ್ತು ರಥಂ ಹಂತು ಮಮ ಚಕ್ರಮಿದಂ ತವ ॥ ೬೦
ತಥೇತಿ ಹರಿಣಾ ದಾಮೋದರೇ ವ್ಯಾವರ್ತಿತೇ ರಣಾತ್ ।
ಪ್ರಭಾಸಃ ಸಂಜಹಾರಾಸ್ತ್ರಂ ಚಕ್ರಂ ಚಾಸ್ಯಾಪತದ್ರಥೇ ॥ ೬೧
ಆರುಹ್ಯಾನ್ಯಂ ರಥಂ ಸೋಽಥ ಯಯೌ ಸೂರ್ಯಪ್ರಭಾಂತಿಕಮ್ ।
ದಾಮೋದರೋಽಪಿ ಸ ಪ್ರಾಯಾಚ್ಛ್ರುತಶರ್ಮಾಂತಿಕಂ ತತಃ ॥ ೬೨
ತದಾ ಚ ವಾಸವಾಂಶತ್ವದೃಪ್ತಸ್ಯ ಶ್ರುತಶರ್ಮಣಃ ।
ಸೂರ್ಯಪ್ರಭಸ್ಯ ಚ ದ್ವಂದ್ವಯುದ್ಧಂ ಕಾಷ್ಠಾಂ ಪರಾಮಗಾತ್ ॥ ೬೩
ಶ್ರುತಶರ್ಮಾ ಪ್ರಯುಂಕ್ತೇ ಸ್ಮ ಯದ್ಯದಸ್ತ್ರಂ ಪ್ರಯತ್ನತಃ ।
ಪ್ರತ್ಯಸ್ತ್ರೈಃ ಪ್ರತಿಹಂತಿ ಸ್ಮ ತತ್ತತ್ಸೂರ್ಯಪ್ರಭಃ ಕ್ಷಣಾತ್ ॥ ೬೪

೬೫. ಯಾವ ಯಾವ ಮಾಯೆಗಳನ್ನು ಅವನು ತೋರುತ್ತಿದ್ದನೂ ಅವುಗಳನ್ನು ಸೂರ್ಯಪ್ರಭನು ಪ್ರತಿಮಾಯೆಯಿಂದ ಹಿಮ್ಮೆಟ್ಟಿಸುತ್ತಿದ್ದನು.

೬೬. ಇದರಿಂದ ತುಂಬ ಕೋಪಗೊಂಡ ಶ್ರುತಶರ್ಮನು ಬ್ರಹ್ಮಾಸ್ತ್ರವನ್ನೇ ಬಿಟ್ಟನು. ಅಸ್ತ್ರ ಬಲ್ಲವನಾದ ಸೂರ್ಯಪ್ರಭನು ಅದಕ್ಕೆ ಬದಲಾಗಿ ಪಾಶುಪತ ಅಸ್ತ್ರವನ್ನು ಬಿಟ್ಟನು.

೬೭–೬೮. ರುದ್ರಾವತಾರಿಯಾದ ಆ ಮಹಾಸ್ತ್ರವು ಬ್ರಹ್ಮಾಸ್ತ್ರವನ್ನು ಕಬಳಿಸಿ ಶ್ರುತಶರ್ಮನನ್ನು ಮುಗಿಸಲು ಮುಂದುವರೆಯುತ್ತಿರುವಾಗ ಸುತ್ತು ನಿಂತು ನೋಡುತ್ತಿದ್ದ ಇಂದ್ರನೇ ಮೊದಲಾದ ಲೋಕಪಾಲರೆಲ್ಲ ಇದನ್ನು ಸಹಿಸಲಾರದೆ ವಜ್ರ ಮೊದಲಾದ ತಮ್ಮ ತಮ್ಮ ಶ್ರೇಷ್ಠ ಆಯುಧಗಳನ್ನು ಪ್ರಯೋಗಿಸಿದರು.

೬೯. ಆದರೆ ಪಾಶುಪತಾಸ್ತ್ರವು ಆ ಎಲ್ಲ ಆಯುಧಗಳನ್ನೂ ಗೆದ್ದು ಶ್ರುತಶರ್ಮನನ್ನು ನುಂಗಲು ಮುನ್ನುಗ್ಗಿ ಪ್ರಜ್ವಲಿಸಿತು.

೭೦. ಆಗ ಸೂರ್ಯಪ್ರಭನು ಮಹಾಸ್ತ್ರವನ್ನು ಸ್ತುತಿಸಿ ಹೀಗೆ ವಿಜ್ಞಾಪಿಸಿಕೊಂಡನು; "ಶುತಶರ್ಮನನ್ನು ಕೊಲ್ಲದೆ, ಬಂಧಿಸಿ ನಮ್ಮ ವಶಕ್ಕೆ ಕೊಡು.'

೭೧. ಆಗ ಅಲ್ಲಿದ್ದ ಸುರರೆಲ್ಲ ಏನಾದರೂ ಮಾಡಬೇಕೆಂದುಕೊಂಡು ಒಗ್ಗಟ್ಟಾಗಿ ನಿಂತರು. ಅವರನ್ನು ಜಯಿಸುವ ಸಲುವಾಗಿ ಪ್ರೇಕ್ಷಕರಾಗಿದ್ದ ಅಸುರರೂ ಒಂದಾದರು.

---

ಮಾಯಾ ಯಾ ಯಾ ಚ ತೇನಾತ್ರ ಪ್ರಯುಕ್ತಾ ಶ್ರುತಶರ್ಮಣಾ ।
ಸೂರ್ಯಪ್ರಭೇಣ ಸಾ ಸಾಸ್ಯ ನಿಹತಾ ಪ್ರತಿಮಾಯಯಾ ॥ ೬೫
ತತೋ ಬ್ರಹ್ಮಾಸ್ತ್ರಮಮುಚಚ್ಛ್ರುತಶರ್ಮಾತಿಕೋಪತಃ ।
ಸೂರ್ಯಪ್ರಭೋಽಪಿ ಪ್ರಾಮುಂಚದಸ್ತ್ರಂ ಪಾಶುಪತಂ ಕೃತೀ ॥ ೬೬
ತೇನ ರೌದ್ರಮಹಾಸ್ತ್ರೇಣ ಬ್ರಹ್ಮಾಸ್ತ್ರಂ ಪ್ರತಿಹತ್ಯ ತತ್ ।
ಯಾವತ್ಸ ದುಷ್ಪ್ರಧರ್ಷೇಣ ಶ್ರುತಶರ್ಮಾಭಿಭೂಯ ತೇ ॥ ೬೭
ತಾವದಿಂದ್ರಪ್ರಭೃತಿಭಿರ್ಲೋಕಪಾಲೈಃ ಸಮಂತತಃ ।
ವಜ್ರಾದೀನಿ ಪ್ರಯುಕ್ತಾನಿ ಪರಮಾಸ್ತ್ರಾಣ್ಯಮರ್ಷಿಭಿಃ ॥ ೬೮
ತತ್ತು ಪಾಶುಪತಂ ತಾನಿ ಜಿತ್ವಾ ಸರ್ವಾಯುಧಾನ್ಯಪಿ ।
ಜಜ್ವಾಲ ಸುತರಾಮಸ್ತ್ರಂ ಶ್ರುತಶರ್ಮಜಿಘಾಂಸಯಾ ॥ ೬೯
ತತಃ ಸೂರ್ಯಪ್ರಭಃ ಸ್ತುತ್ವಾ ಮಹಾಸ್ತ್ರಂ ತದ್ವ್ಯಜಿಜ್ಞಪತ್ ।
ಮಾ ವಧೀಃ ಶ್ರುತಶರ್ಮಾಣಂ ಬದ್ಧ್ವಾ ತ್ವಂ ತಂ ಸಮರ್ಪಯ ॥ ೭೦
ತತಃ ಪ್ರಸಹ್ಯ ನಿಃಶೇಷೈಃ ಸಂನದ್ಧಮಭವತ್ಸುರೈಃ ।
ತಜ್ಜಿಗೀಷಾವಶಾಚ್ಚಾನ್ಯೈಃ ಪ್ರೇಕ್ಷಕೈರಸುರೈರಪಿ ॥ ೭೧

೭೨. ಆಗ ಶಂಭುವಿನಿಂದ ಪ್ರೇರಣೆ ಪಡೆದ ವೀರಭದ್ರನೆಂಬ ಗಣವು ಪ್ರತ್ಯಕ್ಷವಾಗಿ ಇಂದ್ರಾದಿದೇವತೆಗಳಿಗೆ ರುದ್ರನ ಆದೇಶವನ್ನು ಅರುಹಿತು.

೭೩. "ನೀವೆಲ್ಲರೂ ಯುದ್ಧವನ್ನು ನೋಡಲು ಬಂದವರು; ಸ್ವತಃ ಯುದ್ಧದಲ್ಲಿ ತೊಡಗುವುದು ಸರಿಯೆ ? ಇದು ಅಕ್ರಮ, ನಿಮ್ಮ ಮರ್ಯಾದೆಯ ಎಲ್ಲೆಯನ್ನು ಮೀರುವುದರಿಂದ ಮತ್ತೊಂದು ಎಡವಟ್ಟು ಮಾಡಿದಂತೆ ಆಗುತ್ತದೆ'.

೭೪–೭೫. ಅದನ್ನು ಕೇಳಿದ ದೇವತೆಗಳೆಲ್ಲ, "ನಮ್ಮ ಮಕ್ಕಳು ಈ ಯುದ್ಧದಲ್ಲಿ ಸತ್ತಿದ್ದಾರೆ, ಇನ್ನೂ ಸಾಯುತ್ತಿದ್ದಾರೆ. ಅಂದ ಮೇಲೆ ನಾವೇಕೆ ಯುದ್ಧಮಾಡಬಾರದು ? ಸುತಸ್ನೇಹವೆಂಬುದು ಅಷ್ಟು ಸುಲಭದಲ್ಲಿ ಬಿಟ್ಟುಹೋಗುವುದಿಲ್ಲ. ನಮ್ಮ ಮಕ್ಕಳನ್ನು ಕೊಂದವರ ಮೇಲೆ ಕೈಲಾದಷ್ಟು ಪ್ರತೀಕಾರ ಮಾಡುವುದರಲ್ಲಿ ಅಕ್ರಮವೇನು ಬಂತು ? ನಮ್ಮ ಪುತ್ರವಧೆಗೆ ತಕ್ಕ ಪ್ರತಿಕ್ರಿಯೆ ಆಗಿಯೇ ತೀರಬೇಕು.'

೭೬. ದೇವತೆಗಳು ಹೀಗೆಂದ ಮೇಲೆ ವೀರಭದ್ರ ಗಣವು ಹೊರಟುಹೋಯಿತು. ಬಳಿಕ ಸುರಾಸುರರ ನಡುವೆ ದೊಡ್ಡ ಯುದ್ಧವೇ ಪ್ರಾರಂಭವಾಯಿತು.

---

ತತ್‌ಕ್ಷಣಂ ವೀರಭದ್ರಾಖ್ಯಃ ಶಂಭುನಾ ಪ್ರೇರಿತೋ ಗಣಃ ।
ಆಗತ್ಯೈವ ತದಾದೇಶಮಿಂದ್ರಾದಿಭ್ಯೋಽಬ್ರವೀದಿದಮ್ ॥ ೭೨
ಯೂಯಂ ಪ್ರೇಕ್ಷಿತುಮಾಯಾತಾಸ್ತದ್ಯೋದ್ಧುಂ ವಃ ಕ್ರಮೋಽತ್ರ ಕಃ ।
ಮರ್ಯಾದಾಲಂಘನಾಚ್ಚಾನ್ಯದಪಿ ಸ್ಯಾದಸಮಂಜಸಮ್ ॥ ೭೩
ಏತಚ್ಛ್ರುತ್ವಾಬ್ರುವನ್‌ದೇವಾ ಹನ್ಯಂತೇ ಚ ಹತಾಶ್ಚ ನಃ ।
ಸರ್ವೇಷಾಮತ್ರ ತನಯಾಸ್ತನ್ನ ಯುಧ್ಯಾಮಹೇ ಕಥಮ್ ॥ ೭೪
ದುಸ್ತ್ಯಜೋ ಹಿ ಸುತಸ್ನೇಹಸ್ತದವಶ್ಯಂ ಪ್ರತಿಕ್ರಿಯಾ ।
ತನ್ನಿಹಂತೃಷು ಕರ್ತವ್ಯಾ ಯಥಾಶಕ್ತ್ಯತ್ರ ಕೋಽಕ್ರಮಃ ॥ ೭೫
ಇತ್ಯುಕ್ತವತ್ಸು ದೇವೇಷು ವೀರಭದ್ರೇ ತತೋ ಗತೇ ।
ಸುರಾಣಾಮಸುರಾಣಾಂ ಚ ಪ್ರಾವರ್ತತ ಮಹಾರಣಃ ॥ ೭೬

೭೭–೭೯. ಅಶ್ವಿನಿಗಳೊಡನೆ ಸುನೀಥನೂ, ಇಂದುವಿನೊಡನೆ ಪ್ರಜ್ಞಾಢ್ಯನು, ಸ್ಥಿರಬುದ್ಧಿಯು ವಸುಗಳೊಡನೆಯೂ, ಕಾಲಚಕ್ರನು ವಾಯುವಿನ ಜತೆ, ಪ್ರಕಂಪನನು ಅಗ್ನಿಯೊಡನೆ ಸಿಂಹದಂಷ್ಟ್ರನು ನಿರ್‌ಋತಿಯೊಡನೆ, ವರುಣನೊಡನೆ ಪ್ರಥಮನು, ಧೂಮಕೇತುವು ಯಮನೊಡನೆ, ಮಹಾಮಾಯನು ಕುಬೇರನೊಡನೆ–ಹೀಗೆ ಸುರರು ಮತ್ತು ಅಸುರರು ಅಸ್ತ್ರ ಪ್ರತ್ಯಸ್ತ್ರಗಳನ್ನು ಪ್ರಯೋಗಿಸುತ್ತ ಯುದ್ಧದಲ್ಲಿ ನಿರತರಾದರು.

೮೦. ಸುರರು ಬಿಟ್ಟ ಮಹಾಸ್ತ್ರಗಳನ್ನೆಲ್ಲ ಹರನು ತನ್ನ ಹುಂಕಾರದಿಂದಲೇ ನಾಶಮಾಡುತ್ತಿದ್ದನು.

೮೧. ಗದೆಯನ್ನೆತ್ತಿದ ಕುಬೇರನನ್ನು ಶರ್ವನು ಎದುರಿಸಿದನು. ತಮ್ಮ ಅಸ್ತ್ರಗಳು ಭಗ್ನಗೊಂಡದ್ದನ್ನು ಕಂಡು ಸುರರೆಲ್ಲ ಯುದ್ಧಬಿಟ್ಟು ಹೊರಟರು.

೮೨. ಆಗ ಕುಪಿತನಾದ ಶಕ್ರನು ಸ್ವತಃ ಸೂರ್ಯಪ್ರಭನನ್ನು ಯುದ್ಧದಲ್ಲಿ ತೊಡಗಿಸಿದನು. ಅವನ ಮೇಲೆ ಬಾಣಗಳ ಪ್ರವಾಹವನ್ನೇ ಹರಿಸಿದನು. ತನ್ನಲ್ಲಿದ್ದ ಆಯುಧಗಳನ್ನೆಲ್ಲ ಪ್ರಯೋಗಿಸಿದನು.

೮೩. ಸೂರ್ಯಪ್ರಭನು ಅವುಗಳನ್ನೆಲ್ಲ ಸುಲಭವಾಗಿ ಧೂಳೀಪಟಮಾಡಿ ನೂರಾರು ಬಾಣಗಳನ್ನು ಆಕರ್ಣಾಂತ ಸೆಳೆದು ಬಲವಾಗಿ ಪ್ರಯೋಗಿಸಿ ಇಂದ್ರನನ್ನು ಥಳಿಸಿದನು.

---

ಸುನೀಥಃ ಸಮಮಶ್ವಿಭ್ಯಾಂ ಪ್ರಜ್ಞಾಢ್ಯಶ್ಚ ಸಹೇಂದುನಾ ।
ಸ್ಥಿರಬುದ್ಧಿಶ್ಚ ವಸುಭಿಃ ಕಾಲಚಕ್ರಶ್ಚ ವಾಯುನಾ ॥ ೭೭
ಪ್ರಕಂಪನೋಽಗ್ನಿನಾ ಸಿಂಹದಂಷ್ಟ್ರೋ ನಿರ್ಋತಿನಾ ತಥಾ ।
ವರುಣೇನ ಪ್ರಥಮನೋ ಧೂಮಕೇತುರ್ಯಮೇನ ಚ ॥ ೭೮
ಮಹಾಮಾಯಃ ಸ ಚ ತದಾ ಧನಾಧಿಪತಿನಾ ಸಹ ।
ಅಯುಧ್ಯತಾಸ್ತ್ರಪ್ರತ್ಯಸ್ತ್ರೈರನ್ಯೋನ್ಯೈಶ್ಚ ಸಮಂ ಸುರೈಃ ॥ ೭೯
ಪರ್ಯಂತೇ ಪರಮಾಸ್ತ್ರಂ ಚ ಯೋ ಯೋ ಯದ್ಯತ್ಸುರೋಽಕ್ಷಿಪತ್ ।
ತಸ್ಯ ತಸ್ಯ ಹರಸ್ತತ್ತದ್ಧುಂಕಾರೇಣ ವ್ಯನಾಶಯತ್ ॥ ೮೦
ಧನದಸ್ತೂದ್ಯತಗದಃ ಸಾಮ್ನಾ ಶರ್ವೇಣ ವಾರಿತಃ ।
ಭಗ್ನಾಸ್ತ್ರಾಶ್ಚ ಸುರಾಸ್ತೇ ತೇ ಪರಿತ್ಯಜ್ಯಾಹವಂ ಯಯುಃ ॥ ೮೧
ತತಃ ಸೂರ್ಯಪ್ರಭಂ ಶಕ್ರಃ ಸ್ವಯಂ ಕ್ರೋಧಾದಯೋಧಯತ್ ।
ಶರೌಘಮಮುಚತ್ತಸ್ಮಿಂಸ್ತಾನಿ ತಾನ್ಯಾಯುಧಾನಿ ಚ ॥ ೮೨
ಸೂರ್ಯಪ್ರಭಶ್ಚ ನಿರ್ಧೂಯ ತದಸ್ತ್ರಾಣ್ಯವಹೇಲಯಾ ।
ಆಕರ್ಣಾಕೃಷ್ಟನಾರಾಚಶತೇನೇಂದ್ರಮತಾಡಯತ್ ॥ ೮೩

೮೪. ಇದರಿಂದ ಕ್ರುದ್ಧನಾದ ಸುರೇಂದ್ರನು ವಜ್ರಾಯುಧವನ್ನೇ ಪ್ರಯೋಗಿಸಲು ಮುಂದಾದನು. ಹರನಾದರೋ ಹುಂಕಾರದಿಂದ ಅದನ್ನು ನಾಶಮಾಡಿದನು.

೮೫. ಇದರಿಂದ ಇಂದ್ರನು ಹಿಮ್ಮೆಟ್ಟಿದನು. ಆಗ ಸ್ವಯಂ ನಾರಾಯಣನೇ ಪ್ರಭಾಸನೊಡನೆ ಯುದ್ಧಕ್ಕೆ ನಿಂತು ಚೂಪಾದ ಬಾಣಗಳ ಮಳೆಯನ್ನೇ ಅವನ ಮೇಲೆ ಸುರಿಸಲಾರಂಭಿಸಿದನು.

೮೬. ಇದರಿಂದ ಬೆದರದ ಅವನು ಅಸ್ತ್ರಶಸ್ತ್ರಗಳಿಂದ ಧೈರ್ಯವಾಗಿ ಯುದ್ಧ ಮಾಡಿದನು. ಕುದುರೆಗಳನ್ನು ಕಳೆದುಕೊಂಡು ರಥವಿಹೀನನಾದರೂ ಮತ್ತೊಂದು ರಥವನ್ನು ಹತ್ತಿದನು.

೮೭. ಹೀಗೆ ಹರಿಯೊಡನೆ ಅವನು ಸಮಸಮವಾಗಿ ಯುದ್ಧಕ್ಕೆ ನಿಂತಾಗ, ಕುಪಿತನಾದ ದೇವನು ಅವನ ಮೇಲೆ ಜ್ವಲಿಸುವ ಚಕ್ರವನ್ನು ಎಸೆದನು.

೮೮. ಪ್ರಭಾಸನೂ ತನ್ನ ದಿವ್ಯವಾದ ಖಡ್ಗವನ್ನು ಅಭಿಮಂತ್ರಿಸಿ ಅವನ ಮೇಲೆ ಪ್ರಯೋಗಿಸಿದನು. ಎರಡೂ ಆಯುಧಗಳೂ ಪರಸ್ಪರ ಹೋರಾಡತೊಡಗಿದವು.

೮೯. ಚಕ್ರದಿಂದ ಖಡ್ಗವು ಇನ್ನೇನು ಸೋಲುತ್ತಿದೆ ಎನ್ನುವಾಗ ಹರನು ಹುಂಕಾರವನ್ನು ಮಾಡಿದನು. ಅದರಿಂದ ಎರಡೂ ಆಯುಧಗಳೂ ಅಂತರ್ಧಾನವಾದವು.

೯೦. ಇದರಿಂದ ಅಸುರರೆಲ್ಲ ಸಂತೋಷದಿಂದ ಕುಣಿದಾಡಿದರು. ಅಮರರು ಶೋಕದಲ್ಲಿ ಮುಳುಗಿದರು. ಸೂರ್ಯಪ್ರಭನು ಜಯಿಸಿದನು, ಶ್ರುತಶರ್ಮನು ಸೆರೆಯಾದನು.

---

ತತಃ ಕ್ರುದ್ಧಃ ಸ ಕುಲಿಶಂ ಜಗ್ರಾಹ ಚ ಸುರಾಧಿಪಃ ।
ಹುಂಕಾರಂ ಚಾಕರೋದ್ರುದ್ರಃ ಕುಲಿಶಂ ಚ ನನಾಶ ತತ್ ॥ ೮೪

ತತಃ ಪರಾಙ್ಮುಖೇ ಯಾತೇ ಶಕ್ರೇ ನಾರಾಯಣಃ ಸ್ವಯಮ್ ।
ಪ್ರಭಾಸಂ ಯೋಧಯಾಮಾಸ ಕ್ರೋಧಾತ್ಕೋಟೀಮುಖೈಃ ಶರೈಃ ॥ ೮೫

ಅಸ್ತ್ರಾಣ್ಯನ್ಯಾನಿ ಚಾಪ್ಯಸ್ತ್ರೈರ್ನಿಷ್ಕಂಪೋ ಯುಯುಧೇ ಸಮಮ್ ।
ಹತಾಶ್ವೋ ವಿರಥೀಭೂತೋಽಪ್ಯಾರುಹ್ಯಾಂತಂ ರಥಂ ಚ ಸಃ ॥ ೮೬

ತೇನ ದೈತ್ಯಾರಿಣಾ ಸಾರ್ಧಂ ನಿರ್ವಿಶೇಷಮಯುಧ್ಯತ ।
ತತಃ ಪ್ರಕುಪಿತೋ ದೇವೋ ಜ್ವಲಚ್ಚಕ್ರಂ ಮುಮೋಚ ಸಃ ॥ ೮೭

ಪ್ರಭಾಸೋಽಪ್ಯಭಿಮಂತ್ರ್ಯೈವ ದಿವ್ಯಂ ಖಡ್ಗಂ ಪ್ರಮುಕ್ತವಾನ್ ।
ತಯೋರಾಯುಧಯೋರ್ಯುಧ್ಯಮಾನಯೋರ್ವೀಕ್ಷ್ಯ ಚಕ್ರತಃ ॥ ೮೮

ಹೀಯಮಾನಂ ಶನೈಃ ಖಡ್ಗಂ ಹುಂಕಾರಂ ಕೃತವಾನ್ ಹರಃ ।
ತೇನ ತೇ ಖಡ್ಗಚಕ್ರೇ ದ್ವೇ ಅಂತರ್ಧಾನಮುಪೇಯತುಃ ॥ ೮೯

ತತೋ ನನಂದುರಸುರಾ ವಿಷೀದಂತಿ ಸ್ಮ ಚಾಮರಾಃ ।
ಸೂರ್ಯಪ್ರಭೇ ಲಬ್ಧಜಯೇ ಬದ್ಧೇ ಚ ಶ್ರುತಶರ್ಮಣಿ ॥ ೯೦

೯೧. ಆಗ ಸುರರೂ ಕೂಡ ವೃಷಧ್ವಜನನ್ನು ಆರಾಧಿಸಿದರು. ಅದರಿಂದ ತುಷ್ಟನಾದ ಅಂಬಿಕಾಪತಿಯು ಸುರರನ್ನು ಕುರಿತು ಹೀಗೆಂದನು.

೯೨-೯೫. "ಸೂರ್ಯಪ್ರಭನಿಗೆ ಕೊಟ್ಟ ಮಾತೊಂದನ್ನು ಬಿಟ್ಟು ಬೇರೆಯ ವರವನ್ನು ಕೇಳಿರಿ', ಆಗ ದೇವತೆಗಳು, 'ದೇವ, ನೀನು ಹೇಳಿದ ಮೇಲೆ ಅದನ್ನು ಇಲ್ಲವಾಗಿಸಲು ಯಾರಿಗೆ ತಾನೆ ಸಾಧ್ಯ ? ಆದರೆ ನಾವು ಶ್ರುತಶರ್ಮನಿಗೆ ನೀಡಿದ ವಚನವನ್ನು ಉಳಿಸಿಕೊಳ್ಳಬೇಕು. ಆದ್ದರಿಂದ ಅದನ್ನು ಕರುಣಿಸು. ನಮ್ಮ ಅಂಶಕ್ಷಯವಾಗದಂತೆ ಕಾಪಾಡು' ಎಂದು ಹೇಳಲಾಗಿ ಅವರಿಗೆ ಹರನು ಈ ರೀತಿ ಆದೇಶ ನೀಡಿದನು. "ನೀವು ಸಂಧಿ ಮಾಡಿಕೊಂಡರೆ ನಿಮ್ಮ ಮಾತು ಉಳಿಯುತ್ತದೆ. ಈಗಲೇ ಇಲ್ಲೇ ಸಂಧಿಯಾಗಲಿ. ಶ್ರುತಶರ್ಮನು ತನ್ನ ಅನುಚರರೊಡನೆ ಸೂರ್ಯಪ್ರಭನಿಗೆ ನಮಸ್ಕರಿಸಲಿ. ಆಗ ಎರಡೂ ಪಕ್ಷಗಳಿಗೂ ಹಿತವಾದ ಮಾತನ್ನು ಹೇಳುತ್ತೇನೆ'.

೯೬ ಈಶ್ವರನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿ ಸೂರ್ಯಪ್ರಭನಿಗೆ ಶ್ರುತಶರ್ಮನಿಂದ ಪ್ರಣಾಮ ಮಾಡಿಸಿದರು.

೯೭ ನಂತರ ವೈರಕಳೆದು ಸ್ನೇಹದಿಂದ ಒಬ್ಬರನ್ನೊಬ್ಬರು ಕಂಠಾಲಿಂಗನ ಮಾಡಿಕೊಂಡು ದೇವತೆಗಳೂ ಅಸುರರೂ ಶಾಂತರಾಗಿ ಸಂಧಿಯನ್ನು ಮಾಡಿಕೊಂಡರು.

---

ಸಂಸ್ತುತ್ಯಾರಾಧಯಾಮಾಸುರಥ ದೇವಾ ವೃಷಧ್ವಜಮ್ ।
ತತಸ್ತುಷ್ಟಃ ಸುರಾನೇವಮಾದಿದೇಶಾಂಬಿಕಾಪತಿಃ ॥ ೯೧
ಸೂರ್ಯಪ್ರಭ ಪ್ರತಿಜ್ಞಾತಂ ವರ್ಜಯಿತ್ವಾರ್ಥ್ಯತಾಂ ವರಃ ।
ದೇವ ಯತ್ತೇ ಪ್ರತಿಜ್ಞಾತಂ ಕಃ ಶಕ್ತಃ ಕರ್ತುಮನ್ಯಥಾ ॥ ೯೨
ಕಿಂ ತ್ವಸ್ಮಾಭಿಃ ಪ್ರತಿಜ್ಞಾತಂ ಯದಸ್ಯ ಶ್ರುತಶರ್ಮಣಃ ।
ಸತ್ಯಂ ತದಪ್ಯಸ್ತು ವಿಭೋ ಮಾ ಭೂದಂಶಕ್ಷಯಶ್ಚ ನಃ ॥ ೯೩
ಇತ್ಯುಕ್ತ್ವಾ ವಿರತಾಂದೇವಾನ್‌ಭಗವಾನೇವಮಾದಿಶತ್ ।
ಸಂಧೌ ಕೃತೇ ಭವತ್ಯೇತತ್ಸಂಧಿಶ್ಚೈವಮಿಹಾಸ್ತು ವಃ ॥ ೯೪
ಸೂರ್ಯಪ್ರಭಂ ಪ್ರಣಮತು ಶ್ರುತಶರ್ಮಾ ಸಹಾನುಗಃ ।
ತತಸ್ತಥಾ ವದಿಷ್ಯಾಮೋ ಯಥೋಭಯಹಿತಂ ಭವೇತ್ ॥ ೯೫
ಇತೀಶ್ವರವಚೋ ದೇವಾಃ ಪ್ರತಿಪದ್ಯ ತಥೇತಿ ಚ ।
ಸೂರ್ಯಪ್ರಭಸ್ಯ ವಿದಧುಃ ಶ್ರುತಶರ್ಮಾಣಮಾನತಮ್ ॥ ೯೬
ತತಸ್ತಯೋರ್ಮಿಥಸ್ತ್ಯಕ್ತವೈರಯೋಃ ಕಂಠಲಗ್ನಯೋಃ ।
ಸಂಧಿಂ ದೇವಾಸುರಾಶ್ಚಕ್ರುಃ ಶಾಂತವೈರಾಃ ಪರಸ್ಪರಮ್ ॥ ೯೭

೯೮. ಎಲ್ಲ ಸುರಾಸುರರೂ ಕುಳಿತು ಕೇಳುತ್ತಿರುವಾಗ ಭಗವಾನ್ ಹರನು ಸೂರ್ಯಪ್ರಭನನ್ನು ಕುರಿತು ಈ ಮಾತನ್ನು ಹೇಳಿದನು.

೯೯. "ನೀನು ದಕ್ಷಿಣವೇದಿಯ ಅರ್ಧಕ್ಕೆ ಚಕ್ರವರ್ತಿಯಾಗು. ಉತ್ತರವೇದಿಯ ಅರ್ಧಭಾಗವನ್ನು ಶ್ರುತಶರ್ಮನಿಗೆ ಕೊಡು.

೧೦೦. ಶೀಘ್ರದಲ್ಲಿಯೇ ನೀನು ಇದಕ್ಕಿಂತ ನಾಲ್ಕು ಪಟ್ಟು ದೊಡ್ಡದಾದ ಸಾಮ್ರಾಜ್ಯವನ್ನು ಪಡೆಯುತ್ತೀಯೆ. ಕಿನ್ನರರೇ ಮೊದಲಾದ ಎಲ್ಲ ಆಕಾಶಗಾಮಿಗಳ ರಾಜ್ಯಕ್ಕೂ ನೀನು ಒಡೆಯನಾಗಲಿರುವೆ.

೧೦೧. ಅದನ್ನು ಪಡೆದ ನಂತರ ನಿನ್ನ ಬಳಿಯಿರುವ ದಕ್ಷಿಣವೇದಿಯನ್ನು ಕುಂಜರ ಕುಮಾರನಿಗೆ ಕೊಡಬಹುದು. ಏಕೆಂದರೆ ಆಗ ನೀನು ವಿಶೇಷ ಪದವಿಯಲ್ಲಿ ನೆಲೆಯಾಗಿರುತ್ತೀಯೆ.

೧೦೨–೧೦೩. ಈ ಯುದ್ಧದಲ್ಲಿ ಸತ್ತಿರುವ ಎರಡೂ ಪಕ್ಷಗಳ ವೀರರೂ ಜೀವತಳೆದು ಅಕ್ಷತರಾಗಿ ಎದ್ದು ನಿಲ್ಲಲಿ' ಎಂದು ಹೇಳಿ ಶಂಭುವು ಅಂತರ್ಧಾನನಾಗಲಾಗಿ ಸತ್ತು ಬಿದ್ದಿದ್ದ ಎಲ್ಲ ವೀರರೂ ನಿದ್ದೆಯಿಂದ ಎಚ್ಚರಗೊಂಡವರಂತೆ ಸುಖವಾಗಿ ಎದ್ದುನಿಂತರು. ನೋವು ಗಾಯಗಳೆಲ್ಲ ಮಾಯವಾಗಿದ್ದವು.

---

ಅಥ ಶೃಣ್ವತ್ಸು ನಿಖಿಲೇಷ್ವಸುರೇಷು ಸುರೇಷು ಚ ।
ಉವಾಚ ಭಗವಾನ್ ಶಂಭುಃ ಸೂರ್ಯಪ್ರಭಮಿದಂ ವಚಃ ॥ ೯೮
ಕುರು ದಕ್ಷಿಣವೇದ್ಯರ್ಧೇ ಚಕ್ರವರ್ತಿತ್ವಮಾತ್ಮನಃ ।
ಉತ್ತರಸ್ಮಿಂಸ್ತು ವೇದ್ಯರ್ಧೇ ದೇಹಿ ತಚ್ಛ್ರುತಶರ್ಮಣೇ ॥ ೯೯
ಪ್ರಾಪ್ತವ್ಯಮಚಿರಾತ್ತುತ್ರ ತ್ವಯಾ ಹೀತಶ್ಚತುರ್ಗುಣಮ್ ।
ಸಾಮ್ರಾಜ್ಯಂ ಕಿಂನರಾದೀನಾಮಶೇಷಾಣಾಂ ದ್ಯುಚಾರಿಣಾಮ್ ॥ ೧೦೦
ತಸ್ಮಿನ್ಪ್ರಾಪ್ತೇ ಚ ದದ್ಯಾಸ್ತ್ವಂ ವೇದ್ಯರ್ಧಮಪಿ ದಕ್ಷಿಣಮ್ ।
ತತ್ಕುಂಜರಕುಮಾರಾಯ ಸವಿಶೇಷಪದೇ ಸ್ಥಿತಃ ॥ ೧೦೧
ಯೇ ಚಾತ್ರ ನಿಹತಾ ವೀರಾಃ ಸಮಿತ್ಯುಭಯಪಕ್ಷಯೋಃ ।
ಉತ್ತಿಷ್ಠಂತ್ವಕ್ಷತೈರಂಗೈರ್ಜೀವಂತಃ ಸರ್ವ ಏವ ತೇ ॥ ೧೦೨
ಇತ್ಯುಕ್ತ್ವಾಂತರ್ದಧೇ ಶಂಭುಃ ಸರ್ವೇ ಚೋತ್ತಸ್ಥುರಕ್ಷತಾಃ ।
ಸುಪ್ತಪ್ರಬುದ್ಧಾ ಇವ ತೇ ಯೇಽತ್ರಾಭೂವನ್ರಣೇ ಹತಾಃ ॥ ೧೦೩

೧೦೪,೧೦೫. ಬಳಿಕ ಅರಿಂದಮನಾದ ಸೂರ್ಯಪ್ರಭನು ಹರನ ಶಾಸನವನ್ನು ತಲೆಯಲ್ಲಿ ಹೊತ್ತವನಾಗಿ ಪ್ರತ್ಯೇಕವಾದ ವಿಸ್ತೀರ್ಣವಾದ ಭೂಮಿಗೆ ಹೋಗಿ ಎತ್ತರವಾದ ಆಸನದಲ್ಲಿ ಕುಳಿತನು. ಅಲ್ಲಿಗೆ ಬಂದ ಶ್ರುತಶರ್ಮನನ್ನು ತನ್ನ ಸಿಂಹಾಸನದ ಅರ್ಧಭಾಗದಲ್ಲಿ ತಾನಾಗಿಯೇ ಕೂರಿಸಿಕೊಂಡನು.

೧೦೬. ಸೂರ್ಯಪ್ರಭನ ಗೆಳೆಯರಾದ ಪ್ರಭಾಸಾದಿಗಳೂ ಶ್ರುತಶರ್ಮನ ಸ್ನೇಹಿತರಾದ ದಾಮೋದರಾದಿಗಳೂ ಅವರವರ ಪಕ್ಕದಲ್ಲಿ ಕುಳಿತರು.

೧೦೭. ಸುನೀಥ, ಮಯ ಮುಂತಾದ ಇನ್ನೂ ಅನೇಕ ದಾನವ ವೀರರು ಉಚಿತವಾದ ಆಸನಗಳಲ್ಲಿ ಕುಳಿತರು. ಹಾಗೆಯೇ ವಿದ್ಯಾಧರರೂ ಕೂಡ ಯಥೋಚಿತ ಆಸನಗಳಲ್ಲಿ ಆಸೀನರಾದರು.

೧೦೮. ಬಳಿಕ ಅಲ್ಲಿಗೆ ಸಪ್ತಪಾತಾಳಲೋಕದ ಪತಿಗಳಾದ ಪ್ರಹ್ಲಾದನೇ ಮೊದಲಾದ ದೈತ್ಯ ದಾನವೇಂದ್ರರೂ ಸಂತೋಷದಿಂದ ಬಂದು ಸೇರಿದರು.

೧೦೯. ಇಂದ್ರನೂ ತನ್ನ ಗುರುವಾದ ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಲೋಕಪಾಲಕರೊಡಗೂಡಿ ಅಲ್ಲಿಗೈತಂದನು.

೧೧೦. ಭೂತಾಸನ ವಿಮಾನವನ್ನೇರಿ ಕಶ್ಯಪಮಹರ್ಷಿಯ ಪತ್ನಿಯರಾದ ದನು ಮುಂತಾದ ಸ್ತ್ರೀಯರೂ ಸೂರ್ಯಪ್ರಭನ ಪತ್ನಿಯರೂ ಕೂಡ ಅಲ್ಲಿ ಬಂದು ಸೇರಿದರು.

---

ಅಥ ಸೂರ್ಯಪ್ರಭೋ ಮೂರ್ಧ್ನಿ ಧೃತಶಾಂಭವಶಾಸನಃ ।
ಗತ್ವಾ ವಿವಿಕ್ತಂ ವಿಸ್ತೀರ್ಣಂ ಭೂಮಿಭಾಗಮರಿಂದಮಃ ॥ ೧೦೪
ಉಪವಿಷ್ಟೋ ಮಹಾಸ್ಥಾನೇ ಶ್ರುತಶರ್ಮಾಣಮಾಗತಮ್ ।
ನಿಜಸಿಂಹಾಸನಾರ್ಧೇ ತಮುಪಾವೇಶಿತವಾನ್ಸ್ವಯಮ್ ॥ ೧೦೫
ತದ್ವಯಸ್ಯಾಃ ಪ್ರಭಾಸಾದ್ಯಾ ವಯಸ್ಯಾಃ ಶ್ರುತಶರ್ಮಣಃ ।
ದಾಮೋದರಾದ್ಯಾಶ್ಚ ತಯೋಃ ಪಾರ್ಶ್ವಯೋಃ ಸಮುಪಾವಿಶನ್ ॥ ೧೦೬
ಉಪಾವಿಶತ್ಸುನೀಥಶ್ಚ ಮಯಶ್ಚಾನ್ಯೇ ಚ ದಾನವಾಃ ।
ಆಸನೇಷು ಯಥಾರ್ಹೇಷು ತಥಾ ವಿದ್ಯಾಧರೇಶ್ವರಾಃ ॥ ೧೦೭
ತತಸ್ತತ್ರಾಯಯುಃ ಸಪ್ತಪಾತಾಲಪತಯೋಽಖಿಲಾಃ ।
ಪ್ರಹ್ಲಾದಪ್ರಮುಖಾ ದೈತ್ಯದಾನವೇಂದ್ರಾಃ ಪ್ರಹರ್ಷತಃ ॥ ೧೦೮
ಶಕ್ರಶ್ಚ ಲೋಕಪಾಲಾದಿಯುತೋ ಗುರುಪುರಃಸರಃ ।
ವಿದ್ಯಾಧರಃ ಸುಮೇರುಶ್ಚ ಸ ಸುವಾಸಕುಮಾರಕಃ ॥ ೧೦೯
ದನುಪ್ರಭೃತಯಃ ಸರ್ವಾಶ್ಚಾಯಯುಃ ಕಶ್ಯಪಾಂಗನಾಃ ।
ಭೂತಾಸನವಿಮಾನೇನ ಭಾರ್ಯಾಃ ಸೂರ್ಯಪ್ರಭಸ್ಯ ಚ ॥ ೧೧೦

೧೧. ಅಲ್ಲಿ ಹೀಗೆ ಬಂದು ಸೇರಿದುವರೆಲ್ಲ ಪರಸ್ಪರ ಪ್ರೀತಿಯ ಮಾತುಗಳನ್ನಾಡುತ್ತ ಮಿಲನದ ಸಂತೋಷವನ್ನು ಸವಿಯುತ್ತ ಕುಳಿತಿರಲಾಗಿ, ಸಿದ್ಧಿಯೆಂಬ ದನುವಿನ ಸಖಿಯು ಅವರನ್ನು ಕುರಿತು ದನುವು ಹೇಳಿದುದನ್ನು ಹೇಳಿದಳು.

೧೨–೧೩. ಎಲೈ ಸುರರೇ ಮತ್ತು ಅಸುರರೇ, ಈ ದೇವಿಯಾದ ದನುವು ನಿಮ್ಮೆಲ್ಲರನ್ನೂ ಕುರಿತು ಹೇಳುವ ಮಾತಿದು. "ಈ ಸಂತೋಷಕೂಟದಲ್ಲಿ ಇಂದು ನಾವು ಅನುಭವಿಸಿದ ಸೌಮನಸ್ಯವನ್ನೂ ಸುಖವನ್ನೂ ನೀವುಗಳು ಹಿಂದೆಂದಾರೂ ಅನುಭವಿಸಿದ್ದೀರಾ ? ಪರಸ್ಪರ ವಿರೋಧವನ್ನು ಮಾಡಬಾರದು, ಅದು ಬಹಳ ದುಃಖದಿಂದ ಕೂಡಿ ದಾರುಣವಾದುದ್ದು.

೧೪–೧೫. ಹಿರಣ್ಯಾಕ್ಷನೇ ಮೊದಲಾದ ದಾನದ ವೀರರು ಹಿಂದೆ ಸ್ವರ್ಗಪ್ರಾಪ್ತಿಗಾಗಿ ಯುದ್ಧಮಾಡಿ ಮಡಿದಿದ್ದಾರೆ. ಇಂದು ಇರುವವರಲ್ಲಿ ಶಕ್ರನೇ ಹಿರಿಯನು ಅಂದಮೇಲೆ ವಿರೋಧವೇಕೆ ? ಇನ್ನು ಮುಂದಾದರೂ ವೈರಭಾವವನ್ನು ಬಿಟ್ಟು ಎಲ್ಲರೂ ಸುಖವಾಗಿರಬೇಕೆಂಬುದೇ ನನ್ನ ಆಸೆ. ಇದರಿಂದ ನನಗೆ ಸಂತೊಷವಾಗುವುದಷ್ಟೇ ಅಲ್ಲ, ಜಗತ್ತಿಗೂ ಮಂಗಳವಾಗುತ್ತದೆ.'

೧೬. ಸಿದ್ಧಿಯ ಬಾಯಿಂದ ದನುದೇವಿಯ ಈ ಮಾತನ್ನು ಕೇಳಿ ಶಕ್ರನು ಬೃಹಸ್ಪತಿಯ ಮುಖ ನೋಡಿದನು. ನಂತರ ಆಕೆಯನ್ನು ಕುರಿತು ಬೃಹಸ್ಪತಿಯು ಇಂತೆಂದನು.

---

ಸರ್ವೇಷ್ವೇಷು ಕೃತಾನ್ಯೋನ್ಯಪ್ರೀತ್ಯಾಚಾರೋಪವೇಶಿಷು ।
ಸಿದ್ಧಿರ್ನಾಮ ಸಖೀ ದನ್ವಾಸ್ತದ್ವಾಕ್ಯೈರ್ನೈವಮಭ್ಯಧಾತ್ ॥ ೧೧
ಭೋ ಭೋಃ ಸುರಾಸುರಾ ದೇವೀ ದನುರ್ಯುಷ್ಮಾನ್ಬ್ರವೀತ್ಯಸೌ ।
ಅಸ್ಮಿನ್ ಪ್ರೀತಿಸಮಾಜೇ ಯತ್ಸೌಮನಸ್ಯಂ ಸುಖಂ ಚ ನಃ ॥ ೧೨
ತದ್ಬ್ರೂತ ಯದಿ ಯುಷ್ಮಾಭಿರನುಭೂತಂ ಕದಾಚನ ।
ತದನ್ಯೋನ್ಯಂ ನ ಕರ್ತವ್ಯೋ ವಿರೋಧೋ ದುಃಖದಾರುಣಃ ॥ ೧೩
ಹಿರಣ್ಯಾಕ್ಷಾದಿಭಿರ್ಜ್ಯೇಷ್ಠೈರ್ದ್ಯುರಾಜ್ಯಾಯ ಕೃತಃ ಸ ಯೈಃ ।
ತೇ ಗತಾಃ ಶಕ್ರ ಏವಾದ್ಯ ಜ್ಯೇಷ್ಠಸ್ತತ್ಕಾ ವಿರೋಧಿತಾ ॥ ೧೪
ನಿರ್ವೈರಸುಖಿತಾಸ್ತಸ್ಮಾದ್ವರ್ತಧ್ವಮಿತರೇತರಮ್ ।
ಅಸ್ಮಾಕಂ ಯೇನ ಸಂತೋಷಃ ಶಿವಂ ಚ ಜಗತಾಂ ಭವೇತ್ ॥ ೧೫
ಇತಿ ಸಿದ್ಧಿಮುಖಾಚ್ಛ್ರುತ್ವಾ ಭಗವತ್ಯಾ ದನೋರ್ವಚಃ ।
ಶಕ್ರೇಣ ವೀಕ್ಷಿತಮುಖೋ ಬೃಹಸ್ಪತಿರುವಾಚ ತಾಮ್ ॥ ೧೬

೧೧೭. "ದೇವತೆಗಳಿಗೆ ಅಸುರರನ್ನು ಕುರಿತು ಯಾವ ದುರಾಗ್ರಹವೂ ಇಲ್ಲದಿದ್ದರೂ ಅವರು ದೇವತೆಗಳನ್ನು ಕುರಿತು ಏನಾದರೊಂದು ಮನೋವಿಕಾರವನ್ನು ತೋರುತ್ತಲೇ ಇರುತ್ತಾರೆ'

೧೧೮-೧೧೯. ದೇವಗುರುವಿನ ಈ ಮಾತನ್ನು ಕೇಳಿ ದಾನವೇಂದ್ರನಾದ ಮಯನು, "ಇರಬಹುದು, ಅಸುರರು ವಿಕಾರವನ್ನೇ ತೋರುತ್ತಿರುವವರಾದರೆ ನಮುಚಿಯು ಮೃತ ಸಂಜೀವನ ಅಶ್ವವಾದ ಉಚ್ಚೈಃ ಶ್ರವಸ್ಸನ್ನು ಇಂದ್ರನಿಗೆ ಹೇಗೆ ಕೊಡುತ್ತಿದ್ದನು ? ಪ್ರಬಲನು ತನ್ನ ದೇಹವನ್ನೇ ಸುರರಿಗಾಗಿ ಹೇಗೆ ಅರ್ಪಿಸುತ್ತಿದ್ದನು ?

೧೨೦. ಮೂರು ಲೋಕಗಳನ್ನು ಹರಿಗೆ ದಾನಮಾಡಿ ಬಲಿಯು ತಾನಾಗಿಯೇ ಕಾರಾಗಾರದಲ್ಲಿ ಹೇಗೆ ಬಂದಿಯಾಗಿರುತ್ತಿದ್ದ ? ಅಯೋದೇಹಿಯು ವಿಶ್ವಕರ್ಮನಿಗೆ ತನ್ನ ದೇಹವನ್ನು ಕೊಟ್ಟಿದ್ದಾದರೂ ಹೇಗೆ ?

೧೨೧. ಹೆಚ್ಚು ಹೇಳುವುದರಿಂದೇನು ಪ್ರಯೋಜನ ? ಒಂದು ಮಾತಿನಲ್ಲಿ ಮುಗಿಸುತ್ತೇನೆ ಮೋಸದಿಂದ ತಮಗೆ ಬಾಧೆ ಮಾಡದಿದ್ದಲ್ಲಿ ಅಸುರರು ದೇವತೆಗಳನ್ನು ನಿತ್ಯವೂ ಗೌರವಿಸುವವರೇ ಅವರಿಂದ ದೇವತೆಗಳಿಗೆ ಯಾವ ಅಪಕಾರವೂ ಆಗುವುದಿಲ್ಲ.'

೧೨೨. ಮಯಾಸುರನು ಹೀಗೆ ಹೇಳಲು ಸಿದ್ಧಿಯು ಮೊದಲೇ ತಿಳಿಸಿದ ಮಾತಿನಂತೆ ದೇವಾಸುರನು ಪರಸ್ಪರ ಪ್ರೀತಿಯನ್ನು ತೋರಿ ಕಂಠಾಲಿಂಗನ ಮಾಡಿಕೊಂಡರು.

---

ನಾನುಬಂಧೋಽಸ್ತಿ ದೇವಾನಾಮಸುರಾನ್ ಪ್ರತಿ ಕಶ್ಚನ ।
ವಿಕುರ್ವತೇ ನ ಯದ್ಯೇತೇ ಮಿಥ್ಯಾ ದೇವಾನಿಮಾನ್ ಪ್ರತಿ ॥ ೧೧೭
ಇತ್ಯುಕ್ತೇ ದೇವಗುರುಣಾ ದಾನವೇಂದ್ರೋ ಮಯೋಽಬ್ರವೀತ್ ।
ಸ್ಯಾದ್ವಿಕಾರೋಽಸುರಾಣಾಂ ಚೇತ್ತದ್ದದ್ಯಾನ್ನಮುಚಿಃ ಕಥಮ್ ॥ ೧೧೮
ಉಚ್ಚೈಃ ಶ್ರವಸಮಿಂದ್ರಾಯ ಮೃತಸಂಜೀವನಂ ಹಯಮ್ ।
ಪ್ರಬಲಶ್ಚ ಶರೀರಂ ಸ್ವಂ ಸುರೇಭ್ಯಃ ಕಥಮರ್ಪಯೇತ್ ॥ ೧೧೯
ತ್ರೈಲೋಕ್ಯಂ ಹರಯೇ ದತ್ವಾ ವಿಶೇತ್ಕಾರಾಂ ಕಥಂ ಬಲಿಃ ।
ಅಯೋದೇಹಃ ಕಥಂ ದೇಹಂ ದದ್ಯಾದ್ವಾ ವಿಶ್ವಕರ್ಮಣೇ ॥ ೧೨೦
ಅಧಿಕಂ ವಾ ಕಿಯದ್ವಚ್ಮಿ ನಿತ್ಯಸಂಭಾವಿನೋಽಸುರಾಃ ।
ಛದ್ಮನಾ ಚೇನ್ನ ಬಾಧ್ಯಂತೇ ತದೇಷಾಂ ನಾಸ್ತಿ ವಿಕ್ರಿಯಾ ॥ ೧೨೧
ಏವಮ ಮಯಾಸುರೇಣೋಕ್ತೇ ಸಿದ್ಧ್ಯಾವ್ರೋಚಿ ತಥಾ ಯಥಾ ।
ಪ್ರೀತಿಂ ದೇವಾಸುರಾಶ್ಚಕ್ರುರ್ಮಿಥಃ ಕಂಠಗ್ರಹೋತ್ತರಮ್ ॥ ೧೨೨

೧೨೩. ಅಷ್ಟರಲ್ಲಿ ಭವಾನಿಯು ಕಳುಹಿಸಿದ ಜಯಾ ಎಂಬ ಪ್ರತೀಹಾರಿಯು ಅಲ್ಲಿಗೆ ಬಂದಳು. ಎಲ್ಲರೂ ಆಕೆಯನ್ನು ಗೌರವದಿಂದ ಬರಮಾಡಿಕೊಂಡರು. ನಂತರ ಅವಳು ಸುಮೇರುವನ್ನು ಕುರಿತು ಹೇಳಿದಳು.

೧೨೪. "ನನ್ನನ್ನು ದೇವಿ ಕಳುಹಿಸಿದ್ದಾಳೆ. ಆಕೆಯ ಆದೇಶವನ್ನು ನಿಮಗೆ ನೀಡುತ್ತಿದ್ದೇನೆ. ನಿನಗೆ ಕಾಮಚೂಡಾಮಣಿಯೆಂಬ ಮಗಳಿದ್ದಾಳಷ್ಟೆ ಆಕೆ ನನ್ನ ಭಕ್ತೆ

೧೨೫. ಅವಳನ್ನು ಸೂರ್ಯಪ್ರಭನಿಗೆ ಕೊಡು' ಎಂದು ಹೇಳಿದಾಗ ಸುಮೇರುವು ವಿನಯದಿಂದ ಇಂತೆಂದನು.

೧೨೬. "ದೇವಿಯ ಆದೇಶದಂತೆಯೇ ಆಗಲಿ. ಇದು ದೇವಿಯ ದೊಡ್ಡ ಅನುಗ್ರಹ. ದೇವನಾದ ಶಂಭುವೂ ಮೊದಲು ಈ ಆದೇಶವನ್ನೇ ನೀಡಿದ್ದನು.'

೧೨೭. ಸುಮೇರುವಿನ ಮಾತನ್ನು ಕೇಳಿದ ಜಯೆಯು ಸೂರ್ಯಪ್ರಭನನ್ನು ಕುರಿತು, "ನೀನು ಅವಳನ್ನು ಎಲ್ಲ ಪತ್ನಿಯರಿಗಿಂತ ಅಧಿಕವಾಗಿ ಪರಿಗಣಿಸಬೇಕು.

೧೨೮–೧೨೯. ಇದು ಉಳಿದೆಲ್ಲರಿಗೂ ಒಪ್ಪಿಗೆಯಾಗುತ್ತದೆ, ಎಂದು ನಿನ್ನಲ್ಲಿ ಪ್ರಸನ್ನಳಾದ ಗೌರಿಯು ಆದೇಶಿಸಿದ್ದಾಳೆ.' ಎಂದಳು. ನಂತರ ಸೂರ್ಯಪ್ರಭನು ಆಕೆಯನ್ನು ಗೌರವಿಸಲಾಗಿ ಆಕೆಯು ಅಂತರ್ಧಾನಳಾದಳು. ಅಂದೇ ಸುಮೇರುವು ಬೇಗ ಲಗ್ನವನ್ನು ನಿಶ್ಚಯಿಸಿದನು.

---

ತಾವದ್ಭವಾನ್ಯಾ ಪ್ರಹಿತಾ ಪ್ರತೀಹಾರೀ ಜಯಾಭಿಧಾ ।
ಅತ್ರಾಗಾತ್ಪೂಜಿತಾ ಸರ್ವೈಃ ಸುಮೇರುಮವದಚ್ಚ ಸಾ ॥ ೧೨೩
ದೇವ್ಯಾಹಂ ಪ್ರೇಷಿತಾ ತ್ವಾಂ ಪ್ರತ್ಯಾದಿಷ್ಟಂ ಚ ತಯಾ ತವ ।
ಅಸ್ತಿ ತೇ ಕನ್ಯಕಾ ನಾಮ್ನಾ ಕಾಮಚೂಡಾಮಣಿಃ ಸುತಾ ॥ ೧೨೪
ಸೂರ್ಯಪ್ರಭಾಯ ತಾಂ ದೇಹಿ ಶೀಘ್ರಂ ಭಕ್ತಾ ಹಿ ಸಾ ಮಮ ।
ಇತ್ಯುಕ್ತೋ ಜಯಯಾ ಪ್ರಹ್ವಃ ಸುಮೇರುಃ ಪ್ರತ್ಯುವಾಚ ತಾಮ್ ॥ ೧೨೫
ಯದಾದಿಶತಿ ದೇವೀ ಮಾಂ ಪರಮೋಽನುಗ್ರಹೋ ಹ್ಯಯಮ್ ।
ದೇವೇ ನಾಪ್ಯಯಮೇವಾರ್ಥಃ ಪ್ರಾಗಾದಿಷ್ಟೋ ಮಮಾಭವತ್ ॥ ೧೨೬
ಏವಂ ಸುಮೇರುಣಾ ಪ್ರೋಕ್ತಾ ಪ್ರಾಹ ಸೂರ್ಯಪ್ರಭಂ ಜಯಾ ।
ತ್ವಯ್ಯೈಷಾ ಸರ್ವಭಾರ್ಯಾಣಾಂ ಕರ್ತವ್ಯೋಪರಿವರ್ತಿನೀ ॥ ೧೨೭
ಸರ್ವಾಭ್ಯೋಽಭಿಮತಾನ್ಯಾಭ್ಯಸ್ತವಾಪ್ಯೇಷಾ ಭವಿಷ್ಯತಿ ।
ಇತ್ಯಾದಿಷ್ಟಂ ತವಾಪ್ಯದ್ಯ ದೇವ್ಯಾ ಗೌರ್ಯಾ ಪ್ರಸನ್ನಯಾ ॥ ೧೨೮
ಇತ್ಯುಕ್ತ್ವಾಂತರ್ದಧೇ ಸೂರ್ಯಪ್ರಭೇಣಾಭ್ಯರ್ಚಿತಾ ಜಯಾ ।
ಅತ್ರೈವಾಹ್ನಿ ಸುಮೇರುಶ್ಚ ಲಗ್ನಂ ನಿಶ್ಚಿತವಾನ್ದ್ರುತಮ್ ॥ ೧೨೯

೧೩೦. ಅಲ್ಲಿಯೇ ವೇದಿಯನ್ನೂ ಮಾಡಿಸಿದನು. ಜಾತಿ ರತ್ನಗಳನ್ನು ಮೆಟ್ಟಿ ಅದರ ನೆಲವನ್ನು ಕಂಭಗಳನ್ನೂ ಸೊಗಸುಗೊಳಿಸಲಾಯಿತು. ಅಲ್ಲಿ ರತ್ನ ಕಾಂತಿಯ ಕಿರಣ ಜಾಲ ಹೇಗೆ ಹರಡಿತೆಂದರೆ ಅದು, ಅಗ್ನಿಜ್ವಾಲೆಗಳಿಂದಲೇ ಮುಚ್ಚಿಹೋಗಿದೆಯೋ ಎಂಬಂತೆ ಕಾಣುತ್ತಿತ್ತು.

೧೩೧. ಬಳಿಕ ಸುಮೇರುವು ತನ್ನ ಮಗಳನ್ನು ಅಲ್ಲಿಗೆ ಬರಮಾಡಿಕೊಂಡನು. ಅಲ್ಲಿ ನೆರೆದಿದ್ದ ದೇವಾಸುರರ ಚಂಚಲವಾದ ಕಣ್ಣುಗಳೆಲ್ಲ ಆಕೆಯ ಲಾವಣ್ಯವನ್ನು ಹೀರುವಂತೆ ಅವಳಲ್ಲಿಯೇ ನೆಟ್ಟವು.

೧೩೨–೧೩೩. ಉಮಾದೇವಿಯು ಹಿಮವಂತನ ಮಗಳು; ಕಾಮಚೂಡಾಮಣಿಯು ಸುಮೇರುವಿನ ಮಗಳು ಎಂಬ ವ್ಯತ್ಯಾಸವನ್ನು ಬಿಟ್ಟರೆ ದೇವಿಯಂತೆಯೇ ದಿವ್ಯ ಸೌಂದರ್ಯವತಿಯಾಗಿದ್ದಳು ಕಾಮಚೂಡಾಮಣಿ. ವಿವಾಹವೇಶದಲ್ಲಿ ಅಪೂರ್ವ ಶೋಭೆಯಿಂದ ಕಂಗೊಳಿಸುತ್ತಿದ್ದ ಅವಳನ್ನು ವೇದಿಕೆಯ ಮೇಲೆ ಕರೆಸಿ ಸೂರ್ಯಪ್ರಭನಿಗೆ ಮದುವೆ ಮಾಡಿಕೊಡಲಾಯಿತು.

೧೩೪. ದನು ಮುಂತಾದ ಹಿರಿಯ ನಾರಿಯರು ಕಟ್ಟಿದ ಕಂಕಣ ಭಾಗ್ಯವುಳ್ಳ ಕಾಮಚೂಡಾಮಣಿಯ ಕರಕಮಲವನ್ನು ಸೂರ್ಯಪ್ರಭನು ಹಿಡಿದನು.

೧೩೫. ಲಾಜ ಹೋಮಮಾಡಿ ವಿವಾಹ ವಿಧಿಯನ್ನು ನೆರವೇರಿಸುತ್ತಿದ್ದಂತೆಯೇ ಭವಾನಿಯು ಜಯೆಯ ಮೂಲಕ ಶಾಶ್ವತವಾದ ಮಾಲೆಯೊಂದನ್ನು ಕಳುಹಿಸಿ ಉಡುಗೊರೆಯಾಗಿತ್ತಳು.

---

ವೇದೀಮಕಾರಯತ್ತೋಽತ್ರ ಸದ್ರತ್ನಸ್ತಂಭಕುಟ್ಟಿಮಾಮ್ ।
ಯುಕ್ತಾಂ ತದ್ರಶ್ಮಿಜಾಲೇನ ಪಿಹಿತೇನೇವ ವಹ್ನಿನಾ ॥ ೧೩೦
ಆನಾಯಯಾಮಾಸ ಚ ತಾಂ ಕಾಮಚೂಡಾಮಣಿಂ ಸುತಾಮ್ ।
ನಿಪೀಯಮಾನಲಾವಣ್ಯಾಂ ಲೋಲೈರ್ದೇವಾಸುರೇಕ್ಷಣೈಃ ॥ ೧೩೧
ಉಮಾ ಹಿಮವತೋ ಜಾತಾ ಜಾತಾ ಚೇಯಂ ಸುಮೇರುತಃ ।
ಇತೀವ ತತ್ಸಮಾನೇನ ಸೌಂದರ್ಯೇಣ ಸಮಾಶ್ರಿತಾಮ್ ॥ ೧೩೨
ತತೋ ವೇದೀಂ ಸಮಾರೋಪ್ಯ ಕೃತಕೌತುಕಶೋಭಿತಾಮ್ ।
ಪ್ರಸಾಧಿತಾಂ ಸುಮೇರುಸ್ತಾಂ ದದೌ ಸೂರ್ಯಪ್ರಭಾಯ ಹ ॥ ೧೩೩
ಸೂರ್ಯಪ್ರಭಶ್ಚ ಜಗ್ರಾಹ ಕಾಮಚೂಡಾಮಣೇಸ್ತದಾ ।
ದನುಪ್ರಭೃತಿಭಿರ್ಬದ್ಧಕಂಕಣಂ ಪಾಣಿಪಂಕಜಮ್ ॥ ೧೩೪
ದದೌ ಲಾಜವಿಸರ್ಗೇ ಚ ಪ್ರಥಮೇ ತತ್ಕ್ಷಣಾಗತಾ ।
ಜಯಾ ಭವಾನೀಪ್ರಹಿತಾ ದಿವ್ಯಾಂ ಮಾಲಾಮನಶ್ವರೀಮ್ ॥ ೧೩೫

೧೩೬. ಸುಮೇರುವು ಅನರ್ಘ್ಯವಾದ ಅನೇಕ ರತ್ನಗಳನ್ನು ಉಡುಗೊರೆಯಾಗಿ ನೀಡಿದನು. ಹಾಗೆಯೆ ಐರಾವತದಿಂದ ಹುಟ್ಟಿದ ದಿವ್ಯವಾದ ಶ್ರೇಷ್ಠಗಜವನ್ನೂ ಕೊಟ್ಟನು.

೧೩೭. ಎರಡನೆಯ ಬಾರಿ ಹೋಮಕುಂಡಕ್ಕೆ ಲಾಜವನ್ನು ಅರ್ಪಿಸಿದಾಗ ಜಯೆ ಬಂದು ಮತ್ತೊಂದು ಅಪೂರ್ವವಾದ ರತ್ನಹಾರವನ್ನು ಕೊಟ್ಟಳು. ಅದನ್ನು ಕುತ್ತಿಗೆಯಲ್ಲಿ ಧರಿಸಿದ್ದರೆ, ಹಸಿವು ಬಾಯಾರಿಕೆ, ಮರಣ ಇದ್ಯಾವುದೂ ಬಾಧಿಸುವುದಿಲ್ಲ.

೧೩೮. ಆಗ ಸುಮೇರುವು ಮೊದಲು ನೀಡಿದ್ದಕ್ಕಿಂತ ಎರಡುಪಟ್ಟು ರತ್ನಗಳನ್ನೂ ಉಚ್ಚೈಃಶ್ರವಸ್ಸಿನಿಂದ ಜನ್ಮಪಡೆದ ಅಶ್ವರತ್ನವನ್ನೂ ನೀಡಿದನು.

೧೩೯. ಮೂರನೆ ಬಾರಿ ಲಾಜವನ್ನು ಅರ್ಪಿಸುವಾಗ ಜಯೆ ಏಕಾವಳೀ ಹಾರವನ್ನು ನೀಡಿದಳು. ಅದನ್ನು ಧರಿಸುವುದರಿಂದ ಯೌವನವು ಕ್ಷೀಣಿಸುವುದಿಲ್ಲ.

೧೪೦. ಸುಮೇರು ಮೂರುಪಟ್ಟು ರತ್ನಗಳ ರಾಶಿಯನ್ನು ಕೊಟ್ಟು ಎಲ್ಲಸಿದ್ಧಿಗಳಿಗೂ ಉಪಯುಕ್ತವಾದ ದಿವ್ಯವಾದ ಗುಳಿಕೆಯೊಂದನ್ನು ಕೊಟ್ಟನು.

೧೪೧. ಈ ರೀತಿಯಾಗಿ ವಿವಾಹವು ಯಶಸ್ವಿಯಾಗಿ ನೆರವೇರಿದ ಮೇಲೆ ಸುಮೇರುವು ಸುರಾಸುರರನ್ನೂ, ವಿದ್ಯಾಧರರನ್ನೂ, ದೇವ ಮಾತೆಯರನ್ನೂ ಕುರಿತು ಹೀಗೆಂದು ವಿಜ್ಞಾಪಿಸಿಕೊಂಡನು.

೧೪೨. "ತಾವೆಲ್ಲರೂ ಇಂದು ನನ್ನ ಮನೆಯಲ್ಲಿ ಭೋಜನ ಮಾಡಬೇಕು; ನನ್ನಲ್ಲಿ ಅನುಗ್ರಹ ತೋರಬೇಕು. ಇಗೋ ನನ್ನ ತಲೆಯಲ್ಲಿ ಅಂಜಲಿಯಿಟ್ಟು ಪ್ರಾರ್ಥಿಸುತ್ತೇನೆ.'

---

ಸುಮೇರುಶ್ಚಾಪ್ಯನರ್ಘಾಣಿ ರತ್ನಾನಿ ಪ್ರದದೌ ತದಾ ।
ಐರಾವತಾತ್ಸಮುತ್ಪನ್ನಂ ದಿವ್ಯಂ ಚ ವರವಾರಣಮ್ ॥ ೧೩೬

ದ್ವಿತೀಯೇ ಲಾಜಮೋಕ್ಷೇ ಚ ಜಯಾ ರತ್ನಾವಲೀಮದಾತ್ ।
ಯಯಾ ಕಂಠಸ್ಥಯಾ ಮೃತ್ಯುಃ ಕ್ಷುತ್ತೃಷ್ಣಾ ಚ ನ ಬಾಧತೇ ॥ ೧೩೭

ಸುಮೇರುಶ್ಚ ದದಾತಿ ಸ್ಮ ದ್ವಿಗುಣಂ ರತ್ನಸಂಚಯಮ್ ।
ಉಚ್ಚೈಃಶ್ರವಃ ಪ್ರಸೂತಂ ಚ ಹಯರತ್ನಮನುತ್ತಮಮ್ ॥ ೧೩೮

ಲಾಜಮೋಕ್ಷೇ ತೃತೀಯೇ ಚ ದದಾವೇಕಾವಲೀಂ ಜಯಾ ।
ಯೌವನಂ ಕ್ಷೀಯತೇ ನೈವ ಯಯಾ ಕಂಠಾವಲಗ್ನಯಾ ॥ ೧೩೯

ಸುಮೇರುಸ್ತ್ರಿಗುಣಂ ರಾಶಿಂ ರತ್ನಾನಾಂ ಪ್ರಪಿತೀರ್ಯ ಚ ।
ದತ್ತವಾನ್ಗುಲಿಕಾಂ ದಿವ್ಯಾಂ ಸರ್ವಸಿದ್ಧ್ಯುಪಯೋಗಿನೀಮ್ ॥ ೧೪೦

ತತೋ ವಿವಾಹೇ ನಿರ್ವೃತ್ತೇ ಸುಮೇರುಃ ಸಸುರಾಸುರಾನ್ ।
ವಿದ್ಯಾಧರಾನ್ದೇವಮಾತೄಃ ಸರ್ವಾನೇವಂ ವ್ಯಜಿಜ್ಞಪತ್ ॥ ೧೪೧

ಭೋಕ್ತವ್ಯಮದ್ಯ ಯುಷ್ಮಾಭಿಃ ಸರ್ವೈರೇವ ಗೃಹೇ ಮಮ ।
ಅನುಗ್ರಹಶ್ಚ ಕರ್ತವ್ಯೋ ಬದ್ಧೋ ಮೂರ್ಧ್ನಿ ಮಯಾಂಜಲಿಃ ॥ ೧೪೨

೧೫೩. ಸುಮೇರುವಿನ ಕೋರಿಕೆಯನ್ನು ಅವರೆಲ್ಲರೂ ಇನ್ನೂ ಒಪ್ಪದಿರುವಾಗ ಅಲ್ಲಿಗೆ ನಂದಿಯ ಆಗಮನವಾಯಿತು. ಎಲ್ಲರೂ ಆತನಿಗೆ ನಮಸ್ಕರಿಸಿದರು.

೧೫೪. ಆಗ ನಂದಿಯು, "ಇದು ಈಶ್ವರನ ಆದೇಶ. ನೀವೆಲ್ಲ ಇಂದು ಸುಮೇರುವಿನ ಮನೆಯಲ್ಲಿ ಭೋಜನ ಮಾಡಬೇಕೆಂಬುದು ನನ್ನ ಅಭಿಲಾಷೆ.

೧೫೫. ಇಂದು ನೀವು ಊಟಮಾಡಿದರೆ ನಿಮಗೆಲ್ಲ ಶಾಶ್ವತವಾದ ತೃಪ್ತಿಯಾಗುತ್ತದೆ' ಎಂದನು. ನಂದಿಯ ಮಾತನ್ನು ಕೇಳಿ ಎಲ್ಲರೂ ಊಟಮಾಡಲು ಒಪ್ಪಿದರು.

೧೫೬. ಆಗ ಅಲ್ಲಿಗೆ ಶಂಕರನು ಕಳಿಸಿದ ವಿನಾಯಕ, ಮಹಾಕಾಲ, ವೀರಭದ್ರ ಮುಂತಾದವರ ನೇತೃತ್ವದಲ್ಲಿದ್ದ ಲೆಕ್ಕವಿಲ್ಲದಷ್ಟು ಗಣಗಳು ಬಂದು ಸೇರಿದವು.

೧೫೭. ಅವರು ವೇದಿಯನ್ನು ಭೋಜನಕ್ಕೆ ಸಜ್ಜುಗೊಳಿಸಿದರು. ಬಳಿಕ ಸಾಲಾಗಿ ದೇವತೆಗಳನ್ನೂ, ವಿದ್ಯಾಧರರನ್ನು, ಅಸುರರನ್ನೂ, ಮನುಷ್ಯರನ್ನೂ, ಪಂಕ್ತಿಗಳಲ್ಲಿ ಕೂರಿಸಿದರು.

೧೫೮. ಶಂಕರನ ಆಣತಿಯ ಮೇರೆಗೆ ಕಾಮಧೇನುವಿನಿಂದ ದೊರೆತ ಆಹಾರಗಳನ್ನೂ ಸುಮೇರುವಿನ ಸಿದ್ಧಿವಿದ್ಯೆಗಳ ಸಹಾಯದಿಂದ ಪಡೆದ ಭಕ್ಷ್ಯ ಭೋಜ್ಯಗಳನ್ನೂ ಅವರು ಕ್ರಮವಾಗಿ ಬಡಿಸಿದರು.

---

ಏವಮಭ್ಯರ್ಥನಾಂ ತಸ್ಯ ಸುಮೇರೋಃ ಸರ್ವ ಏವ ತೇ ।
ಯಾವನ್ನೇಚ್ಛಂತಿ ತಾವಚ್ಚ ನಂದೀ ತತ್ರಾಗತೋಽಭವತ್ ॥ ೧೫೩
ಸ ತಾನವಾದೀತ್ತ್ರಾತಾನಾದಿಷ್ಟಂ ವಸ್ತ್ರಿಶೂಲಿನಾ ।
ಗೃಹೇ ಸುಮೇರೋರ್ಭೋಕ್ತವ್ಯಮೇಷ ಹ್ಯಸ್ಮತ್ಪರಿಗ್ರಹಃ ॥ ೧೫೪
ಏತದನ್ನೇಷು ಭುಕ್ತೇಷು ತೃಪ್ತಿಃ ಸ್ಯಾಚ್ಛಾಶ್ವತೀ ಚ ವಃ ।
ಇತಿ ನಂದಿಮುಖಾಚ್ಛ್ರುತ್ವಾ ಸರ್ವೇ ತತ್ಪ್ರತಿಪೇದಿರೇ ॥ ೧೫೫
ತತೋಽತ್ರಾಜಗ್ಮುರಮಿತಾಃ ಶಂಕರಪ್ರಹಿತಾ ಗಣಾಃ ।
ವಿನಾಯಕಮಹಾಕಾಲವೀರಭದ್ರಾದ್ಯಧಿಷ್ಠಿತಾಃ ॥ ೧೫೬
ತೇ ಚ ಭೋಜನಸಜ್ಜಾಂ ತಾಂ ವೇದಿಂ ಕೃತ್ವಾ ಯಥಾಕ್ರಮಮ್ ।
ತಾನುಪಾವೇಶಯನ್‌ದೇವದ್ಯುಚರಾಸುರಮಾನುಷಾನ್ ॥ ೧೫೭
ಉಪಾಹರಂತ ತೇಭ್ಯಶ್ಚ ವಿದ್ಯಾಕ್ಲೃಪ್ತಾನ್ ಸುಮೇರುಣಾ ।
ಆಹಾರಾನ್ ಶಂಕರಾದಿಷ್ಟಕಾಮಧೇನೂದ್ಭವಾಂಸ್ತಥಾ ॥ ೧೫೮

೧೪೯. ಒಬ್ಬೊಬ್ಬರ ಬಳಿಯಲ್ಲೂ ಅವರವರ ಇಚ್ಛೆಗಳನ್ನು ಪೂರೈಸುತ್ತ ವೀರಭದ್ರ, ಮಹಾಕಾಲ, ಭೃಂಗಿ ಮೊದಲಾದ ಸುರರು ನಿಂತರು.

೧೫೦. ಮುದಗೊಳಿಸುವ ಆಕಾಶಚಾರಿಗಳಾದ ಚಾರಣರ ಸಂಗೀತ ಆರಂಭವಾಯಿತು. ದಿವ್ಯಸ್ತ್ರೀಯರ ನರ್ತನದಿಂದ ಕೂಡಿದ ಅದು ಮನೋಹರವಾಗಿತ್ತು.

೧೫೧. ಊಟದ ಕೊನೆಯಲ್ಲಿ ಅವರೆಲ್ಲರಿಗೂ ನಂದೀಶ್ವರ ಮೊದಲಾದ ಶಂಕರಗಣಗಳು ದಿವ್ಯಮಾಲ್ಯಗಳನ್ನೂ ವಸ್ತ್ರಾಭರಣಗಳನ್ನೂ ಕಾಣಿಕೆಯಾಗಿತ್ತರು.

೧೫೨. ಹೀಗೆ ಎಲ್ಲ ಗಣೇಶ್ವರರೂ ದೇವಾಸುರಮನುಷ್ಯರನ್ನು ತೃಪ್ತಿಗೊಳಿಸಿ, ಸಂಮಾನಿಸಿ ತಮ್ಮ ಗಣಗಳೊಡನೆ ಹಿಂತಿರುಗಿದರು.

೧೫೩. ನಂತರ ದೇವಾಸುರರೂ ಹೊರಟರು, ಬಳಿಕ ಅವರ ಮಾತೆಯರು ನಿರ್ಗಮಿಸಿದರು. ಅದಾದ ಮೇಲೆ ಶ್ರುತಶರ್ಮನೇ ಮೊದಲಾದವರು ತಮ್ಮ ತಮ್ಮ ಬಂಧು ಬಾಂಧವರನ್ನು ಬೀಳ್ಕೊಟ್ಟು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೧೫೪. ಸೂರ್ಯಪ್ರಭನು ಭಾರ್ಯಾಸಹಿತನಾಗಿ ಸ್ನೇಹಿತರೊಡಗೂಡಿ ನವವಧುವಿನೊಡನೆ ವಿಮಾನಾರೂಢನಾಗಿ ಸುಮೇರುವಿನ ಶ್ರೇಷ್ಠ ತಪೋವನಕ್ಕೆ ಹೊರಟನು.

೧೫೫. ತನ್ನ ಸ್ನೇಹಿತನಾದ ಹರ್ಷನನ್ನು ರಾಜರಿಗೂ ಸೋದರನಾದ ರತ್ನಪ್ರಭನಿಗೂ ತನ್ನ ಏಳ್ಗೆಯನ್ನು ತಿಳಿಸಲು ಕಳಿಸಿದನು.

---

ಏಕೈಕಸ್ಯ ಯಥಾರ್ಹಂ ಚ ತಸ್ಥುರಿಚ್ಛಾವಿಧಾಯಿನಃ ।
ವೀರಭದ್ರಮಹಾಕಾಲಭೃಂಗಿಪ್ರಭೃತಯಃ ಸುರಾಃ ॥ ೧೪೯
ಪದೇ ಪದೇ ಚ ಸಂತೋಷಮಿಲದ್ದ್ಯುಚರಚಾರಣಮ್ ।
ತದಾ ಸಂಗೀತಕಮಭೂದ್ದಿವ್ಯಸ್ತ್ರೀನೃತ್ಯಸುಂದರಮ್ ॥ ೧೫೦
ಆಹಾರಾಂತೇ ಚ ಸರ್ವೇಷಾಂ ತೇಷಾಂ ನಂದೀಶ್ವರಾದಯಃ ।
ದದುರ್ದಿವ್ಯಾನಿ ಮಾಲ್ಯಾನಿ ವಸ್ತ್ರಾಣ್ಯಾಭರಣಾನಿ ಚ ॥ ೧೫೧
ಏವಂ ಸಂಮಾನ್ಯ ದೇವಾದೀನ್ನಂದಿಪ್ರಭೃತಯೋಽಖಿಲಾಃ ।
ಗಣೇಶ್ವರಾ ಗಣೈಃ ಸರ್ವೈಃ ಸಹ ಜಗ್ಮುರ್ಯಥಾಗತಮ್ ॥ ೧೫೨
ತತೋ ದೇವಾಸುರಾಃ ಸರ್ವೇ ತಾಶ್ಚ ತನ್ಮಾತರೋ ಯಯುಃ ।
ಶ್ರುತಶರ್ಮಾದಯಸ್ತೇ ಚಾಪ್ಯಾಮಂತ್ರ್ಯ ಸ್ವಂ ಸ್ವಮಾಸ್ಪದಮ್ ॥ ೧೫೩
ಸೂರ್ಯಪ್ರಭಃ ಸಭಾರ್ಯಶ್ಚ ಸವಯಸ್ಯವಧೂಯುತಃ ।
ವಿಮಾನೇನ ಯಯಾವಾದ್ಯಂ ತತ್ಸುಮೇರುತಪೋವನಮ್ ॥ ೧೫೪
ಪ್ರೇಷಯಾಮಾಸ ಹರ್ಷಂ ಚ ಸ್ವವಯಸ್ಯಂ ಮಹೀಭೃತಾಮ್ ।
ರತ್ನಪ್ರಭಸ್ಯ ಚ ಭ್ರಾತುರಾಖ್ಯಾತುಮುದಯಂ ನಿಜಮ್ ॥ ೧೫೫

೧೫೬. ದಿನಕಳೆದು ರಾತ್ರಿಯಾದಾಗ, ಅವನು ಬಹುಸೊಗಸಾಗಿ ನಿರ್ಮಿಸಿದ್ದ ರತ್ನಪರ್ಯಂಕದಿಂದ ಕೂಡಿದ ಸೆಜ್ಜೆ ಮನೆಯನ್ನು ತನ್ನ ನವವಧುವಾದ ಕಾಮಚೂಡಾಮಣಿಯೊಡನೆ ಹೊಕ್ಕನು.

೧೫೭–೧೫೮. ಅಲ್ಲಿ ಕ್ರಮವಾಗಿ ಗಾಢಾಲಿಂಗನ, ಚುಂಬನ, ಖಂಡನ ಮೊದಲಾದ ರತಿಕ್ರಿಯೆಗಳಿಂದ ನವವಧುವಿಗೆ ಸಹಜವಾದ ಲಜ್ಜೆಯನ್ನು ದೂರಮಾಡಿ, ವರ್ಣಿಸಲಸದಳವಾದ, ಮುಗ್ಧತೆಯ ವಿಶೇಷದಿಂದಲೇ ವಿಶೇಷ ಮಧುರವಾದ, ಯಾರಿಂದಲೂ ಪಡೆಯದೆ ಇದ್ದ ರತಿ ಸುಖವನ್ನು ಅವಳೊಡನೆ ಪಡೆದು ಸುಖಿಸಿದನು.

೧೫೯. "ಮಿಕ್ಕ ಪತ್ನಿಯರ ವಾಸ ಹೊರಗೆ, ನಿನ್ನದು ಮಾತ್ರ ನನ್ನ ಹೃದಯದಲ್ಲಿ" ಎಂದು ಪ್ರಿಯವಾದ ಮಾತುಗಳನ್ನಾಡಿ ಅವಳನ್ನು ಸಂತೋಷಗೊಳಿಸಿದನು.

೧೬೦. ಹೀಗೆ, ಪ್ರಿಯೆಯ ಗಾಢಾಲಿಂಗನದಲ್ಲಿ ಸುಖವಾಗಿ ಮಲಗಿದ್ದ ಆತನಿಗೆ ರಾತ್ರಿಯು ಮೆಲ್ಲನೆ ಜಾರಿತು. ಅವನ ನಿದ್ರೆಯೂ ಕಳೆಯಿತು.

೧೬೧. ಬೆಳಗಾದ ಮೇಲೆ ಸೂರ್ಯಪ್ರಭನು ಒಟ್ಟಿಗಿದ್ದ ತನ್ನ ಮೊದಲ ಪತ್ನಿಯರನ್ನೆಲ್ಲ ನೋಡಿ ಅವರೊಡನೆ ಸಂತೋಷದಿಂದ ಕಾಲಕಳೆದು ಅವರಿಗೆ ರಂಜನೆಯನ್ನು ಉಂಟುಮಾಡಿದನು.

---

ದಿನಾಂತೇ ಚ ಸ ಸದ್ರತ್ನಪರ್ಯಂಕಂ ಸಾಧುನಿರ್ಮಿತಮ್ ।
ಕಾಮಚೂಡಾಮಣೀರ್ವಧ್ವಾ ವಾಸವೇಶ್ಮ ವಿವೇಶ ತತ್ ॥ ೧೫೬
ತತ್ರೈತಾಂ ಚ ಘನಾಶ್ಲೇಷದಶನಚ್ಛದಖಂಡನೈಃ ।
ತ್ಯಾಜಯಿತ್ವಾ ಶನೈರ್ಲಜ್ಜಾಂ ನವೋಢಾಸುಲಭಾಂ ಕ್ರಮಾತ್ ॥ ೧೫೭
ಅನಿರ್ವಾಚ್ಯಂ ನವಂ ಮುಗ್ಧವಿದಗ್ಧಮಧುರಂ ರತಮ್ ।
ಅನಾಸ್ವಾದಿತಮನ್ಯಾಭ್ಯಃ ನಿಷೇವೇ ಸ ತಯಾ ಸಹ ॥ ೧೫೮
ಇದಾನೀಂ ಬಹಿರನ್ಯಾಸಾಂ ನಿವೇಶೋ ಹೃದಯೇಽಸ್ತು ಮೇ ।
ಅಂತಃ ಪುನಸ್ತ್ವಮೇಕಸ್ಯಾ ಇತಿ ತಾಂ ಚಾನ್ವರಂಜಯತ್ ॥ ೧೫೯
ತತೋ ರತಾಂತಸುಪ್ತಸ್ಯ ಪ್ರಿಯಾಶ್ಲೇಷಸುಖಾವಹಾ ।
ಶನೈಃ ಸಮಾಪ್ತಿಮಗಮನ್ನಿಶಾ ನಿದ್ರಾ ಚ ತಸ್ಯ ಸಾ ॥ ೧೬೦
ಪ್ರಭಾತೇ ಚ ಸ ಉತ್ಥಾಯ ಗತ್ವಾ ಸೂರ್ಯಪ್ರಭಸ್ತತಃ ।
ಆದ್ಯಾಸ್ತಾ ರಂಜಯಾಮಾಸ ನಿಜಭಾರ್ಯಾಃ ಸಹ ಸ್ಥಿತಾಃ ॥ ೧೬೧

೧೬೨. ಶೃಂಗಾರ ಚೇಷ್ಟೆಯ ಮುಖಭಾವಗಳನ್ನು ತೋರುತ್ತ ಸ್ನಿಗ್ಧಮುಗ್ಧವಾದ ಮಾತುಗಳನ್ನು ಆಡುತ್ತ ಅವರೆಲ್ಲ ನವವಧುವಿನೊಡನೆ ರಾತ್ರಿಯನ್ನು ಕಳೆದ ಅವನನ್ನು ಪರಿಹಾಸ ಮಾಡಿದರು.

೧೬೩. ಅಷ್ಟರಲ್ಲಿ, ಧನ್ಯನಾದ ಸೂರ್ಯಪ್ರಭನಿಗೆ ದ್ವಾರದಲ್ಲಿದ್ದ ಸೇವಕನು ಬಂದು ನಮಸ್ಕರಿಸಿದನು. ಅವನೊಡನೆ ಸುಷೇಣನೆಂಬ ವಿದ್ಯಾಧರನು ಬಂದು ಹೀಗೆ ವಿಜ್ಞಾಪಿಸಿಕೊಂಡನು.

೧೬೪. "ದೇವ, ತ್ರಿಕೂಟನಾಥನೇ ಮುಂತಾದ ವಿದ್ಯಾಧರರು ಸೇರಿ ನನ್ನನ್ನಿಲ್ಲಿ ಕಳಿಸಿದ್ದಾರೆ, ಮತ್ತು ತಮ್ಮಲ್ಲಿ ವಿಜ್ಞಾಪಿಸಿಕೊಳ್ಳಲು ಹೇಳಿದ್ದಾರೆ '.

೧೬೫. ಇಂದಿನಿಂದ ಮೂರನೆಯ ದಿನ ಋಷಭಾದ್ರಿಯಲ್ಲಿ ನಿನಗೆ ಮಂಗಳಕರವಾದ ಪಟ್ಟಾಭಿಷೇಕವು ನಡೆಯಲಿದೆ. ಎಲ್ಲರಿಗೂ ಇದನ್ನು ತಿಳಿಸಿ ತಕ್ಕ ಏರ್ಪಾಡುಗಳನ್ನು ಮಾಡು'.

---

ತಾಸ್ತುಂ ನವವಧೂರಕ್ತುಂ ಯಾವತ್ಪರಿಹಸಂತಿ ಚ ।
ಸನರ್ಮವಕ್ರಮಧುರಸ್ನಿಗ್ಧಮುಗ್ಧೈರ್ವಚಃಕ್ರಮೈಃ ॥ ೧೬೨
ದ್ವಾಃಸ್ಥೇನಾವೇದಿತಸ್ತಾವದಾಗತ್ಯ ಪ್ರಣಿಪತ್ಯ ಚ ।
ವಿದ್ಯಾಧರಃ ಸುಷೇಣಾಖ್ಯಃ ಕೃತಿನಂ ತಂ ವ್ಯಜಿಜ್ಞಪತ್ ॥ ೧೬೩
ದೇವ ತ್ರಿಕೂಟನಾಥಾದ್ಯೈಃ ಸರ್ವೈರ್ವಿದ್ಯಾಧರೇಶ್ವರೈಃ ।
ಪ್ರೇಷಿತೋಽಹಮಿಹೈವಂ ಚ ದೇವಂ ವಿಜ್ಞಾಪಯಂತಿ ತೇ ॥ ೧೬೪
ಋಷಭಾದ್ರೌ ತೃತೀಯೇಽಹ್ನಿ ಹ್ಯಭಿಷೇಕಃ ಶುಭಸ್ತವ ।
ಸಂವಾದ್ಯತಾಂ ತತ್ಸರ್ವೇಷಾಮುದ್ಯಮೋಽತ್ರ ವಿಧೀಯತಾಮ್ ॥ ೧೬೫

೧೬೬–೧೬೮. ಅದನ್ನು ಕೇಳಿ ಸೂರ್ಯಪ್ರಭನು ದೂತನನ್ನು ಕುರಿತು, "ಹೋಗು, ತ್ರಿಕೂಟಾಧಿಪತಿ ಮುಂತಾದ ವಿದ್ಯಾಧರೇಶ್ವರರಿಗೆ ನಾನು ಹೇಳಿದನೆಂದು ವಿಜ್ಞಾಪಿಸಿಕೊ; ನೀವೆಲ್ಲರೂ ಸೇರಿ ಸಮಾರಂಭವನ್ನು ಏರ್ಪಡಿಸಿ, ನಂತರ ನನಗೆ ತಿಳಿಸಿ, ನಾವಂತೂ ಯಾವಾಗಲೂ ಸಿದ್ಧರಾಗಿಯೇ ಇದ್ದೇವೆ. ಹೇಳಿಕಳಿಸಬೇಕಾದವರೆಲ್ಲರಿಗೂ ಹೇಳುತ್ತೇವೆ' ಎಂದನು. ಈ ಪ್ರತಿಸಂದೇಶವನ್ನು ಪಡೆದು ಸುಷೇಣನು ಅಲ್ಲಿಂದ ಹೊರಬಿದ್ದನು.

೧೬೯–೧೭೦. ಸೂರ್ಯಪ್ರಭನೂ ಪ್ರಭಾಸಾದಿ ಸ್ನೇಹಿತರನ್ನು ಕರೆದು ದೇವತೆಗಳ, ಯಾಜ್ಞವಲ್ಕ್ಯಾದಿ ಮುನಿಗಳ ಬಳಿಗೆ, ರಾಜರ ಬಳಿಗೆ, ವಿದ್ಯಾಧರರ, ಅಸುರರ ಬಳಿಗೆ ಒಬ್ಬೊಬ್ಬರನ್ನು ಬೇರೆ ಬೇರೆಯಾಗಿ ತನ್ನ ಅಭಿಷೇಕ ಮಹೋತ್ಸವಕ್ಕೆ ಆಹ್ವಾನಿಸಲು ಕಳುಹಿಸಿದನು.

೧೭೧. ತಾನು ಮಾತ್ರ ಏಕಾಕಿಯಾಗಿ ಪರ್ವತೋತ್ತಮವಾದ ಕೈಲಾಸಕ್ಕೆ ಹೊರಟನು. ಹರನನ್ನೂ ಅಂಬಿಕೆಯನ್ನು ತಾನೇ ಆಹ್ವಾನಿಸುವುದು ಅವನ ಉದ್ದೇಶವಾಗಿತ್ತು.

೧೭೨. ಆ ಬೆಟ್ಟವನ್ನು ಏರುತ್ತಿದ್ದ ಅವನಿಗೆ ದೇವರ್ಷಿಗಳಿಂದಲೂ ಸಿದ್ಧರಿಂದಲೂ ಸೇವಿತವಾಗಿದ್ದ, ಶುಭ್ರ ವಿಭೂತಿಯಂತೆ ಬೆಳ್ಳಗಿದ್ದ ಆ ಪರ್ವತವು ಅವನಿಗೆ ಎರಡನೆಯ ಶಂಕರನಂತೆ ಕಾಣಿಸಿತು.

---

ತಚ್ಛ್ರುತ್ವಾ ಪ್ರತ್ಯವೋಚತ್ತಂ ದೂತಂ ಸೂರ್ಯಪ್ರಭಸ್ತದಾ ।
ಗಚ್ಛ ತ್ರಿಕೂಟಾಧಿಪತಿಪ್ರಭೃತೀನ್ಬ್ರೂಹಿ ಮದ್ಗಿರಾ ॥ ೧೬೬
ಭವಂತ ಏವ ಕುರ್ವಂತು ಸಮಾರಂಭಂ ವದಂತು ಚ ।
ಆತ್ಮನ್ಯೇವ ಪರಂ ಸಜ್ಜಾ ವಯಮೇತೇ ಸ್ಥಿತಾಃ ಪುನಃ ॥ ೧೬೭
ಸಂವಾದನಂ ತು ಸರ್ವೇಷಾಂ ಕರಿಷ್ಯಾಮೋ ಯಥಾಯಥಮ್ ।
ಇತ್ಯಾತ್ತಪ್ರತಿಸಂದೇಶಃ ಸುಷೇಣಃ ಸ ತತೋ ಯಯೌ ॥ ೧೬೮
ಸೂರ್ಯಪ್ರಭೋಽಪಿ ಚೈಕೈಕಂ ಪ್ರಭಾಸಪ್ರಭೃತೀನ್ಸಖೀನ್ ।
ದೇವಾನಾಂ ಯಾಜ್ಞವಲ್ಕ್ಯಾದಿಮುನೀನಾಂ ಭೂಭೃತಾಂ ತಥಾ ॥ ೧೬೯
ವಿದ್ಯಾಧರಾಸುರಾಣಾಂ ಚ ವಿಸಸರ್ಜ ಪೃಥಕ್ಪೃಥಕ್ ।
ನಿಮಂತ್ರಣಾಯ ಸರ್ವೇಷಾಂ ಸ್ವಾಭಿಷೇಕಮಹೋತ್ಸವೇ ॥ ೧೭೦
ಸ್ವಯಂ ಜಗಾಮ ಚೈಕಾಕೀ ಕೈಲಾಸಂ ಪರ್ವತೋತ್ತಮಮ್ ।
ಹರಸ್ಯ ಚಾಂಬಿಕಾಯಾಶ್ಚ ನಿಮಂತ್ರಣಕೃತೋದ್ಯಮಃ ॥ ೧೭೧
ಆರೋಹಂಶ್ಚ ತಮದ್ರಾಕ್ಷೀಚ್ಛುಭ್ರಭೂತಿಸಿತಂ ಗಿರಿಮ್ ।
ಸೇವ್ಯಂ ದೇವರ್ಷಿಸಿದ್ಧಾನಾಂ ದ್ವಿತೀಯಮಿವ ಶಂಕರಮ್ ॥ ೧೭೨

೧೭೩. ಅರ್ಧಕ್ಕಿಂತ ಹೆಚ್ಚು ಏರಿದನಂತರ ಮುಂದೆ ಹತ್ತುವುದು ಕಷ್ಟವಾಯಿತು. ಹಾಗೆಯೇ ಸುತ್ತಲು ನೋಡುತ್ತ ಒಂದೆಡೆ ಹವಳದ ಬಾಗಿಲೊಂದನ್ನು ನೋಡಿದನು.

೧೭೪. (ಒಳಹೋಗಲು ಬಯಸಿ) ಸಿದ್ಧಿಯಿಂದ ಕೂಡಿದ್ದರೂ ಅದರೊಳಗೆ ಪ್ರವೇಶವನ್ನು ಪಡೆಯಲಿಕ್ಕಾಗದೆ ಏಕಾಗ್ರ ಮನಸ್ಸಿನಿಂದ ಶಶಿಶೇಖರನನ್ನು ಸ್ತುತಿಸತೊಡಗಿದನು.

೧೭೫. ಆಗ ಬಾಗಿಲನ್ನು ತೆರೆದ ಗಜಮುಖನಾದ ಪುರುಷನೋರ್ವನು, "ಒಳಗೆ ಬಾ, ಭಗವಾನ್ ಹೇರುಂಬನು ನಿನ್ನಲ್ಲಿ ಪ್ರಸನ್ನನಾಗಿದ್ದಾನೆ' ಎಂದನು.

೧೭೬–೧೭೮. ಒಳಗೆ ಪ್ರವೇಶಿಸಿದ ಸೂರ್ಯಪ್ರಭನು, ಮಹಾಭೋಗಾರ್ಹವಾದ ಜ್ಯೋತೀರಸ ಶಿಲೆಯ ಮೇಲೆ, ಹನ್ನೆರಡು ಸೂರ್ಯರ ಪ್ರಭೆಯನ್ನು ಏಕಕಾಲದಲ್ಲಿ ಚೆಲ್ಲುತ್ತಿದ್ದ, ಏಕದಂತನಾದ, ಲಂಬೋದರನಾದ, ತ್ರಿಣೇತ್ರನಾದ, ಜ್ವಲಿಸುವ ಪರಶುಮುದ್ಗರಾಯುಧಗಳಿಂದ ಕೂಡಿದ ಗಜಾನನನು ಆಸೀನನಾಗಿದ್ದುದನ್ನು ನೋಡಿ ವಿಸ್ಮಿತನಾದನು. ಆ ವಿನಾಯಕನನ್ನು ನಾನಾ ಪ್ರಾಣಿಮುಖಗಳಿಂದ ಕೂಡಿದ ಗಣಗಳು ಸುತ್ತುವರೆದಿದ್ದವು. ಅವನನ್ನು ಕಂಡು ವಿನಮ್ರನಾಗಿ ಸೂರ್ಯಪ್ರಭನು ಪಾದಕ್ಕೆರಗಿದನು.

೧೭೯. ವಿನಾಯಕನೂ ಸೂರ್ಯಪ್ರಭನನ್ನು ನೋಡಿ ಪ್ರೀತನಾಗಿ, ಬಂದ ಕಾರಣ ವನ್ನು ಕೇಳಿ, "ಈ ಮಾರ್ಗದಿಂದ ಹತ್ತಿ ಹೋಗು' ಎಂದು ಸ್ನೇಹವಾಣಿಯಿಂದ ಹೇಳಿದನು.

---

ಅರ್ಧಾದಧಿಕಮಾರುಹ್ಯ ದುರಾರೋಹಂ ತತಃ ಪರಮ್ ।
ಸ ತಂ ಪಶ್ಯನ್ದದರ್ಶಾತ್ರ ವೈದ್ರುಮಂ ದ್ವಾರಮೇಕತಃ ॥ ೧೭೩
ಯದಾ ಪ್ರವೇಶಂ ನೈವಾತ್ರ ಸಿದ್ಧಿಮಾನಪ್ಯವಾಪ ಸಃ ।
ತದೈಕಾಗ್ರೇಣ ಮನಸಾ ಸ್ತೌತಿ ಸ್ಮ ಶಶಿಶೇಖರಮ್ ॥ ೧೭೪
ತತಸ್ತದ್ದ್ವಾರಮುದ್ಘಾಟ್ಯ ಪುಮಾನ್ಗಜಮುಖೋಽಬ್ರವೀತ್ ।
ಏಹಿ ಪ್ರವಿಶ ತುಷ್ಟಸ್ತೇ ಹೇರಂಬೋ ಭಗವಾನಿತಿ ॥ ೧೭೫
ತತಃ ಸೂರ್ಯಪ್ರಭಸ್ತತ್ರ ಪ್ರವಿಶ್ಯಾಂತಃ ಸವಿಸ್ಮಯಃ ।
ಉಪವಿಷ್ಟಂ ಮಹಾಭೋಗೇ ಜ್ಯೋತೀರಸಶಿಲಾತಲೇ ॥ ೧೭೬
ದ್ವಾದಶಾದಿತ್ಯಸಂಕಾಶಮೇಕದಂಷ್ಟ್ರಂ ಗಜಾನನಮ್ ।
ಲಂಬೋದರಂ ತ್ರಿಣೇತ್ರಂ ಚ ಜ್ವಲತ್ಪರಶುಮುದ್ಗರಮ್ ॥ ೧೭೭
ವಿನಾಯಕಂ ಪರಿವೃತಂ ನಾನಾಪ್ರಾಣಿಮುಖೈರ್ಗಣೈಃ ।
ದದರ್ಶಾಥ ವವಂದೇ ಚ ಪಾದಯೋಃ ಪ್ರಣಿಪತ್ಯ ತಮ್ ॥ ೧೭೮
ಸೋಽಪಿ ತಂ ವಿಘ್ನಜಿತ್ಪ್ರೀತಃ ಪೃಷ್ಟ್ವಾಗಮನಕಾರಣಮ್ ।
ಆರೋಹಾನೇನ ಮಾರ್ಗೇಣೇತ್ಯವೋಚತ್ಸ್ನಿಗ್ಧಯಾ ಗಿರಾ ॥ ೧೭೯

೧೮೦. ಅದರ ಮೂಲಕ ಹೊರಟ ಸೂರ್ಯಪ್ರಭನು ಪಂಚಯೋಜನಗಳನ್ನು ಕ್ರಮಿಸಿದ ನಂತರ, ಪದ್ಮರಾಗಮಯವಾದ ಮತ್ತೊಂದು ಹೆಬ್ಬಾಗಿಲನ್ನು ಕಂಡನು.

೧೮೧. ಅಲ್ಲೂ ಒಳಗೆ ಹೋಗಲಾರದೆ ಮತ್ತೆ ಈಶ್ವರನನ್ನು ಕುರಿತು ಅನನ್ಯಮನಸ್ಕನಾಗಿ ಸಹಸ್ರನಾಮಗಳಿಂದ ನುತಿಸಿದನು.

೧೮೨. ಬಳಿಕ ಕುಮಾರ ಪುತ್ರನೊಬ್ಬನು ಬಂದು ತಾನೇ ಬಾಗಿಲನ್ನು ತೆಗೆದನು. ತಾನು ವಿಶಾಖನೆಂದು ಹೆಸರು ಹೇಳಿಕೊಂಡ ಆ ಬಾಲಕನು ಇವನನ್ನು ಒಳಗೆ ಕರೆದೊಯ್ದನು.

೧೮೩. ಅಲ್ಲಿ ಜ್ವಾಲೆಯಂತೆ ಬೆಳಗುತ್ತಿದ್ದ ಕುಮಾರನನ್ನು ಕಂಡನು. ಶಾಖ, ವಿಶಾಖ ಮುಂತಾದ ಐದು ಪುತ್ರರು ಅವನ ಜತೆಯಲ್ಲಿದ್ದರು.

೧೮೪. ಅಲ್ಲಿ ಅವನನ್ನು ಸುತ್ತುವರಿದು, ಹುಟ್ಟಿದ ಕ್ಷಣದಲ್ಲೇ ಹಿಡಿಯುವ ದುಷ್ಟಗ್ರಹಗಳು, ಶಿಶುಗ್ರಹಗಳು ಕೋಟಿಗಟ್ಟಳೆ ಇದ್ದವು. ಆ ಗಣಗಳೆಲ್ಲ ಕುಮಾರನ ಚರಣಕ್ಕೆರಗಿ ತಮ್ಮ ಗೌರವವನ್ನು ತೋರುತ್ತಿದ್ದುವು.

೧೮೫. ಶರವಣಭವನಾದ ಕುಮಾರನೂ ಸೂರ್ಯಪ್ರಭನನ್ನು ಕಂಡು ಕಾರಣವನ್ನು ಕೇಳಿ ಸಂತುಷ್ಟನಾಗಿ ಮೇಲೇರಲು ಮಾರ್ಗವನ್ನು ಸೂಚಿಸಿದನು.

---

ತೇನ ಸೂರ್ಯಪ್ರಭಃ ಸೋಽನ್ಯಾಮಾರೂಢಃ ಪಂಚಯೋಜನೀಮ್ ।
ಪದ್ಮರಾಗಮಯಂ ದ್ವಾರಮಪಶ್ಯದಪರಂ ಮಹತ್ ॥ ೧೮೦

ಅನವಾಪ್ತಪ್ರವೇಶಶ್ಚ ತತ್ರಾಪಿ ಸ ಪಿನಾಕಿನಮ್ ।
ದೇವಂ ನಾಮಸಹಸ್ರೇಣ ತುಷ್ಟಾವಾನನ್ಯಮಾನಸಃ ॥ ೧೮೧

ತತಃ ಕುಮಾರಪುತ್ರೇಣ ಸ್ವಯಂ ದ್ವಾರಂ ವಿವೃತ್ಯ ತತ್ ।
ಉಕ್ತಾತ್ಮನಾ ವಿಶಾಖಾಖ್ಯೇನಾಂತಃ ಪ್ರಾವೇಶ್ಯತಾತ್ರ ಸಃ ॥ ೧೮೨

ಪ್ರವಿಷ್ಟಶ್ಚ ದದರ್ಶಾತ್ರ ಸ್ಕಂದಂ ಜ್ವಾಲಾನಲದ್ಯುತಿಮ್ ।
ಯುಕ್ತಂ ಶಾಕವಿಶಾಖಾದ್ಯೈಃ ಸದೃಶೈಃ ಪಂಚಭಿಃ ಸುತೈಃ ॥ ೧೮೩

ಸ ಜಾತಮಾತ್ರಕಪ್ರಷ್ಟೈರ್ದುಷ್ಟಗ್ರಹಶಿಶುಗ್ರಹೈಃ ।
ವೃತಂ ತಂ ಕೋಟಿಸಂಖ್ಯಾಕೈರ್ಗಣೈಶ್ಚೈಶ್ಚರಣಾನತೈಃ ॥ ೧೮೪

ತೇನಾಪಿ ಪರಿತುಷ್ಟೇನ ಪೃಷ್ಟ್ವಾ ಕಾರಣಮಾಗಮೇ ।
ತಸ್ಯಾರೋಹಣಮಾರ್ಗೋಽತ್ರ ವ್ಯಾದಿಷ್ಟಃ ಶರಜನ್ಮನಾ ॥ ೧೮೫

೧೮೬–೧೮೭ ನಂತರ ಸೂರ್ಯಪ್ರಭನು ಭೈರವ, ಮಹಾಕಾಲ, ವೀರಭದ್ರ, ನಂದಿ, ಭೃಂಗಿ ಎಂಬ ಐದು ಗಣಗಳು ಮತ್ತು ಅವರ ಅನುಚರರು ಕಾಯುತ್ತಿದ್ದ ಇನ್ನೂ ಐದು ರತ್ನದ್ವಾರಗಳನ್ನು ಕ್ರಮವಾಗಿ ದಾಟಿ ಪರ್ವತದ ಹಿಂಬದಿಯಲ್ಲಿದ್ದ ಉತ್ತಮವಾದ ಶುದ್ಧಸ್ಫಟಿಕದ್ವಾರದ ಬಳಿ ಬಂದನು.

೧೮೮. ಅಲ್ಲಿಯೂ ದೇವದೇವನಾದ ರುದ್ರನನ್ನು ಸ್ತುತಿಸಿದ ಬಳಿಕ, ಒಬ್ಬ ರುದ್ರನೇ ಒಳಗೆ ಕರೆದೊಯ್ದನು. ಅಲ್ಲಿ ಅವನ ಸ್ವರ್ಗಕ್ಕೂ ಮಿಗಿಲೆನಿಸಿದ ಶಂಭುವಿನ ಸ್ವಸ್ಥಾನವನ್ನು ನೋಡಿದನು.

೧೮೯. ದಿವ್ಯಗಂಧವನ್ನು ಹೊತ್ತ ಗಾಳಿಯು ಅಲ್ಲಿ ಬೀಸುತ್ತಿತ್ತು. ನಿತ್ಯ ಪುಷ್ಪಫಲಗಳಿಂದ ಕೂಡಿದ ವೃಕ್ಷಗಳಿದ್ದುವು. ಗಂಧರ್ವರು ಸಂಗೀತವನ್ನು ಹಾಡುತ್ತಿದ್ದರೆ ಅಪ್ಸರೆಯರು ನೃತ್ಯ ಮಾಡುತ್ತಿದ್ದರು.

೧೯೦. ಅಲ್ಲಿ ಒಂದು ಭಾಗದಲ್ಲಿ ಸ್ಫಟಿಕಮಯ ಸಿಂಹಾಸನದಲ್ಲಿ ಆಸೀನನಾಗಿದ್ದ ಸ್ವತಃ ಸ್ವಚ್ಛಸ್ಫಟಿಕದಂತೆ ನಿರ್ಮಲನಾಗಿದ್ದ ಶೂಲಪಾಣಿಯಾದ ತ್ರಿಲೋಚನನನ್ನು ನೋಡಿದನು.

---

ಏವಂ ಕ್ರಮೇಣ ಚಾನ್ಯಾನಿ ರತ್ನದ್ವಾರಾಣಿ ಪಂಚ ಸಃ ।
ಸಭೈರವಮಹಾಕಾಲವೀರಭದ್ರೇಣ ನಂದಿನಾ ॥ ೧೮೬
ಭೃಂಗಿಣಾ ಚಾನುಗೈಃ ಸಾಕಂ ನಿರುದ್ಧಾನಿ ಯಥಾಕ್ರಮಮ್ ।
ಅತೀತ್ಯ ಪ್ರಾಪ ಪೃಷ್ಠೇಽದ್ರೇಃ ಸ್ಫಾಟಿಕಂ ದ್ವಾರಮುತ್ತಮಮ್ ॥ ೧೮೭
ತತಃ ಸ್ತುವನ್ದೇವದೇವಂ ರುದ್ರೇಷ್ವೇಕೇನ ಸಾದರಮ್ ।
ಪ್ರವೇಶಿತಸ್ತದದ್ರಾಕ್ಷೀಚ್ಛಂಭೋಃ ಸ್ವರ್ಗಾಧಿಕಂ ಪದಮ್ ॥ ೧೮೮
ದಿವ್ಯಗಂಧವಹದ್ವಾತಂ ಸದಾಪುಷ್ಪಫಲದ್ರುಮಮ್ ।
ಗಂಧರ್ವಾರಬ್ಧಸಂಗೀತಮಪ್ಸರೋನೃತ್ತಸೋತ್ಸವಮ್ ॥ ೧೮೯
ತತ್ರೈಕದೇಶೇ ಸ್ಫಟಿಕಮಯಸಿಂಹಾಸನೇ ಸ್ಥಿತಮ್ ।
ತ್ರಿಲೋಚನಂ ಶೂಲಪಾಣಿಂ ಸ್ವಚ್ಛಸ್ಫಟಿಕಸಂನಿಭಮ್ ॥ ೧೯೦

೧೯೧–೧೯೨. ಪಿಂಗಳವರ್ಣದ ಜಟಾಜೂಟವುಳ್ಳ ಮನೋಹರವಾದ ಅರ್ಧಚಂದ್ರನನ್ನು ಶೇಖರದಲ್ಲಿ ಮುಡಿದಿದ್ದ, ಪಕ್ಕದಲ್ಲೇ ಇದ್ದ ಗಿರಿಜಾದೇವಿಯಿಂದ ಸೇವಿತನಾದ ಮಹೇಶ್ವರನನ್ನು ಸೂರ್ಯಪ್ರಭನು ಆನಂದತುಂದಿಲನಾಗಿ ನೆಟ್ಟ ನೋಟದಿಂದ ನೋಡುತ್ತಲೇ ನಿಂತುಬಿಟ್ಟನು. ಬಳಿಕ (ಎಚ್ಚೆತ್ತುಕೊಂಡು) ದೇವದೇವಿಯರ ಬಳಿಸಾರಿ ಅವರ ಪಾದಕ್ಕೆರಗಿದನು.

೧೯೩. ಆಗ ಭಗವಾನ್ ಹರನು ಅವನ ಬೆನ್ನಮೇಲೆ ಪ್ರೀತಿಯಿಂದ ಕೈಯಾಡಿಸಿ ಕೈ ಹಿಡಿದು ಎಬ್ಬಿಸಿ, ಕೂರಿಸಿದ ನಂತರ, "ಏತಕ್ಕಾಗಿ ಬಂದಿರುವೆ' ಎಂದು ಕೇಳಿದನು.

೧೯೪. "ನನ್ನ ಅಭಿಷೇಕ ಮಹೋತ್ಸವವು ಇಷ್ಟರಲ್ಲೇ ನಡೆಯಲಿದೆ. ಅದಕ್ಕಾಗಿ ಪ್ರಭುವಿನ ಉಪಸ್ಥಿತಿಯನ್ನು ಪ್ರಾರ್ಥಿಸಿಕೊಳ್ಳಲು ಬಂದಿದ್ದೇನೆ.' ಎಂದು ಸೂರ್ಯಪ್ರಭನು ಉತ್ತರಿಸಿದನು.

೧೯೫. ಆಗ ಶಂಭುವು, "ಇದಕ್ಕಾಗಿ ಇಷ್ಟು ಕಷ್ಟಪಟ್ಟೆಯಾ ಮಗನೆ ? ಇದ್ದಲ್ಲಿಂದಲೇ ಸ್ಮರಿಸಬಹುದಿತ್ತಲ್ಲ !

೧೯೬. ಆಗಲಿ, ನಿನ್ನಲ್ಲಿಗೆ ಬರುವೆ', ಎಂದು ಹೇಳಿದ ಭಕ್ತವತ್ಸಲನಾದ ಪರಮೇಶ್ವರನು ಬಳಿಯಲ್ಲಿದ್ದ ಗಣವೊಂದನ್ನು ಕರೆದು ಆಜ್ಞಾಪಿಸಿದನು.

---

ಬದ್ಧಪಿಂಗಜಟಾಜೂಟಂ ಚಾರುಚಂದ್ರಾರ್ಧಶೇಖರಮ್ ।
ಪಾರ್ಶ್ವಸ್ಥಯಾ ಗಿರಿಜಯಾ ಭಗವತ್ಯೋಪಸೇವಿತಮ್ ॥ ೧೯೧
ಸೂರ್ಯಪ್ರಭಃ ಸ ಸಾನಂದಃ ಪಶ್ಯತಿ ಸ್ಮ ಮಹೇಶ್ವರಮ್ ।
ಉಪೇತ್ಯ ಚಾಪತತ್ತಸ್ಯ ಸದೇವೀಕಸ್ಯ ಪಾದಯೋಃ ॥ ೧೯೨
ತತಃ ಪೃಷ್ಠೇ ಕರಂ ದತ್ತ್ವಾ ತಮುತ್ಥಾಪ್ಯೋಪವೇಶ್ಯ ಚ ।
ಕಿಮರ್ಥಮಾಗತೋಽಸೀತಿ ಪಪ್ರಚ್ಛ ಭಗವಾನ್ಹರಃ ॥ ೧೯೩
ಪ್ರತ್ಯಾಸನ್ನೋಽಭಿಷೇಕೋ ಮೇ ಸನ್ನಿಧಾನಂ ತದರ್ಥಯೇ ।
ಪ್ರಭೋಸ್ತತ್ರೇತಿ ತಂ ಸೂರ್ಯಪ್ರಭಃ ಪ್ರತ್ಯಬ್ರವೀಚ್ಚ ಸಃ ॥ ೧೯೪
ತತಃ ಶಂಭುರುವಾಚೈತಮಿಯಾನ್ ಕ್ಲಿಷ್ಟೋಽಸಿ ತರ್ಹಿ ಕಿಮ್ ।
ಸಂವಿಧಾನಾಯ ಕಿಂ ಪುತ್ರ ತತ ಏವಾಸ್ಮಿ ನ ಸ್ಮೃತಃ ॥ ೧೯೫
ತದಸ್ತು ಸಂನಿಧಾಸ್ಯೇಽಹಮಿತ್ಯುಕ್ತ್ವಾ ಭಕ್ತವತ್ಸಲಃ ।
ಸೋಽಂತಿಕಸ್ಥಿತಮಾಹೂಯ ಗಣಮೇಕಂ ಸಮಾದಿಶತ್ ॥ ೧೯೬

೧೯೭–೧೯೮. "ಇವನನ್ನು ಋಷಭ ಪರ್ವತಕ್ಕೆ ಕರೆದುಕೊಂಡು ಹೋಗು. ಚಕ್ರವರ್ತಿಗಳ ಮಹಾಭಿಷೇಕ ಆಗಬೇಕಾದ ಸ್ಥಳ ಅದು' ಎಂಬುದಾಗಿ ಪರಶಿವನ ಆದೇಶವನ್ನು ಸ್ವೀಕರಿಸಿದ ಗಣವು, ಶಿವನಿಗೆ ಪ್ರದಕ್ಷಿಣ ಪೂರ್ವಕವಾಗಿ ನಮಸ್ಕರಿಸಿದ ಸೂರ್ಯಪ್ರಭನನ್ನು ತನ್ನ ಮಡಿಲಲ್ಲಿಟ್ಟುಕೊಂಡು ವಿನಯದಿಂದ ಕರೆದೊಯ್ದನು.

೧೯೯. ಅಲ್ಲಿಂದ ನೇರ ಋಷಭ ಪರ್ವತದ ಮೇಲೆ ಇಳಿಸಿ, ತನ್ನ ಸಿದ್ಧಿಯ ಪ್ರಭಾವದಿಂದ ಅದೃಶ್ಯನಾದನು.

೨೦೦. ಬೆಟ್ಟದ ಮೇಲೆ ಇದ್ದ ಸೂರ್ಯ ಪ್ರಭನನ್ನು ಅರಸಿ ಅಲ್ಲಿಗೆ ಬಂದ ಅವನ ಸ್ನೇಹಿತರೆಲ್ಲ ಒಂದಾದರು. ಕಾಮಚೂಡಾಮಣಿ ಮುಂತಾದ ಭಾರ್ಯೆಯರೂ ವಿದ್ಯಾಧರ ಅಧಿಪತಿಗಳೂ ಬಂದು ಸೇರಿದರು.

೨೦೧. ಇಂದ್ರಸಹಿತರಾದ ದೇವತೆಗಳೂ, ಮಯನೇ ಮೊದಲಾದ ಅಸುರರೂ, ಮಹರ್ಷಿಗಳೂ, ಶ್ರುತಶರ್ಮನೂ, ಸುಮೇರುವೂ, ಸುವಾಸಕುಮಾರನೂ ಅಲ್ಲಿಗೆ ಬಂದರು.

೨೦೨. ಸೂರ್ಯಪ್ರಭನು ಅವರನ್ನೆಲ್ಲ ಯಥೋಚಿತವಾಗಿ ಸತ್ಕರಿಸಿದನು. ತಾನು ರುದ್ರದರ್ಶನವನ್ನು ಪಡೆದ ವೃತ್ತಾಂತವನ್ನು ಹೇಳಲಾಗಿ ಅವರೆಲ್ಲ ಅಂತಹ ದಿವ್ಯದರ್ಶನವನ್ನು ಪಡೆದದ್ದಕ್ಕಾಗಿ ಅಭಿನಂದಿಸಿದರು.

---

ಗಚ್ಛೈತಮಭಿಷೇಕಾರ್ಥಮೃಷಭಂ ಪರ್ವತಂ ನಯ ।
ಮಹಾಭಿಷೇಕಸ್ಥಾನಂ ಹಿ ತದೇಷಾಂ ಚಕ್ರವರ್ತಿನಾಮ್ ॥ ೧೯೭
ಇತ್ಯಾದಿಷ್ಟೋ ಭಗವತಾ ಸ ತಂ ಸೂರ್ಯಪ್ರಭಂ ಗಣಃ ।
ಪ್ರದಕ್ಷಿಣೇ ಕೃತೇಶಾನಮುತ್ಸಂಗೇ ಪ್ರಣತೋಽಗ್ರಹೀತ್ ॥ ೧೯೮
ನೀತ್ವಾ ಸಂಸ್ಥಾಪಯಾಮಾಸ ತಸ್ಮಿನ್ನೃಷಭಪರ್ವತೇ ।
ಸ್ವಸಿದ್ಧ್ಯಾ ತತ್ ಕ್ಷಣೇನೈವ ಯಯೌ ಚಾದರ್ಶನಂ ತತಃ ॥ ೧೯೯
ಸೂರ್ಯಪ್ರಭಸ್ಯ ಚಾತ್ರಸ್ಥಸ್ಯಾಯಯುಃ ಸ್ವವಯಸ್ಯಕಾಃ ।
ಕಾಮಚೂಡಾಮಣಿಮುಖಾ ಭಾರ್ಯಾ ವಿದ್ಯಾಧರಾಧಿಪಾಃ ॥ ೨೦೦
ಸೇಂದ್ರಾಶ್ಚ ದೇವಾ ಅಸುರಾಃ ಸಮಯಾದ್ಯಾ ಮಹರ್ಷಯಃ ।
ಶ್ರುತಶರ್ಮಾ ಸುಮೇರುಶ್ಚ ಸ ಸುವಾಸಕುಮಾರಕಃ ॥ ೨೦೧
ಸೂರ್ಯಪ್ರಭಶ್ಚ ಸರ್ವಾಂಸ್ತಾನ್ಯಥೋಚಿತಮಮಾನಯತ್ ।
ಉಕ್ತರುದ್ರಾದಿವೃತ್ತಾಂತಮಭ್ಯನಂದಂಶ್ಚ ತೇಽಪಿ ತಮ್ ॥ ೨೦೨

೨೦೩. ಬಳಿಕ ವಿವಿಧೌಷಧಿಗಳಿಂದ ಕೂಡಿದ ನದೀ ನದಗಳ ಹಾಗೂ ಸಮುದ್ರಗಳ ತೀರ್ಥವನ್ನು ಮಣಿಖಚಿತವಾದ ಕನಕಕುಂಭಗಳಲ್ಲಿ ಪ್ರಭಾಸಾದಿ ಅಸುರಶ್ರೇಷ್ಠರು ತಾವೇ ತಂದು ಅಣಿಗೊಳಿಸಿದರು.

೨೦೪. ಅಷ್ಟು ಹೊತ್ತಿಗೆ ಗೌರೀದೇವಿಯಿಂದೊಡಗೂಡಿದ ಭಗವಾನ್ ಶಿವನು ಅಲ್ಲಿ ಆಗಮಿಸಿದನು. ದೇವತೆಗಳು,ಅಸುರರು, ವಿದ್ಯಾಧರರು, ನರಪತಿಗಳು, ಮಹರ್ಷಿಗಳು ಆ ದೇವದೇವನ ಚರಣಗಳಿಗೆ ಎರಗಿದರು.

೨೦೫. ಅಲ್ಲಿ ನೆರೆದಿದ್ದ ಸುರದಾನವ ಖೇಚರರೆಲ್ಲ ಪುಣ್ಯಾಹವಾಚನ ಮಾಡುತ್ತಿರಲಾಗಿ ಮೊದಲೇ ತಂದಿಟ್ಟಿದ್ದ ಎಲ್ಲ ತೀರ್ಥಗಳಿಂದಲೂ ಋಷಿಗಳು, ಸೂರ್ಯಪ್ರಭನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ವಿದ್ಯಾಧರರಾಜ್ಯದ ಆಧಿಪತ್ಯಪ್ರಾಪ್ತಿಗಾಗಿ ಅಭಿಷೇಕವನ್ನು ಮಾಡಿದರು.

೨೦೬. ವಿಜ್ಞಾನಮಯನೇ ಆಗಿದ್ದ ಮಯಾಸುರನು ಸಂತೋಷದಿಂದ ಪಟ್ಟವನ್ನು ಕಟ್ಟಿ ಮುಕುಟವನ್ನು ತಲೆಯ ಮೇಲಿರಿಸಿದನು. ಆಗ ವರವರ್ಣಿನಿಯರಾದ ಅಪ್ಸರೆಯರ ನೃತ್ಯ ಪುರಸ್ಸರವಾಗಿ ದೇವದುಂದುಭಿಗಳೂ ನಗಾರಿಗಳೂ ದೇವಲೋಕದಲ್ಲಿ ಮೊಳಗಿದವು.

---

ಅಥ ವಿವಿಧೌಷಧಿ ಸಹಿತಂ
ನದೀನದಾಂಭೋಧಿತೀರ್ಥಸಂಭೂತಮ್ ।
ಮಣಿಕನಕಮಯೈಃ ಕುಂಭೈಃ
ಸ್ವಯಮಾನಿನ್ಯುರ್ಜಲಂ ಪ್ರಭಾಸಾದ್ಯಾಃ ॥ ೨೦೩

ತಾವದ್ಗೌರೀ ಸಹಿತೋ ಭಗವಾನತ್ರಾಯಯೌ ಪುರಾರಾತಿಃ ।
ದೇವಾಸುರವಿದ್ಯಾಧರನೃಪತಿಮಹರ್ಷಿಪ್ರಣಮ್ಯಮಾನಾಂಘ್ರಿಃ ॥ ೨೦೪

ಸರ್ವೇಷು ತೇಷು ಸುರದಾನವಖೇಚರೇಷು
ಪುಣ್ಯಾಹಘೋಷಮುಖರೇಷ್ವಖಿಲೈರ್ಜಲೈಸ್ತೈಃ ।
ಸೂರ್ಯಪ್ರಭಂ ತಮೃಷಯೋ ದ್ಯುಚರಾಧಿರಾಜ್ಯೇ
ಸಿಂಹಾಸನೇ ಸಮುಪವೇಶಿತಮಭ್ಯಷಿಂಚನ್ ॥ ೨೦೫

ಬಬಂಧ ಪಟ್ಟಂ ಮುಕುಟಂ ಚ ತಸ್ಯ ಸ
ಪ್ರಹೃಷ್ಯ ವಿಜ್ಞಾನಮಯೋ ಮಯಾಸುರಃ ।
ನನಾದ ತೂರ್ಯೈಃ ಸಹ ದೇವದುಂದುಭಿಃ
ವರಾಪ್ಸರೋನೃತ್ತಪುರಃಸ್ಸರೋ ದಿವಿ ॥ ೨೦೬

೨೦೭. ಮಹರ್ಷಿ ಸಮೂಹವು ಸೂರ್ಯ ಪ್ರಭನೊಡನೆ ಕಾಮಚೂಡಾಮಣಿಗೂ ಅಭಿಷೇಕಮಾಡಿ, ಸಮುಚಿತವಾದ ರೀತಿಯಲ್ಲಿ ಅವಳೇ ಅವನ ಮಹಾದೇವಿಯೆಂಬುದನ್ನು ಸಾರಿದರು.

೨೦೮. ನಂತರ, ತ್ರಿದಶರೂ, ಅಸುರಾಧಿಪತಿಗಳು ತಮ್ಮ ನಿವಾಸಗಳಿಗೆ ನಿರ್ಗಮಿಸಲಾಗಿ ವಿದ್ಯಾಧರ ಚಕ್ರವರ್ತಿಯಾದ ಸೂರ್ಯಪ್ರಭನು ಬಂಧುಗಳಿಂದಲೂ, ಹಿತೈಷಿಗಳಿಂದಲೂ, ಗೆಳೆಯರಿಂದಲೂ ಕೂಡಿಕೊಂಡು ಮಹಾಭಿಷೇಕವನ್ನು ನೆರವೇರಿಸಿಕೊಂಡನು.

೨೦೯. ಕೆಲವು ದಿನ ಕಳೆಯಲಾಗಿ ಹರನು ಹೇಳಿದ್ದಂತೆ ಉತ್ತರ ವೇದ್ಯರ್ಧವನ್ನು ಶ್ರುತಶರ್ಮನಿಗೆ ಕೊಟ್ಟನು. ನಂತರ ಇನ್ನೂ ಅನೇಕ ಪ್ರಿಯ ಪತ್ನಿಯರನ್ನು ಪಡೆದು ಬಹುಕಾಲ ಖೇಚರ ರಾಜ್ಯಲಕ್ಷ್ಮಿಯನ್ನು ಗೆಳೆಯರೊಡಗೂಡಿ ಅನುಭವಿಸಿದನು.

೨೧೦–೨೧೧. ಹೀಗೆ ಹರ ಪ್ರಸಾದದಿಂದಲೂ, ಪ್ರಭಾವದಿಂದಲೂ ಮನುಷ್ಯನಾದ ಸೂರ್ಯಪ್ರಭನೂ ಕೂಡ ವಿದ್ಯಾಧರ ಚಕ್ರವರ್ತಿಯಾದನು ಎಂಬ ಕಥೆಯನ್ನು ವಜ್ರಪ್ರಭನು ವತ್ಸರಾಜನ ಮುಂದೆ ಹೇಳಿ ಅವನಿಗೂ ನರವಾಹನದತ್ತನಿಗೂ ನಮಸ್ಕರಿಸಿ ಆಕಾಶಕ್ಕೆ ಹಾರಿದನು.

---

ತಾಂ ಚ ಮಹರ್ಷಿಸಮೂಹಃ ಸಕಾಮಚೂಡಾಮಣಿಂ ಸಮಭಿಷಿಚ್ಯ ।
ಸೂರ್ಯಪ್ರಭಸ್ಯ ವಿದಧೇ ತಸ್ಯ ಸಮುಚಿತಾಂ ಮಹಾದೇವೀಮ್ ॥ ೨೦೭

ತತೋ ಗತೇಷು ತ್ರಿದಶಾಸುರೇಷು
ಸೂರ್ಯಪ್ರಭೋ ಬಂಧುಸುಹೃದ್ವಯಸ್ಯೈಃ ।
ಸಹಾತ್ರ ವಿದ್ಯಾಧರ ಚಕ್ರವರ್ತೀ
ಮಹಾಭಿಷೇಕೋತ್ಸವಮಾತತಾನ ॥ ೨೦೮

ದಿನೈಶ್ಚ ವೇದ್ಯರ್ಧಕಮುತ್ತರಂ ತತ್
ದತ್ವಾ ಹರೋಕ್ತ್ಯಾ ಶ್ರುತಶರ್ಮಣೇ ಸಃ ।
ಅನ್ಯಾಃ ಪ್ರಿಯಾಃ ಪ್ರಾಪ್ಯ ಸಮಂ ವಯಸ್ಯೈಃ
ಭೇಜೇ ಚಿರಂ ಖೇಚರರಾಜಲಕ್ಷ್ಮೀಮ್ ॥ ೨೦೯

ಏವಂ ಹರಪ್ರಸಾದಪ್ರಭಾವತಃ ಪ್ರಾಪಿ ಮಾನುಷೇಣಾಪಿ ।
ಸೂರ್ಯಪ್ರಭೇಣ ಪೂರ್ವಂ ವಿದ್ಯಾಧರಚಕ್ರವರ್ತಿತ್ವಮ್ ॥ ೨೧೦

ಇತಿ ವಿದ್ಯಾಧರಧುರ್ಯೋ ವ್ಯಾಖ್ಯಾಯ ಕಥಾಂ ಸ ವತ್ಸರಾಜಾಗ್ರೇ ।
ವಜ್ರಪ್ರಭಃ ಪ್ರಣಮ್ಯ ಚ ನರವಾಹನದತ್ತಮುದ್ಯಯೌ ಗಗನಮ್ ॥ ೨೧೧

೨೧೨. ಹೀಗೆ, ಅವನು ಹೋದ ಮೇಲೆ ನರವಾಹನದತ್ತನು ತನ್ನ ದೇವಿಯಾದ ಮದನ ಮಂಚುಕೆಯೊಡನೆ ಕೂಡಿ ವಿದ್ಯಾಧರೇಂದ್ರ ಪದವಿಯನ್ನು ಎದುರು ನೋಡುತ್ತ ತಂದೆಯಾದ ವತ್ಸೇಶ್ವರನ ಮನೆಯಲ್ಲೇ ಉಳಿದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಸೂರ್ಯಪ್ರಭಲಂಬಕದಲ್ಲಿ ಏಳನೆಯ ತರಂಗವು ಮುಗಿಯಿತು.

ಎಂಟನೆಯದಾದ ಸೂರ್ಯಪ್ರಭಲಂಬಕವು ಮುಗಿಯಿತು.

---

ತಸ್ಮಿನ್ ಗತೇ ಚ ನರವಾಹನದತ್ತದೇವೋ
ದೇವ್ಯಾ ಸ್ವಯಾ ಮದನಮಂಚುಕಯಾ ಸಮೇತಃ ।
ವತ್ಸೇಶ್ವರಸ್ಯ ಪಿತುರಾಸ್ತ ಗೃಹೇ ಸ ವೀರೋ
ವಿದ್ಯಾಧರೇಂದ್ರಪದಲಾಭಮುದೀಕ್ಷಮಾಣಃ ॥ ೨೧೨

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಸೂರ್ಯಪ್ರಭಲಂಬಕೇ ಸಪ್ತಮಸ್ತರಂಗಃ

ಸಮಾಪ್ತಶ್ಚಾಯಂ ಸೂರ್ಯಪ್ರಭಾಲಂಬಕಃ ಅಷ್ಟಮಃ

❖❖❖